# DOCTRINES

OF THE

# CHRISTIAN RELIGION

TRANSLATED INTO CANARESE FROM THE GERMAN OF J. H. KURTZ

SECOND EDITION

# ಕ್ರೈಸ್ತಧರ್ಮಬೋಧನೆ

ಸುವಾರ್ತಾಪಕ್ಷದ

ಬೋಧಕಗ್ರಹಿಕೆಗೆ ಅನುಕೂಲವಾದ್ದು

ಯೋ. ಹೈ. ಕುರ್ಚನು ಮಾಡಿದ್ದು



MANGALORE
PUBLISHED BY PFLEIDERER & RIEHM
BASEL MISSION BOOK & TRACT DEPOSITORY
1867

# DOCTRINES

OF THE

# CHRISTIAN RELIGION

TRANSLATED INTO CANARESE FROM THE GERMAN OF J. H. KURTZ

SECOND EDITION

# ಕ್ರೈಸ್ತಧರ್ಮಬೋಧನೆ

ಸುವಾರ್ತಾಪಕ್ಷದ

ಬೋಧಕಗ್ರಹಿಕೆಗೆ ಅನುಕೂಲವಾದ್ದು

ಯೊ. ಹೈ. ಕುರ್ಜನು ಮಾಡಿದ್ದು






MANGALORE
PRINTED BY PLEBST & STOLZ, BASEL MISSION PRESS
1867 

“ಕರ್ತನಾದ ದೇವರನ್ನು ನಿಮ್ಮ ಹೃದಯಗಳಲ್ಲಿ ಪರಿಶುದ್ಧ ಮಾಡಿ, ನಿಮ್ಮಲ್ಲಿರುವ ನಿರೀಕ್ಷೆಯ ಕಾರಣವನ್ನು ನಿಮ್ಮನ್ನು ಕೇಳುವವರೆಲ್ಲರಿಗೆ ಯಾವಾಗಲೂ ಸಾತ್ವಿಕತ್ವದಿಂದಲೂ ಭಯದಿಂದಲೂ ಪ್ರತ್ಯುತ್ತರ ಕೊಡುವದಕ್ಕೆ ಸಿದ್ಧವಾಗಿರ್ರಿ.” (೧ ಪೇತ್ರ. ೩, ೧೫.)

# ಕ್ರೈಸ್ತಧರ್ಮಬೋಧನೆ.

## ಪೀಠಿಕೆ.

ದೇವರ ಸಂಗಡ ಮನುಷ್ಯನ ಸಂಸರ್ಗವೆ ಧರ್ಮದ ಸತ್ವವು. ಮತ್ತು ಮನುಷ್ಯನು ದೇವರ ಪರಿಶುದ್ಧತ್ವ ಮಹಿಮೆ ಭಾಗ್ಯಗಳಲ್ಲಿ ಅಂಶಿಯಾಗುವದೆ ಆ ಸಂಸರ್ಗದ ಉದ್ದೇಶ್ಯ. ಈ ಸಂಸರ್ಗಕ್ಕೋಸ್ಕರ ಮನುಷ್ಯನು ನಿರ್ಮಿಸಲ್ಪಟ್ಟಿದ್ದಾನೆ, ನಿಶ್ಚೈಸಲ್ಪಟ್ಟಿದ್ದಾನೆ. ದೇವರ ಸಂಗಡ ಸಂಸರ್ಗವು ತನಗೆ ಸ್ಥಿರವಾಗುವ ಮಟ್ಟಿಗೂ, ನಿಜವಾಗಿ ವಿಶ್ರಾಂತಿಯನ್ನೂ ಸಮಾಧಾನವನ್ನೂ ಹೊಂದದಂಥಾ ನಮ್ಮ ಹೃದಯದಲ್ಲಿ ಕೂಗುವ ಅಪೇಕ್ಷೆ ಅಭಿಲಾಷೆಗಳ ಬಲವಾದ ಶಬ್ದವೆ ಮೇಲೆ ಹೇಳಿದರ ಸತ್ಯತ್ವಕ್ಕೆ ಸಾಕ್ಷಿ. ಆದರೆ ಅದೇ ಶಬ್ದವು, ಮನುಷ್ಯನು ದೇವರ ಆದಿ ಸಂಸರ್ಗದಲ್ಲಿ ನಿಂತಿರುವದಿಲ್ಲವೆಂಬದಕ್ಕೆ ಸಹಾ ಸಾಕ್ಷಿ ಕೊಡುತ್ತದೆ; ಮತ್ತು ಈ ಭೇದಕ್ಕೆ ಮನುಷ್ಯನ ಪಾಪಿತ್ವವೆ ಮೂಲವೂ ಕಾರಣವೂ ಆಗಿರುತ್ತದೆಂಬದು ನಮ್ಮ ಶೋಧವಿಚಾರಕ್ಕೆ ಬೇಗನೆ ತಿಳಿಯ ಬರುವದು. ಈ ಮೇರೆಗೆ ವ್ಯಕ್ತವಾಗಿ ಹೇಳುವದಾದರೆ, ಪಾಪದಿಂದ ಹರಿದು ಹೋದ ದೇವಸಂಸರ್ಗದ ಪುನಃಸ್ಥಾಪನೆಯೆ ಧರ್ಮ.

೨. ಈ ಪುನಃಸ್ಥಾಪನೆಯನ್ನು ಇಚ್ಛೈಸಿದರೂ, ತಕ್ಕ ಉಪಾಯಗಳೂ ಮಾರ್ಗವೂ ಇಲ್ಲದಿರಲಾಗಿ, ಅದನ್ನು ಪಡಕೊಂಡು ಮುಂದಿಡ ಕೂಡದ ಪ್ರತಿ ಧರ್ಮವು ಅಸತ್ಯ ಧರ್ಮ. ಪುನಃಸ್ಥಾಪನೆಯನ್ನು ಇಚ್ಛೈಸುವದಲ್ಲದೆ, ಪೂರ್ಣವಾಗಿಯೂ ಸಾಂಗೋಪಾಂಗವಾಗಿಯೂ ಅದನ್ನು ಪಡಕೊಂಡು ಸಹಾ ಇರುವ ಧರ್ಮವೆ ಸತ್ಯವಾದ ಸಂಪೂರ್ಣ ಧರ್ಮ. ಕ್ರೈಸ್ತಧರ್ಮವು ಅಂಥಾದ್ದಾಗಿ ನಮಗೆ ಕಾಣಿಸಿ ಕೊಳ್ಳುತ್ತದೆ; ಹ್ಯಾಗಂದರೆ, ದೇವರು ಕ್ರಿಸ್ತನಲ್ಲಿ ಮನುಷ್ಯಾವತಾರ ಧರಿಸಿದರಿಂದ ಈ ಪುನಃಸ್ಥಾಪನೆಯು ಪೂರ್ಣವಾಗಿ ಫಳಿಸಲಾಯಿತು.

ಪರಿಶಿಷ್ಟ. ಕ್ರೈಸ್ತ ಧರ್ಮಕ್ಕೆ ಪೂರ್ವವಾದ ಯೆಹೂದ್ಯತನವು ಕ್ರೈಸ್ತತನಕ್ಕೆ ಅಂಗಳದೋಪಾದಿಯಲ್ಲಿ ಇರುವದರಿಂದ, ಅದು ಸತ್ಯಧರ್ಮ ಸರಿ, ಆದರೆ ಸಂಪೂರ್ಣವಾದದ್ದು ಅಲ್ಲಾ. ಈ ಪ್ರಕಾರ ಯೆಹೂದ್ಯತನವೂ ಕ್ರೈಸ್ತತನವೂ ಒಂದೂಕ್ಕೊಂದು ಶೀರಾ ಪ್ರತಿಕೂಲವಾಗಿರುವದಿಲ್ಲಾ, ತಾರತಮ್ಯಾನುಸಾರದಿಂದ ಮಾತ್ರವೇ ಹೂವಿಗೆ ಫಲ ಹ್ಯಾಗೋ ಹಾಗೆ.

೩. ಕ್ರಿಸ್ತನ ಪರಿಮುಖವಾಗಿ ದೇವರ ಸಂಗಡ ಉಂಟಾದ ಅನ್ಯೋನ್ಯದ ಸ್ವಭಾವವನ್ನೂ, ಕರಣಗಳನ್ನೂ ಸಹೇತುಗಳನ್ನೂ ಕುರಿತು ನಮಗೆ ಕಲಿಸುವದೇ ಕ್ರೈಸ್ತಧರ್ಮಬೋಧನೆಯ ಉದ್ಯೋಗ. ಬೋಧವಾಕ್ಯಗಳನ್ನು ಮೊಗಿಯುವದಕ್ಕೆ ಅದರ ಬುಗ್ಗೆಯು ಮನುಷ್ಯಬುದ್ಧಿ ಅಲ್ಲಾ, ಕ್ರೈಸ್ತಧರ್ಮದ ಶಾಸನಗಳ ನಿಕ್ಷೇಪವಾಗಿರುವ ಪರಿಶುದ್ಧ ಬರಹವು ಮಾತ್ರವೇ ಸೈ. ಯಾಕಂದರೆ, ಕ್ರೈಸ್ತತನವು ಇತಿಹಾಸ ಧರ್ಮವಾಗಿರಲಾಗಿ, ಮನುಷ್ಯ ಬುದ್ಧಿಯು ತನ್ನಿಂದ ತಾನೇ ಹುಟ್ಟಿಸ ಕೂಡದಾದ ನಡದ ಕಾರ್ಯಗಳಲ್ಲಿ ನೆಲೆಗೊಂಡದೆ. ಆದರೂ, ನಾವು ಪರಿಶುದ್ಧ ಬರಹದ ತಾತ್ಪರ್ಯವನ್ನು ಗ್ರಹಿಸಿ, ಸ್ವಚ್ಛವಾದಂಥಾ ಸಾಕಲ್ಯವಾದಂಥಾ ಏಕವತ್ತಾದಂಥಾ ತಿಳುವಿಕೆಗೆ ಮುಟ್ಟ ಬೇಕಾದರೆ ಬುದ್ಧಿಯು ಕರಣವಾಗಿರುತ್ತದೆ.

೪. ಪರಿಶುದ್ಧ ಬರಹದ ಪುಸ್ತಕಗಳು ಬೇರೆ ಬೇರೆ ಕಾಲಗಳಲ್ಲಿಯೂ ಬೇರೆ ಬೇರೆ ಕರ್ತೃಗಳಿಂದಲೂ ಉಂಟಾದವು. ಎಲ್ಲವುಗಳಲ್ಲಿಯೂ ಇರುವ ತಾತ್ಪರ್ಯವು ಒಟ್ಟಾರೆ ರಕ್ಷಣೆಯೆ, ಹಾಗಂದರೆ, ದೈವಾನ್ಯೋನ್ಯವನ್ನು ಪುನಃಸ್ಥಾಪಿಸುವದರಿಂದ ಮನುಷ್ಯ ಸಂತತಿಗಾಗುವ ವಿಮೋಚನೆಯೂ ಭಾಗ್ಯಕರಣವೂ. ಪರಿಶುದ್ಧಬರಹದಲ್ಲಿ ಇರುವಂಥಾದ್ದು ಇತಿಹಾಸವಾಗಿಯೂ ಬೋಧನೆಯಾಗಿಯೂ, ಮತ್ತು ಬೋಧನೆಯು ನಿಯಮವಾಗಿಯೂ ಸುವಾರ್ತೆಯಾಗಿಯೂ ವಿಭಾಗವಾಗುತ್ತದೆ. (ಸುವಾರ್ತೆಯಂದರೆ, ಮುಂದೆ ಸಂಭವಿಸ ತಕ್ಕಂಥಾ ಅಥವಾ ಆಗಲೆ ಸಂಭವಿಸಿದಂಥಾ ಒಳ್ಳೇ ಸಂಗತಿಗಳ ಪ್ರಸಂಗ). ನಿಯಮವು, ದೇವರು ಮನುಷ್ಯನಿಂದ ಏನು ಕೇಳುತ್ತಾನೆಂಬದನ್ನು ತೋರಿಸುತ್ತದೆ. ಸುವಾರ್ತೆಯು, ದೇವರು ಮನುಷ್ಯನಿಗೆ ಏನು ಕೊಡುತ್ತಾನೆ, ಇಲ್ಲವೆ ಕೊಡಲಿಚ್ಛೈಸುತ್ತಾನೆ ಎಂಬದನ್ನು ತೋರಿಸುತ್ತದೆ.

೫. ಪರಿಶುದ್ಧಬರಹವು ಕಾಲ ಗ್ರಂಥ ತಾತ್ಪರ್ಯಗಳ ಭೇದದಿಂದ ಎರಡು ದೊಡ್ಡ ಭಾಗಗಳಾಗುತ್ತದೆ. ದೇವರು ಕ್ರಿಸ್ತನಲ್ಲಿ ಮನುಷ್ಯನಾದ್ದು ಅವುಗಳ ಮಧ್ಯದಲ್ಲಿ ಬರುತ್ತದೆ.

ಈ ಭಾಗಗಳು ಹಳೆ ಮತ್ತು ಹೊಸ ಒಡಂಬಡಿಕೆ. ಮೊದಲನೆಯದರಲ್ಲಿ ಹಳೆ ಒಡಂಬಡಿಕೆಯ, ಅಂದರೆ, ರಕ್ಷಣೆಯನ್ನು ಸಿದ್ಧ ಮಾಡುವದಕ್ಕಾಗಿಯೂ ಸರಾಗ ಮಾಡುವದಕ್ಕಾಗಿಯೂ ದೇವರು ಅಬ್ರಹಾಮನ ಮತ್ತು ಅವನ ಸಂತತಿಯ ಸಂಗಡ ಮಾಡಿದ ಒಡಂಬಡಿಕೆಯ ಶಾಸನಗಳು ಅವೆ. ಹೊಸ ಒಡಂಬಡಿಕೆಯಲ್ಲಿ ದೇವರು, ಕ್ರಿಸ್ತನಲ್ಲಿ ಸಿದ್ಧ ಮಾಡಿದ ರಕ್ಷಣೆಯ ಆಧಾರದಿಂದ, ರಕ್ಷಣೆಯ ಸ್ವೀಕಾರಕ್ಕೋಸ್ಕರವೂ ಸಂಪ್ರದಾನಕ್ಕೋಸ್ಕರವೂ, ಎಲ್ಲಾ ಜನಾಂಗಗಳ ಸಂಗಡ ಮಾಡಿದ ಹೊಸ ಒಡಂಬಡಿಕೆಯ ಶಾಸನಗಳು ಅವೆ.

ಪರಿಶಿ. ಹಳೆ ಒಡಂಬಡಿಕೆಯ ಮತ್ತು ಹೊಸ ಒಡಂಬಡಿಕೆಯ ಪುಸ್ತಕಗಳ ಸಂಗ್ರಹಕ್ಕೆ ನಿರ್ಣಯ (ಕಾನೊನ್) ಎಂಬ ಹೆಸರುಂಟು. ಯಾಕಂದರೆ, ಅದರಲ್ಲಿರುವ ತಾತ್ಪರ್ಯವು ಎಲ್ಲಾ ಕ್ರೈಸ್ತವಿಶ್ವಾಸಕ್ಕೂ ಜೀವನಕ್ಕೂ ದೈವನಿರ್ಣಯವಾಗಿರುತ್ತದೆ. ಹಳೆ ಒಡಂಬಡಿಕೆಯ ನಿರ್ಣಯದಲ್ಲಿ ಕೆಳಗೆ ಬರುವ ಪುಸ್ತಕಗಳು ಉಂಟು. I. ಹಳೆ ಒಡಂಬಡಿಕೆಯ ಅಸ್ತಿವಾರದ ಶಾಸನಗಳು, ಯಾವವಂದರೆ: ೧. ಉತ್ಪತ್ತಿ; ೨. ಹೊರಡೋಣ; ೩. ಲೇವಿಕ, ಅಂದರೆ, ಯಾಜಕ ಪುಸ್ತಕ; ೪. ಅಂಕೆಗಳು; ೫. ದ್ವಿತೀಯನ್ಯಾಯ. II. ಹಳೆ ಒಡಂಬಡಿಕೆಯ ಇತಿಹಾಸದ ಶಾಸನಗಳು: ೧. ಯೆಹೋಷುವ; ೨. ನ್ಯಾಯಾಧಿಪತಿಗಳು; ೩. ರೂಥ; ೪. ಸಮುವೇಲನ ಎರಡು ಪುಸ್ತಕಗಳು; ೫. ಅರಸುಗಳ ಎರಡು ಪುಸ್ತಕಗಳು; ೬. ದಿನಚರ್ಯೆಗಳ ಎರಡು ಪುಸ್ತಕಗಳು; ೭. ಎಜ್ರ; ೮. ನೆಹೆಮೀಯ; ೯. ಎಸ್ತೇರಳು. III. ಹಳೆ ಒಡಂಬಡಿಕೆಯ ವಿಶ್ವಾಸಿಗಳ ಆತ್ಮಜೀವಕ್ಕೆ ದೃಷ್ಟಾಂತವಾದ ಶಾಸನಗಳು: ೧. ಯೋಬ; ೨. ಕೀರ್ತನೆಗಳು; ೩. ಸಾಮತಿಗಳು; ೪. ಪ್ರಸಂಗಿ; ೫. ಗೀತ. IV. ಹಳೆ ಒಡಂಬಡಿಕೆಯ ಪ್ರವಾದನೆಯ ಶಾಸನಗಳು: ಅ. ೧. ಯೆಶಾಯ; ೨. ಯೆರೆಮೀಯ; (ಪ್ರವಾದನೆ, — ಗೋಳಾಟಗಳು); ೩. ಯೆಜೇಕಿಯೇಲ; ೪. ದಾನಿಯೇಲ. ಇ. ೧. ಹೋಶೇಯ; ೨. ಯೋವೇಲ್; ೩. ಆಮೋಸ; ೪. ಒಬದೀಯ; ೫. ಯೋನ; ೬. ಮೀಕ; ೭. ನಹೂಮ; ೮. ಹಬಕೂಕ; ೯. ಜೆಫನೀಯ; ೧೦. ಹಗ್ಗಾಯ; ೧೧. ಜೆಕರೀಯ; ೧೨. ಮಲಕೀಯ. ಹೊಸ ಒಡಂಬಡಿಕೆಯ ನಿರ್ಣಯದಲ್ಲಿ ಕೆಳಗೆ ಬರುವ ಪುಸ್ತಕಗಳು ಉಂಟು. I. ಹೊಸ ಒಡಂಬಡಿಕೆಯ ಅಸ್ತಿವಾರದ ಶಾಸನಗಳು, ಅಂದರೆ, ಮತ್ತಾಯ, ಮಾರ್ಕ, ಲೂಕ, ಯೋಹಾನ ಎಂಬ ನಾಲ್ಕು ಸುವಾರ್ತೆಗಳು. II. ಹೊಸ ಒಡಂಬಡಿಕೆಯ ಇತಿಹಾಸದ ಶಾಸನ, ಅದೇ ಅಪೊಸ್ತಲರ ಕ್ರಿಯೆಗಳು. III. ಹೊಸ ಒಡಂಬಡಿಕೆಯಲ್ಲಿ ನಡದ ಬೋಧನೆ ಜೀವನಗಳ ಶಾಸನಗಳು. ಅ. ಅಪೊಸ್ತಲ ಪೌಲನ ಪತ್ರಿಕೆಗಳು: ೧. ರೋಮಾಯರ ಪತ್ರಿಕೆ; ೨. ಕೊರಿಂಥಿಯರ ಎರಡು ಪತ್ರಿಕೆಗಳು; ೩. ಗಲಾತ್ಯರ ಪತ್ರಿಕೆ; ೪. ಎಫೆಸಿಯರದು; ೫. ಫಿಲಿಪ್ಪಿಯರದು; ೬. ಕೊಲೊಸ್ಸೆಯರದು; ೭. ಥೆಸ್ಸಲೊನೀಕ್ಯರ ಎರಡು

ಪತ್ರಿಕೆಗಳು; ೮. ತಿಮೊಥೆಯನ ಎರಡು ಪತ್ರಿಕೆಗಳು; ೯. ತೀತನ ಪತ್ರಿಕೆ; ೧೦. ಫಿಲೆಮೋನನ ಪತ್ರಿಕೆ. ಇ. ಸರ್ವಪತ್ರಿಕೆಗಳು (ಇವುಗಳು ಒಂದೊಂದು ಪ್ರತ್ಯೇಕವಾದ ಸಭೆಗೆ ಅಲ್ಲಾ, ಎಲ್ಲಾ ಕ್ರೈಸ್ತರಿಗೆಂದು ಬರದ್ದಾಗಿರುತ್ತಾವೆ.) ೧. ಇಬ್ರಿಯರ ಪತ್ರಿಕೆ; ೨. ಪೇತ್ರನ ಎರಡು ಪತ್ರಿಕೆಗಳು; ೩. ಯೋಹಾನನ ಮೂರು ಪತ್ರಿಕೆಗಳು; ೪. ಯಾಕೋಬನ ಪತ್ರಿಕೆ; ೫. ಯೂದನ ಪತ್ರಿಕೆ. IV. ಪ್ರವಾದನೆಯ ಶಾಸನ ಒಂದು, ಅದೇ ಪ್ರಕಟಣೆ.

**೬.** ಪರಿಶುದ್ಧ ಬರಹವು ಮನುಷ್ಯರಿಂದಲೂ ಮನುಷ್ಯರಿಗೋಸ್ಕರವೂ ಬರಿಯಲ್ಪಟ್ಟಿತು. ಮನುಷ್ಯರೆ ಅದನ್ನು ಕೂಡಿಸಿ ಪಾರಂಪರ್ಯವಾಗಿ ಕಾಪಾಡಿ ಕೊಂಡು ಬಂದರು. ಆದರೂ ಅದು ಪೂರ್ಣ ನ್ಯಾಯವಾಗಿ ದೇವರ ವಾಕ್ಯವು ಎಂಬ ಹೆಸರಿಗೆ ಯೋಗ್ಯವಾಗಿರುತ್ತದೆ. ಹ್ಯಾಗಂದರೆ, ದೇವರ ಪರಿಶುದ್ಧರು (ಪ್ರವಾದಿಗಳೂ ಅಪೊಸ್ತಲರೂ) ಬರಿಯುವಾಗ್ಯೆ, ಅದರಲ್ಲಿ ತಮ್ಮ ಮನುಷ್ಯಜ್ಞಾನವನ್ನು ಬರದಿಡಲಿಲ್ಲಾ, ದೇವರ ಆತ್ಮವು, ಬೇರೆ ಕರಣವಿಲ್ಲದೆ, ತಾನೆ ಅವರ ಮನಸ್ಸಿನಲ್ಲಿ ಪ್ರಕಾಶೀಕರಣದಿಂದ ಉಂಟು ಮಾಡಿದಂಥಾ ಜ್ಞಾನವನ್ನೆ ಬರದಿಟ್ಟರು. ಕ್ರೈಸ್ತಧರ್ಮದ ಶಾಸನಗಳ ರಚನೆಯು ಎಲ್ಲಾ ಕ್ರೈಸ್ತ ತಿಳುವಿಕೆಗೆ ತಪ್ಪಿಲ್ಲದ ಬುಗ್ಗೆಯೂ, ಎಲ್ಲಾ ಕ್ರೈಸ್ತ ವಿಶ್ವಾಸಕ್ಕೂ ಜೀವಕ್ಕೂ ನಿರುಪಾಧಿಕವಾದ ಸೂತ್ರವೂ ಆಗಿರ ಬೇಕಾದ ಮೇಲೆ, ಮನುಷ್ಯರಿಂದ ಉಂಟಾಗುವ ಭ್ರಮೆಗಳು ಬಾರದ ಹಾಗೆಯೂ ದಿವ್ಯ ಸತ್ಯವನ್ನು ಪೂರ್ಣವಾಗಿ ಕೊರತೆ ಇಲ್ಲದೆ ಮುಂದಿಡುವ ಹಾಗೆಯೂ, ಪರಿಶುದ್ಧಾತ್ಮದ ಅನ್ಯ ಕರಣವಿಲ್ಲದ ಅಧ್ಯಕ್ಷತನಕ್ಕೂ ಸಹಪ್ರಯತ್ನಕ್ಕೂ ಒಳಗಾಗ ಬೇಕಾಯಿತು. ಮತ್ತು ಯಾವ ಆತ್ಮದ ಜಾಗ್ರತೆಯಿಂದ ರಕ್ಷಣೆಯ ಸಾರೋಣ ತಿಳುವಿಕೆಗಳ ಅಚಂಚಲ ಅಸ್ತಿವಾರವಾಗಿ ಪರಿಶುದ್ಧ ಬರಹವು ಬರುವ ಎಲ್ಲಾ ಶತಮಾನಗಳಿಗೋಸ್ಕರ ಉಂಟಾಯಿತೊ ಅದೇ ಆತ್ಮವು ಮನುಷ್ಯರಿಗೆ ಅದನ್ನು ಸುಳ್ಳು ಇಲ್ಲದ್ದಾಗಿಯೂ ಕಡಮೆ ಆಗದ್ದಾಗಿಯೂ ಕಾಪಾಡಲೂ ಬೇಕಾಯಿತು[೧]. ಈ ವಿಷಯವು ಹಳೆ ಒಡಂಬಡಿಕೆಗೂ[೨] ಹೊಸ ಒಡಂಬಡಿಕೆಗೂ[೩] ಒಂದೇ. (ಸಮ ನೋಡು **೨೬೪** ಮತ್ತು **೩೦೯**).

೧) "ನಿಮ್ಮ ವಿಶ್ವಾಸವು ಮನುಷ್ಯಜ್ಞಾನದಲ್ಲಿ ಅಲ್ಲ, ದೇವರ ಬಲದಲ್ಲಿ ಇರುವ ಹಾಗೆ." (೧ಕೊರಿ. ೨, ೪.)

೨) "ಪ್ರವಾದನೆಯು ಎಂದೂ ಮನುಷ್ಯನ ಇಚ್ಛೆಯಿಂದ ಆಗಲಿಲ್ಲ. ಆದರೆ ದೇವರ ಪರಿಶುದ್ಧ ಮನುಷ್ಯರು, ಪರಿಶುದ್ಧಾತ್ಮದಿಂದ ಪ್ರೇರೇಪಿಸಲ್ಪಟ್ಟು, ಮಾತಾಡಿದರು." (೨ ಪೇತ್ರ. ೧, ೨೧.) "ಬರಹವೆಲ್ಲಾ ದೈವ ಪ್ರೇರಿತವಾದದ್ದು." (೨ತಿಮೊ. ೩, ೧೬.) ಇತ್ಯಾದಿ. (**೩೦೯.** ೧).

೩) "ಮಾತಾಡುವವರು ನೀವಲ್ಲ, ನಿಮ್ಮೊಳಗೆ ಮಾತಾಡುವ ನಿಮ್ಮ ತಂದೆಯ ಆತ್ಮವೇ." (ಮತ್ತಾ. ೧೦, ೨೦.) "ಆದರೆ ತಂದೆಯು ನನ್ನ ಹೆಸರಿನಲ್ಲಿ ಕಳುಹಿಸುವ ಪರಿಶುದ್ಧಾತ್ಮವೆಂಬ ಆದರಿಕನು ತಾನೇ ಎಲ್ಲವುಗಳನ್ನು ನಿಮಗೆ ಬೋಧಿಸಿ, ನಾನು ನಿಮಗೆ ಹೇಳಿದವುಗಳನ್ನೆಲ್ಲಾ ನಿಮಗೆ ಜ್ಞಾಪಕ ಮಾಡುವನು." (ಯೋಹಾ. ೧೪, ೨೬.) "ಆದರೆ ಸತ್ಯದ ಆತ್ಮವೆಂಬವನು ಬಂದಾಗ, ಅವನು ನಿಮ್ಮನ್ನು ಎಲ್ಲಾ ಸತ್ಯದಲ್ಲಿ ಶೇರಿಸುವನು." (ಯೋಹಾ. ೧೬, ೧೩.) "ಆದರೆ ಸಹೋದರರೇ, ನನ್ನಿಂದ ಪ್ರಸಂಗಿಸಲ್ಪಟ್ಟ ಸುವಾರ್ತೆಯನ್ನು ಮನುಷ್ಯನ ಪ್ರಕಾರವಲ್ಲದ್ದೆಂದು, ನಿಮಗೆ ತಿಳಿಸುತ್ತೇನೆ. ಯಾಕಂದರೆ ನಾನು ಮನುಷ್ಯನಿಂದ ಅದನ್ನು ಹೊಂದಲೂ ಬೋಧಿಸಲ್ಪಡಲೂ ಇಲ್ಲ, ಯೇಸು ಕ್ರಿಸ್ತನ ಪ್ರಕಟಣೆಯಿಂದಲೇ." (ಗಲಾ. ೧, ೧೧. ೧೨.) "ಆದರೆ ದೇವರು ಅವುಗಳನ್ನು ತನ್ನ ಆತ್ಮದಿಂದ ನಮಗೆ ಪ್ರಕಟ ಮಾಡಿದ್ದಾನೆ. ಯಾಕಂದರೆ ಆತ್ಮವು ಎಲ್ಲವುಗಳನ್ನು ಶೋಧಿಸುತ್ತದೆ, ದೇವರ ಅಗಾಧಗಳನ್ನು ಸಹಾ. ಹ್ಯಾಗಂದರೆ, ಮನುಷ್ಯನವುಗಳನ್ನು ಅವನಲ್ಲಿರುವ ಮನುಷ್ಯಾತ್ಮವೇ ಹೊರ್ತು, ಮನುಷ್ಯರಲ್ಲಿ ಯಾವನು ತಿಳಿಯುತ್ತಾನೆ? ಹಾಗೆಯೇ ದೇವರವುಗಳನ್ನು ದೇವಾತ್ಮವೇ ಹೊರ್ತು, ಯಾವನಾದರೂ ತಿಳಿಯನು. ಆದರೆ ನಾವು ದೇವರಿಂದ ನಮಗೆ ದಯ ಮಾಡಲ್ಪಟ್ಟವುಗಳನ್ನು ತಿಳಿಯುವ ಹಾಗೆ, ಲೋಕದ ಆತ್ಮವನ್ನಲ್ಲ, ದೇವರಿಂದಾದ ಆತ್ಮವನ್ನು ಹೊಂದಿದ್ದೇವೆ. ಮತ್ತು ಇವುಗಳನ್ನು ಮನುಷ್ಯನ ಜ್ಞಾನವು ಬೋಧಿಸಿದ ವಾಕ್ಯಗಳಿಂದಲ್ಲ, ಪರಿಶುದ್ಧಾತ್ಮವು ಬೋಧಿಸಿದವುಗಳಿಂದಲೇ." (೧ ಕೊರಿ. ೨, ೧೦—೧೩.)

**೭.** ನಮ್ಮ ಧರ್ಮಬೋಧನೆಯು ಕ್ರೈಸ್ತವಾದದ್ದು ಮಾತ್ರವಲ್ಲಾ, ನಾವು ಸುವಾರ್ತಾಪಕ್ಷದ ಸಭೆಗೆ ಶೇರಿದವರಾಗಿರಲಾಗಿ, ಸುವಾರ್ತಾಪಕ್ಷದ ಸಭೆಯ ಬೋಧಗ್ರಹಿಕೆಗೆ ಸಹಾ ಅನುಕೂಲವಾಗಿ ಇರ ಬೇಕು. ಇದು ಸಭೆಯ ವಿಶ್ವಾಸ ಪುಸ್ತಕಗಳಲ್ಲಿ ಮುಂದಿಟ್ಟದೆ (**೨೮೮**). ಇವುಗಳು ತಿಳುವಿಕೆಗೆ ಬುಗ್ಗೆಯಲ್ಲಾ; ತಿಳಕೊಂಡ ಸತ್ಯವನ್ನು ಕುರಿತು, ಅಥವಾ ದೇವರ ವಾಕ್ಯದಲ್ಲಿರುವ ಬೋಧನೆಗಳು (**೨೦೯.** ಪರಿಶಿ.) ಪರಿಶುದ್ಧಾತ್ಮದ (ಕರಣ ಸಹಿತವಾದ) ಪ್ರಕಾಶೀಕರಣದಿಂದ (**೨೭೦**) ಮುಂದೆ ಮುಂದೆ ವಿಕಸಿತವಾಗಲಾಗಿ, ಆ ದಿವ್ಯ ವಾಕ್ಯದಿಂದ ಸುವಾರ್ತಾಪಕ್ಷದ ಸಭೆಯು ಪಡಕೊಂಡಂಥಾ ರಕ್ಷಣೆಯ ಸತ್ಯದ ತಿಳುವಿಕೆಯನ್ನು ಕುರಿತು ಸಾಕ್ಷಿಯೂ ತಿಳಿಸೋಣವೂ ಆಗಿರುತ್ತದೆ.

ಪರಿಶಿ. ವಿಶ್ವಾಸ ಪುಸ್ತಕಗಳು ಎರಡು ವಿಧ: ಸರ್ವಸಭೆಯವು, ಪ್ರತ್ಯೇಕ ಸಭೆಯವು. ಮೊದಲನೆಯವು ಎಲ್ಲಾ ಕ್ರೈಸ್ತಸಭೆಗಳಿಗೆ ಹುದುವಾಗಿರುವಂಥಾ ಕ್ರೈಸ್ತತಿಳುವಿಕೆಯ ನಿಧಿಯನ್ನು ತೋರಿಸುತ್ತವೆ. ಅವುಗಳು ಮೂರು: ೧. ಅಪೊಸ್ತಲೀಯ ವಿಶ್ವಾಸ ಪ್ರಮಾಣ. ಇದು ಮತ್ತಾಯ ೨೮, ೧೯ನೆಯಲ್ಲಿರುವ ಸ್ನಾನವಾಕ್ಯದ ವಿವರಣೆಯಾಗಿದ್ದು,

ಸಣ್ಣ ಸಣ್ಣ ಸೂತ್ರಗಳಿಂದ ಕ್ರೈಸ್ತಧರ್ಮದಲ್ಲಿ ಸುಲಭವಾದ ಮೂಲ ಸತ್ಯಗಳನ್ನು ತಿಳಿಸುತ್ತದೆ; ೨. ನಿಕೈಯದ ವಿಶ್ವಾಸಪ್ರಮಾಣ. ಇದು ನಿಕೈಯದಲ್ಲಿಯೂ (೩೨೫), ಕೊನ್ಸ್ತಂತೀನಪುರದಲ್ಲಿಯೂ (೩೮೧), ಆದ ಸಮಾಗಮದಲ್ಲಿ ಉಂಟಾದಂಥಾದ್ದಾಗಿರುವ ಅಪೊಸ್ತಲೀಯ ವಿಶ್ವಾಸಪ್ರಮಾಣದ ವಿವರಣೆಯು. ಇದರಿಂದ ಮಗನ ಮತ್ತು ಪರಿಶುದ್ಧಾತ್ಮನ ಸತ್ಯವಾದಂಥಾ ನಿಜವಾದಂಥಾ ದೈವತ್ವದ ಬೋಧನೆಯು ಸ್ಥಿರವಾಯಿತು; ೩. ಅಥನಸ್ಯ ವಿಶ್ವಾಸಪ್ರಮಾಣ. ಇದಕ್ಕೆ ಅಥನಸ್ಯನೆಂಬ († ೩೭೩) ಮಹಾ ಸಭಾಬೋಧಕನಿಂದ ಆ ಹೆಸರು ಬಂತು, ಆದರೆ ಅವನು ತಾನೆ ಅದನ್ನು ಮಾಡಿ ಇರ ಕೂಡದು. ಯಾಕಂದರೆ, ಅದು ಪರಿಶುದ್ಧತ್ರಿಯೇಕತ್ವವನ್ನು ಕುರಿತಾದ ಸಭಾಬೋಧನೆಯನ್ನಲ್ಲದೇ, ಕ್ರಿಸ್ತನಲ್ಲಿರುವ ಎರಡು ಸ್ವಭಾವಗಳನ್ನು ಕುರಿತಾದಂಥಾ, ಆ ತರುವಾಯ ವಿಕಸಿತವಾದಂಥಾ ಬೋಧನೆಯನ್ನು ಸಹಾ ಬಹಳ ಸೂಕ್ಷ್ಮವಾಗಿಯೂ ಸ್ವಚ್ಛವಾಗಿಯೂ ಸಾಧಿಸುತ್ತದೆ.

ಪ್ರತ್ಯೇಕ ವಿಶ್ವಾಸಪ್ರಮಾಣಗಳು ಒಂದೊಂದು ಸಭೆಯ ಬೋಧಗ್ರಹಿಕೆಯನ್ನು ಅದು ಬೇರೆ ಸಭೆಗಳ ಬೋಧಗ್ರಹಿಕೆಗೆ ಮುಖ್ಯವಾಗಿ ಯಾವದರಲ್ಲಿ ಹೆಚ್ಚು ಕಡಿಮೆಯಾಗಿರುತ್ತದೆಂಬದಕ್ಕೆ ಅನುಸಾರವಾಗಿ ಕಾಣಿಸುತ್ತವೆ. ಸುವಾರ್ತಾಪಕ್ಷದ ಲುಥರೀಯ ಸಭೆಗೆ ಇರುವವುಗಳು ಯಾವವೆಂದರೆ: ೧. ಮುಖ್ಯಪ್ರಮಾಣವಾಗಿರುವಂಥಾ ಔಗ್ಸ್‌ಬುರ್ಗದ ಅರಿಕೆ. ಇದರಿಂದ ಅದು ಪ್ರತ್ಯೇಕ ಸಭೆ ಆಯಿತು. ಮೆಲಂಥೊನನು ಅದನ್ನು ರಚಿಸಿ, (೧೫೩೦) ಔಗ್ಸ್‌ಬುರ್ಗದ ರಾಜಸಮಾಗಮದಲ್ಲಿ ಓದಿ ಹೇಳಿ, ಮಹಾರಾಜನಿಗೆ ಒಪ್ಪಿಸಿದ್ದಾಗಿರುತ್ತದೆ. ೨. ಔಗ್ಸ್‌ಬುರ್ಗದ ಅರಿಕೆಯ ಅನುನಯ. ಇದನ್ನು ಸಹಾ ರಚಿಸಿದವನು ಮೆಲಂಥೊನನೆ. ೩. ಮತ್ತು ೪. ಲುಥರನು ಬರದ ಎರಡು ಬಾಲಬೋಧನೆಗಳು. ದೊಡ್ಡದು ಬೋಧಕರಿಗೋಸ್ಕರ, ಮತ್ತು ಸಣ್ಣದು ಸಾಧಾರಣ ಜನರಿಗೋಸ್ಕರವೂ ಚಿಕ್ಕವರಿಗೋಸ್ಕರವೂ ಮಾಡಿದ್ದಾಗಿರುತ್ತದೆ. ೫. ಶ್ಮಲ್ಕಲ್ದೀಯ ಸೂತ್ರಗಳು. ಇವುಗಳನ್ನು ಲುಥರನು ಮಾಡಿ, (೧೫೩೭) ಶ್ಮಲ್ಕಲ್ದದಲ್ಲಿ ಆದ ಅರಸುಗಳ ಸಮಾಗಮಕ್ಕೆ ಒಪ್ಪಿಸಿದನು. ೬. ಏಕಮತವಾಕ್ಯ (೧೫೭೯). ಇದರಲ್ಲಿ ಲುಥರೀಯ ಸಭಾಬೋಧನೆಯು ವಿದ್ಯಾಪರಿಮುಖವಾಗಿ ನಿಶ್ಚೈಸಿ ಪರಿವರ್ಧಿಸಿ ಅದೆ. ಲುಥರೀಯ ವಿಶ್ವಾಸಪ್ರಮಾಣಗಳಿಗೆಲ್ಲಾ ಏಕಮತಪುಸ್ತಕವೆಂಬ ಹೆಸರುಂಟು.—ಪುನರೂಪಿತ ಸಭೆಯಲ್ಲಿ ಒಂದೊಂದು ದೇಶಸಭೆಗೆ ಒಂದೊಂದು ವಿಶ್ವಾಸಪ್ರಮಾಣ ಉಂಟು. ಹೈದಲ್‌ಬೆರ್ಗದ ಬಾಲಬೋಧನೆಯು ಅದರಲ್ಲಿ ವಿಶೇಷವಾಗಿ ಅಂಗೀಕಾರವಾಗಿರುತ್ತದೆ.—ಅಂಗ್ಲದ ಪುನರೂಪಿತ ಸಭೆಗೆ ಮುವ್ವತ್ತೊಂಭತ್ತು ಸೂತ್ರಗಳೆಂಬ ವಿಶ್ವಾಸಪ್ರಮಾಣ ಉಂಟು.—ರೋಮಾಯ ಸಭೆಗೆ ತ್ರಿದೆಂತದ ಮಹಾ ಸಂಘದ ನಿರ್ಣಯಗಳೆ ಮುಖ್ಯವಾದ ವಿಶ್ವಾಸಪ್ರಮಾಣವಾಗಿರುತ್ತವೆ (೧೫೪೫—೧೫೬೩). ಗ್ರೀಕ ಸಭೆಗಿರುವ ವಿಶ್ವಾಸವು ಕಿಯೆವದ ಸರ್ವಾಧ್ಯಕ್ಷ ಪೇತ್ರ ಮೊಗಿಲನು ಮಾಡಿದ ಸದ್ವಿಶ್ವಾಸದ ಅರಿಕೆ ಎಂಬದರಲ್ಲಿ ಕಾಣಿಸಿಯದೆ (೧೬೪೨).

**೮.** ಪಾಪದಿಂದ ತಪ್ಪಿ ಹೋದ ದೈವಾನ್ಯೋನ್ಯದ ಪುನಃಸ್ಥಾಪನೆಯು, ದೇವರು ಕ್ರಿಸ್ತನಲ್ಲಿ ಮನುಷ್ಯನಾದ್ದರಿಂದ ಆಯಿತು ಎಂಬದಾಗಿ (ಬೇರೆ ಧರ್ಮಗಳಿಗೆ ವ್ಯತ್ಯಾಸವಾಗಿ) ಹ್ಯಾಗೆ ಕ್ರೈಸ್ತಧರ್ಮದ ಮುಖ್ಯ ಬೋಧನೆಯೂ ಮೂಲ ಬೋಧನೆಯೂ ಆಗಿರುತ್ತದೋ (೩) ಹಾಗೆಯೇ ಸುವಾರ್ತಾಪಕ್ಷದ ಸಭೆಯ ಮುಖ್ಯ ಬೋಧನೆಯೂ ಮೂಲ ಬೋಧನೆಯೂ (ಬೇರೆ ಸಭೆಗಳಿಗೆ ವ್ಯತ್ಯಾಸವಾಗಿ) ಯಾವದಂದರೆ: ನಾವು ಆ ಪುನಃಸ್ಥಾಪನೆಯನ್ನು ಕ್ರಿಯೆಗಳ ಪುಣ್ಯ ಏನೂ ಇಲ್ಲದೆ, ಕೃಪೆಯಿಂದ ಮಾತ್ರವೆ ವಿಶ್ವಾಸದ ಪರಿಮುಖವಾಗಿ ಹೊಂದುತ್ತೇವೆಂಬದೆ. ಇದೆ ನಮ್ಮ ಸಭೆಯ ಮೂಲಪ್ರಮೇಯ. ಇದಕ್ಕೆ ಸಹಜವಾಗಿರುವಂಥಾ ಸುವಾರ್ತಾಪಕ್ಷದ ಸಭೆಯ ಸಹಪ್ರಮೇಯವು ಯಾವದಂದರೆ: ಎಲ್ಲಾ ಕ್ರೈಸ್ತ ತಿಳುವಿಕೆಗೆ ಪರಿಶುದ್ಧ ಬರಹ ಒಂದು ಮಾತ್ರವೆ ಬುಗ್ಗೆಯೂ ವಿಧಿಯೂ ಆಗಿರುತ್ತದೆಂಬದೆ. ಯಾಕಂದರೆ, ನಾವು ಹ್ಯಾಗೆ ಸ್ವಂತ ಬಲದಿಂದಲೂ ಸುಗುಣದಿಂದಲೂ ರಕ್ಷಣೆಯನ್ನು ದುಡಿಯ ಕೂಡದೊ, ಹಾಗೆಯೆ ಅದರ ತಿಳುವಿಕೆಯನ್ನು ಸಹಾ ಸ್ವಂತ ಬುದ್ಧಿಯೊಳಗಿಂದಲೂ ಜ್ಞಾನದೊಳಗಿಂದಲೂ ಮೊಗಿಯ ಕೂಡದು.

ಪರಿಶಿ. ಸಹಪ್ರಮೇಯವನ್ನು ಕುರಿತು ಏಕಮತವಾಕ್ಯದ ಪೀಠಿಕೆಯಲ್ಲಿ ಹೀಗೆ ಹೇಳಿಯದೆ. ಎಲ್ಲಾ ಬೋಧನೆಗಳನ್ನೂ ಬೋಧಕರನ್ನೂ ವಿಚಾರಿಸುವದಕ್ಕೆ ಪ್ರವಾದಿಕವೂ ಅಪೊಸ್ತಲೀಯವೂ ಆಗಿರುವ ಹಳೆ ಹೊಸ ಒಡಂಬಡಿಕೆಗಳ ಬರಹಗಳು ಮಾತ್ರವೆ ಏಕವಾದ ಸೂತ್ರವಾಗಿರುತ್ತದೆಂತಾ ನಾವು ನಂಬುತ್ತೇವೆ, ಕಲಿಸುತ್ತೇವೆ. ಯಾಕಂದರೆ ಹೀಗೆ ಬರದಿರುತ್ತದೆ. "ನಿನ್ನ ವಾಕ್ಯವು ನನ್ನ ಪಾದಕ್ಕೆ ದೀಪವೂ, ನನ್ನ ದಾರಿಗೆ ಬೆಳಕೂ ಆಗಿದೆ." (ಕೀರ್ತ. ೧೧೯,೧೦೫.) ಮತ್ತು ಅಪೊಸ್ತಲ ಪೌಲನು ಹೇಳುವದು: "ಆಕಾಶದಿಂದ ಬಂದ ದೂತನಾದರೂ, ನಾವು ನಿಮಗೆ ಪ್ರಸಂಗಿಸಿದ್ದೇ ಹೊರ್ತು, ಬೇರೆ ಸುವಾರ್ತೆ ನಿಮಗೆ ಪ್ರಸಂಗಿಸಿದರೆ, ಶಾಪವಾಗಲಿ." (ಗಲ. ೧,೮.) — ಮೂಲ ಪ್ರಮೇಯವನ್ನು ಕುರಿತು ಔಗ್ಸಬುರ್ಗೀಯ ಅರಿಕೆಯ ೪ನೆ ಸೂತ್ರದಲ್ಲಿ ಹೀಗೆ ಹೇಳಿಯದೆ. ಮತ್ತು ನಾವು ಕಲಿಸುವದೇನಂದರೆ, ಪಾಪಗಳ ಪರಿಹಾರವನ್ನೂ ದೇವರ ಮುಂದೆ ನೀತಿಯನ್ನೂ ನಮ್ಮ ದುಡಿಯೋಣಾ ಕ್ರಿಯೆ ಸಂತೃಪ್ತಿ ಪಡಿಸೋಣಾಗಳಿಂದಲ್ಲಾ, ಕೃಪೆಯಿಂದ ಕ್ರಿಸ್ತನಿಗಾಗಿ ವಿಶ್ವಾಸದಿಂದ ನಾವು ದೇವರ ಮುಂದೆ ನೀತಿವಂತರಾಗುತ್ತೇವೆ ಎಂಬದೆ ಇತ್ಯಾದಿ. ಈ ಬೋಧನೆಯು (೨೦ನೆ ಸೂತ್ರ.) "ಕ್ರೈಸ್ತಭಾವದಲ್ಲಿ ಮುಖ್ಯವಾದದ್ದು;" ಅಥವಾ ಔಗ್ಸಬುರ್ಗದ ಅರಿಕೆಯ ಅನುನಯದಲ್ಲಿ ಹೇಳಿರುವ ಪ್ರಕಾರ ಅದು ಏನಾಗಿರುತ್ತದಂದರೆ: ಇದೆ ಎಲ್ಲಾ ಕ್ರೈಸ್ತ ಬೋಧನೆಯ ಅತಿ ಶ್ರೇಷ್ಟವೂ ಅತಿ ಘನವುಳ್ಳದ್ದೂ ಆಗಿರುವ ಸೂತ್ರವಾಗಿ

ರುತ್ತದೆ. ಇದೆ ಮುಖ್ಯವಾಗಿ ಎಲ್ಲಾ ಪರಿಶುದ್ಧ ಬರಹದ ಸ್ವಚ್ಛವಾದ ಸಮವಾದ ತಿಳುವಿಕೆಗೆ ಉಪಯೋಗವಾಗಿ ಅದೆ. ಅದು ಮಾತ್ರವೆ ಕ್ರಿಸ್ತನ ಹೇಳಿ ಕೂಡದ ಐಶ್ವರ್ಯಕ್ಕೂ ಸಮವಾದ ತಿಳುವಿಕೆಗೂ ಮಾರ್ಗ ತೋರಿಸುತ್ತದೆ. ಎಲ್ಲಾ ದಿವ್ಯ ಪುಸ್ತಕದಲ್ಲಿ ಬಾಗಲು ತೆರಿಯುವಂಥಾದ್ದು ಸಹಾ ಅದೊಂದೆ. ಅದಿಲ್ಲದೆ, ಬಡ ಮನಸ್ಸಾಕ್ಷಿಯು ಸಮವಾದಂಥಾ, ಭದ್ರವಾದಂಥಾ ನಿಜವಾದಂಥಾ ಸಮಾಧಾನವನ್ನು ಹೊಂದಲಿಕ್ಕೂ ಕ್ರಿಸ್ತನ ಕೃಪೆಯ ಐಶ್ವರ್ಯಗಳನ್ನು ತಿಳಿ ಕೊಳ್ಳಲಿಕ್ಕೂ ಕೂಡದು.

೯. ಹಾಗಾದರೆ ಸುವಾರ್ತಾಪಕ್ಷದ ಕ್ರೈಸ್ತಧರ್ಮಬೋಧನೆಯ ಕ್ರಮವು ಯಾವದಂದರೆ: ನಾವು ಸ್ವಂತ ಬಲದಿಂದಲೂ ಸುಗುಣದಿಂದಲೂ ಪರಿಶುದ್ಧರೂ ಭಾಗ್ಯವಂತರೂ ಆಗ ಕೂಡದೆಂಬ ವಿಷಯ ಮೊದಲು ಬರ ಬೇಕು (ಮೊದಲನೆ ಭಾಗ: ದಿವ್ಯ ನಿಯಮವನ್ನು ಕುರಿತು). ಆದರೆ ಮತ್ತೆ, ಹ್ಯಾಗೆ ದೇವರ ಕೃಪೆಯಿಂದ ಕ್ರಿಸ್ತನಲ್ಲಿ ನಮಗೆ ರಕ್ಷಣೆಯೂ ಭಾಗ್ಯವೂ ಸಿದ್ಧವಾಗಿದೆ, ಮತ್ತು ವಿಶ್ವಾಸದಿಂದ ಮಾತ್ರವೆ ನಮಗೆ ಶಿಕ್ಕುತ್ತದೆ ಎಂಬ ವಿಷಯ (ಎರಡನೆ ಭಾಗ: ಕ್ರೈಸ್ತ ವಿಶ್ವಾಸವನ್ನು ಕುರಿತು). ಕಡೆಯಲ್ಲಿ ಈ ರಕ್ಷಣೆಯ ಸ್ವೀಕಾರಕ್ಕೋಸ್ಕರ ನಮ್ಮ ವಿಶ್ವಾಸಕ್ಕೆ ದೇವರು ಯಾವ ಕರಣಗಳನ್ನು ಕೊಟ್ಟಿದ್ದಾನೆಂಬ ವಿಷಯ (ಮೂರನೆ ಭಾಗ: ಕ್ರೈಸ್ತ ಕೃಪಾಕರಣಗಳನ್ನು ಕುರಿತು).

ಪರಿಶಿ. ದೇವರು ತಾನೆ ರಕ್ಷಣೆಗೋಸ್ಕರ ಎಲ್ಲಾ ಮನುಷ್ಯ ಸಂತತಿಯನ್ನು ಈ ಪ್ರಕಾರ ನಡಿಸಿದ್ದರಿಂದಲೂ, ಈಗಲೂ ಇನ್ನೂ ಒಬ್ಬೊಬ್ಬನನ್ನು ಸಹಾ ಅದೆ ಮಾರ್ಗವಾಗಿ ನಡಿಸುವದರಿಂದಲೂ, ಮೇಲೆ ಮಾಡಿದ ವಿಭಾಗವು ಕ್ರೈಸ್ತಧರ್ಮಬೋಧನೆಗೆ ತಕ್ಕದ್ದಾಗಿ ಕಾಣ ಬರುತ್ತದೆ.

೧೦. ಇದೆ ಬೋಧಕ್ರಮವು ಸುವಾರ್ತಾಪಕ್ಷದ ಸಭೆಯ ವಿಶ್ವಾಸಪ್ರಮಾಣ ಪುಸ್ತಕಗಳೊಳಗೆ ಲುಥರನ ಎರಡು ಬಾಲಬೋಧನೆಗಳಲ್ಲಿ ಮಾಡಿಯದೆ. ಇವುಗಳಲ್ಲಿ ಸಣ್ಣ ಬಾಲ ಬೋಧನೆಯನ್ನು ನಮ್ಮ ಧರ್ಮಬೋಧನೆಗೆ ಅಸ್ತಿವಾರವಾಗಿ ತಕ್ಕೊಳ್ಳುತ್ತೇವೆ. ಯಾಕಂದರೆ ಅದರಲ್ಲಿ ರಕ್ಷಣೆಯ ಸತ್ಯಗಳು ಬಹು ಪೂರ್ಣವಾಗಿಯೂ ಅತಿ ಸಂಕ್ಷೇಪವಾಗಿಯೂ ಆಶ್ಚರ್ಯಕರವಾದ ನಿರ್ಮಲತ್ವದಿಂದಲೂ, ಕ್ಲುಪ್ತಿಯಿಂದಲೂ ತ್ರಾಣದಿಂದಲೂ ಅಭಿಜ್ಞತೆಯಿಂದಲೂ ಭೋಳೆತನದಿಂದಲೂ ತಿಳಿಸಿ ಅವೆ.

# ಕ್ರೈಸ್ತಧರ್ಮ ಬೋಧನೆ.

## ಮೊದಲನೆ ಭಾಗ.

### ದಿವ್ಯ ನಿಯಮವನ್ನು ಕುರಿತು.

ಮನುಷ್ಯನು ಏನು ಮಾಡ ಬೇಕು, ಏನು ಮಾಡ ಬಾರದು ಎಂಬದನ್ನು ನಿಶ್ಚಯಿಸುವಂಥಾದ್ದು ನಿಯಮ. ದಿವ್ಯ ನಿಯಮವು ಅತ್ಯಂತ ಸಂಪೂರ್ಣವೂ ಪರಿಶುದ್ಧವೂ ಆಗಿರುವ ನಿಯಮ ಮಾತ್ರವಲ್ಲಾ, ಅದು ಎಲ್ಲಾ ಮಾನುಷ ನಿಯಮಕ್ಕೆ ಅಸ್ತಿವಾರವೂ ಬುಗ್ಗೆಯೂ ಆಗಿರುತ್ತದೆ.

"ರಕ್ಷಿಸಲೂ ಕೆಡಿಸಲೂ ಶಕ್ತನಾದ ನ್ಯಾಯಕರ್ತನು ಒಬ್ಬನೆ." (ಯಾಕೊ. ೪, ೧೨.)

**೧೨.** ದೇವರು ಮೊದಲಾಗಿ ತನ್ನ ನಿಯಮವನ್ನು ಎಲ್ಲಾ ಮನುಷ್ಯರ ಹೃದಯದಲ್ಲಿ ಬರದಿದ್ದಾನೆ. ಅದು ಯಾವದಂದರೆ, ನಮ್ಮ ಚಿತ್ತಕ್ಕೆ ಸಹಾ ಎದುರು ನಿಂತು, ಎಲ್ಲಾ ಕ್ರಿಯೆಗಳ ಸಾಕ್ಷಿಯೂ ನ್ಯಾಯಕರ್ತನೂ ಆಗಿ, ಅಂತರ್ಯದಲ್ಲಿ ತನ್ನನ್ನು ಪ್ರತಿಷ್ಠೆ ಮಾಡಿಕೊಳ್ಳುವಂಥಾ, ಒಬ್ಬೊಬ್ಬನಲ್ಲಿ ಒಡಹುಟ್ಟಿದ ಮನಸ್ಸಾಕ್ಷಿಯ ಧ್ವನಿಯೆ. ಹ್ಯಾಗಂದರೆ ನಿಯಮವಿಲ್ಲದ ಜನಾಂಗಗಳು ಸ್ವಭಾವದಿಂದ ನಿಯಮದವುಗಳನ್ನು ಮಾಡಿದರೆ, ಅವರು ನಿಯಮವಿಲ್ಲದವರಾಗಿದ್ದು, ತಮಗೆ ತಾವೆ ನಿಯಮವಾಗಿದ್ದಾರೆ. ಅವರ ಮನಸ್ಸಾಕ್ಷಿ ಕೂಡಾ ಸಾಕ್ಷಿ ಕೊಟ್ಟು, ಅವರ ಯೋಜನೆಗಳು ಒಂದಕ್ಕೊಂದು ತಪ್ಪು ಹೊರಿಸುತ್ತಾ, ಇಲ್ಲವೆ ಪ್ರತ್ಯುತ್ತರ ಕೊಡುತ್ತಾ ಇರುವದರಿಂದ, ಅವರು ತಮ್ಮ ಹೃದಯಗಳಲ್ಲಿ ಬರೆದಿರುವ ನಿಯಮದ ಕ್ರಿಯೆಯನ್ನು ತೋರಿಸುತ್ತಾರೆ. (ರೋಮ. ೨, ೧೪. ೧೫.)

ಪರಿಶಿ. ೧. ಮನುಷ್ಯನಲ್ಲಿರುವ ಮನಸ್ಸಾಕ್ಷಿಯು ತ್ರಾಣದ ವಿಷಯವಾಗಿ ಶುದ್ಧ ಬರಹದಲ್ಲಿ ಮನಸ್ಸಿಗೆ ಖಚಿತ ಮಾಡಿ ಕೊಳ್ಳ ತಕ್ಕಂಥಾ ಕೆಲವು ದೃಷ್ಟಾಂತಗಳು ಹೇಳಿಯವೆ. ಉದಾಹರಣೆ: ಆದಮನದು (ಉತ್ಪ. ೩, ೭—೧೧.), ಕಾಯಿನನದು (ಉತ್ಪ. ೪, ೧೩. ೧೪.), ಯೋಸೆಫನ ಸಹೋದರರದು (ಉತ್ಪ. ೪೨, ೨೧.), ದಾವೀದನದು (ಕೀರ್ತ. ೫೧.), ಹೆರೋದನದು (ಮತ್ತಾ. ೧೪, ೨.), ಯೂದನದು (ಮತ್ತಾ. ೨೭, ೩—೫.), ಫೇಲಿಕ್ಸನದು (ಅ. ಕ್ರಿ. ೨೪, ೨೫.) ಇತ್ಯಾದಿ.

ಪರಿಶಿ. ೨. ಪಾಪದ ಮೊದಲಿನ ಮನಸ್ಸಾಕ್ಷಿಯು ಗದರಿಸುವ ಧ್ವನಿಗಿಂತ, ಪಾಪದ ಮೇಲಿನ ಅದರ ಶಿಕ್ಷಿಸುವ ಧ್ವನಿಯು ಯಾಕೆ ಬಲವಂತವಾಗಿಯೂ ಹಿಮ್ಮೆಟ್ಟಿಸಲ್ಪಡ ಕೂಡದಂಥಾದ್ದಾಗಿಯೂ ಇರುತ್ತದೆ?

**೧೩.** ಆದಕಾರಣ, ಮನಸ್ಸಾಕ್ಷಿಯನ್ನು ಯಾವ ವಿಧದಿಂದಲಾದರೂ ಸ್ವಪ್ನಾವಸ್ಥೆಯಲ್ಲಿ ಬೀಳ ಮಾಡದೆಯೂ, ಅದರ ಕಿವಿ ಒಡಿಯದೆಯೂ ಇದ್ದು, ಅದನ್ನು ಯಾವಾಗಲೂ ಜಾಗರವಾಗಿಯೂ ಚುರುಕಾಗಿಯೂ ಇಟ್ಟು, ಎಡೆ ಬಿಡದೆ ಅದನ್ನು ಹದ ಮಾಡುತ್ತಾ ಇರುವ ಪರಿಶುದ್ಧ ಹಂಗಿಗೆ ಒಳಗಾಗಿದ್ದೇವೆ. ನಾವು ಯಾವಾಗಲೂ, ಅದು ಅತಿ ಮಂದವಾಗಿ ಆಡುವಾಗ್ಯೆ ಸಹಾ, ಅದಕ್ಕೆ ಲಕ್ಷ್ಯ ಇಟ್ಟು, ಮಾಂಸ ರಕ್ತಗಳ ಸಂಗಡ ಸಂಭಾಷಣೆ ಮಾಡದೆ (ಗಲಾ. ೧, ೧೬.), ಅದರ ಬುದ್ಧಿ ಹೇಳೋಣಕ್ಕೂ ಗದರಿಸೋಣಕ್ಕೂ ಸ್ಥಿರ ಮನಸ್ಸಿನಿಂದ ವಿಧೇಯವಾಗುವದೆ ಬಹಳ ಉಪಯೋಗವಾಗಿರುತ್ತದೆ. ಆದರೂ, ದೇವರ ಪ್ರಕಟಣೆಯ ವಾಕ್ಯದಲ್ಲಿ ಆಹಾರವನ್ನೂ ಜೀವದ ಬುಗ್ಗೆಯನ್ನೂ ಹುಡುಕುವದಾದರೆ, ಮನಸ್ಸಾಕ್ಷಿಯು ಅದಕ್ಕಿಂತ ಬಲವುಳ್ಳದ್ದೂ ಹದವಾದದ್ದೂ ಆಗುತ್ತದೆ. ಅದರಿಂದ ಮನಸ್ಸಾಕ್ಷಿಯು ತನ್ನಲ್ಲಿ ಈಗ ಸರ್ವಥಾ ಇಲ್ಲದೆ ಇರುವಂಥಾ ನಿಶ್ಚಯತ್ವವನ್ನೂ ಭದ್ರತ್ವವನ್ನೂ ಹೊಂದುತ್ತದೆ.

**೧೪.** ಹ್ಯಾಗಂದರೆ, ಪಾಪದಿಂದ ಮನಸ್ಸಾಕ್ಷಿಯ ಸ್ವರವು ನಮ್ಮಲ್ಲಿ ಬಲಗುಂದಿ ಹೋಗಿಯದೆ, ಮತ್ತು ಪಾಪಿಗಳ ಸಹವಾಸದಿಂದಲೂ, ಪಾಪದ ವಾಡಿಕೆ ಅಭ್ಯಾಸಗಳಿಂದಲೂ, ಹೆಚ್ಚು ಹೆಚ್ಚು ಬಲಹೀನವೂ ಅಸ್ಥಿರವೂ ಆಗುತ್ತಾ ಬರುತ್ತದೆ. ಆದ್ದರಿಂದ ಹೃದಯದಲ್ಲಿ ಬರದ ನಿಯಮು ಸಹಾ ಸಾಲದು. ಮತ್ತು ದೇವರು ಮತ್ತೊಂದು ಸಾರಿ ತನ್ನ ಪರಿಶುದ್ಧ ಚಿತ್ತವನ್ನು ಪ್ರಕಟ ಮಾಡಿ, ಅದನ್ನು ನಿತ್ಯವಾದ ಅಚಂಚಲವಾದ ಸಾಕ್ಷಿಯಾಗಿ ಶುದ್ಧ ಬರಹವಲ್ಲಿ ಬರಸಿದನು.

ಪರಿಶಿ. ಮನಸ್ಸಾಕ್ಷಿಯು ಹೊರ್ತು, ಬೇರೆ ಯಾವದೂ ಉಪದೇಶವಿಲ್ಲದೆ, ಮನುಷ್ಯ

ರು ಹ್ಯಾಗಾಗಿ ಹೋಗುತ್ತಾರೆಂಬದನ್ನು ಪೂರ್ವದ ಮತ್ತು ಈಗಿನ ಜನಾಂಗಗಳ ಸ್ಥಿತಿಯಿಂದ ತಿಳಿಯ ಬಹುದು.

**೧೫.** ನಿಯಮವನ್ನು ಹಿಂಬಾಲಿಸುವವನಿಗೆ[೧] ದೇವರ ಆಶೀರ್ವಾದವೂ, ಮೀರುವವನಿಗೆ[೨] ದೇವರ ಶಾಪವೂ ಅದರಲ್ಲಿ ಉಂಟು. ಈ ಆಶೀರ್ವಾದವೂ ಈ ಶಾಪವೂ ಹಳೆ ಒಡಂಬಡಿಕೆಯಲ್ಲಿ ಉಚ್ಚರಿಸಲ್ಪಟ್ಟು, ಹೊಸ ಒಡಂಬಡಿಕೆಯಲ್ಲಿ ಪುನರುಚ್ಚರಿಸಲ್ಪಟ್ಟದೆ, ಸ್ಥಿರ ಪಡಿಸಿ ಅದೆ.

೧) "ಅವುಗಳನ್ನು ಯಾವನಾದರೂ ಮಾಡಿದರೆ, ಅವುಗಳಿಂದ ಬದುಕುವನು." (ಲೇವಿಕ. ೧೮, ೫.) "ಇದನ್ನು ಮಾಡಿದರೆ ಬದುಕುವಿ." (ಲೂಕ. ೧೦, ೨೮.)

೨) "ಈ ನ್ಯಾಯಪ್ರಮಾಣದ ಮಾತುಗಳನ್ನು ಸ್ಥಾಪಿಸದೆ ಮಾಡದೆ ಇರುವವನಿಗೆ ಶಾಪ!" (ದ್ವಿತಿ. ೨೭, ೨೬.) "ಯಾಕಂದರೆ ನ್ಯಾಯಪ್ರಮಾಣದ ಕ್ರಿಯೆಗಳವರಷ್ಟು ಶಾಪಕ್ಕೊಳಗಾಗಿದ್ದಾರೆ; ಹ್ಯಾಗಂದರೆ ನ್ಯಾಯಪ್ರಮಾಣದ ಪುಸ್ತಕದಲ್ಲಿ ಬರೆದ ಎಲ್ಲವುಗಳಲ್ಲಿ, ಅವುಗಳನ್ನು ಮಾಡುವ ಹಾಗೆ, ನೆಲೆಯಾಗಿರದ ಯಾವನಾದರೂ ಶಾಪಗ್ರಸ್ಥನೆಂದು ಬರದದೆ." (ಗಲಾ. ೩, ೧೦.)

**೧೬.** ದಿವ್ಯ ನಿಯಮವು, ನಮ್ಮ ಒಳ ಮನುಷ್ಯನ ಸ್ಥಿತಿಯನ್ನು ಸತ್ಯವಾಗಿ, ಮುಸುಕಿಲ್ಲದೆ ತೋರಿಸ ಬೇಕಾದ ಕನ್ನಡಿಯೂ, ಪಾಪಕ್ಕೆ ನಮ್ಮ ಹೃದಯದಲ್ಲಿ ಪ್ರವೇಶವನ್ನು ಅಡ್ಡಕಟ್ಟ ಬೇಕಾದ ಅಗುಳಿಯೂ, ನಮ್ಮನ್ನು ಜೀವದ ಮಾರ್ಗಕ್ಕೆ ಕೊಂಡ್ಹೋಗಿ ನಾಶನದ ಮಾರ್ಗಗಳ ದೆಶೆಯಿಂದ ತಪ್ಪಿಸ ಬೇಕಾದ ಕಡಿವಾಣವೂ, ಆಗಿರುತ್ತದೆ.

---

# ಹತ್ತು ಕಟ್ಟಳೆಗಳು.

## ಮೊದಲನೆ ಭಾಗ.

**೧೭.** ದಶವಾಕ್ಯವೆಂಬಂಥಾ, ದೇವರು ಸೀನಾಯಿ ಪರ್ವತದಿಂದ ಹಳೆ ಒಡಂಬಡಿಕೆಯ ಆಯಲ್ಪಟ್ಟ ಜನಾಂಗಕ್ಕೆ ಹೇಳಿ, ತನ್ನ ಬೆರಳಿನಿಂದ ಎರಡು ಕಲ್ಲಿನ ಹಲಿಗೆಗಳಲ್ಲಿ ಬರದು ಕೊಟ್ಟ ಹತ್ತು ಕಟ್ಟಳೆಗಳಲ್ಲಿ[೧] ಎಲ್ಲಾ ನಿಯಮದ[೨] ಸಾರಾಂಶವು ಸಂಕ್ಷೇಪವಾಗಿ ಕಾಣ ಬರುತ್ತದೆ. ಆದರೆ ಅವುಗಳ ಅಧಿಕಾರವು ಹಳೆ ಒಡಂಬಡಿಕೆಯ ಜನಾಂಗದ ಮೇಲೆ ಮಾತ್ರವಲ್ಲಾ, ಎಲ್ಲಾ ಜನಾಂಗಗಳ ಮೇಲೆಯೂ ಎಲ್ಲಾ ಕಾಲಗಳ ಮೇಲೆಯೂ ಇರುವದು[೩].

೧) "ಆಗ ದೇವರು ಈ ವಾಕ್ಯಗಳನ್ನೆಲ್ಲಾ ಹೇಳಿದನು; ಏನಂದರೆ— ನಿನ್ನನ್ನು ಐಗುಪ್ತ ದೇಶದೊಳಗಿಂದ, ದಾಸತ್ವದ ಮನೆಯಿಂದ ಹೊರಗೆ ಬರ ಮಾಡಿದ ನಿನ್ನ ದೇವರಾದ ಯೆಹೋವ ನಾನೇ. ೧. ನನ್ನ ಮುಂದೆ ನಿನಗೆ ಬೇರೆ ದೇವರುಗಳು ಇರ ಬಾರದು. ೨. ಮೇಲಿನ ಆಕಾಶದಲ್ಲಾಗಲಿ, ಕೆಳಗಿನ ಭೂಮಿಯಲ್ಲಾಗಲಿ, ಭೂಮಿಯ ಕೆಳಗಿನ ನೀರುಗಳಲ್ಲಾಗಲಿ ಇರುವಂಥವುಗಳ ಹಾಗೆ ವಿಗ್ರಹವನ್ನೂ ಯಾವ ರೂಪವನ್ನೂ ನಿನಗೆ ಮಾಡಿ ಕೊಳ್ಳ ಬೇಡ; ಅವುಗಳಿಗೆ ಅಡ್ಡ ಬೀಳಲೂ ಸೇವಿಸಲೂ ಬೇಡ; ಯಾಕಂದರೆ ನಿನ್ನ ದೇವರಾದ ಯೆಹೋವನಾಗಿರುವ ನಾನು ರೋಷವುಳ್ಳ ದೇವರಾಗಿದ್ದೇನೆ; ನನ್ನನ್ನು ಹಗೆ ಮಾಡುವವರಲ್ಲಿ ತಂದೆಗಳ ಅಕ್ರಮವನ್ನು ಮಕ್ಕಳ ಮೇಲೆ, ಮೂರನೆ ನಾಲ್ಕನೆ ತಲಾಂತರದ ವರಿಗೂ, ವಿಚಾರಿಸುತ್ತೇನೆ; ಆದರೆ ನನ್ನನ್ನು ಪ್ರೀತಿ ಮಾಡಿ, ನನ್ನ ಆಜ್ಞೆಗಳನ್ನು ಕಾಪಾಡುವವರಿಗೆ ಸಾವಿರಗಳ ಪರ್ಯಂತರ ಕೃಪೆಯನ್ನು ತೋರಿಸುತ್ತೇನೆ. ೩. ನಿನ್ನ ದೇವರಾದ ಯೆಹೋವನ ಹೆಸರನ್ನು ವ್ಯರ್ಥವಾಗಿ ಎತ್ತ ಬೇಡ; ಯಾಕಂದರೆ ಯೆಹೋವನು ತನ್ನ ಹೆಸರನ್ನು ವ್ಯರ್ಥವಾಗಿ ಎತ್ತುವವನನ್ನು ನಿರ್ಮಲನೆಂದು ತೀರಿಸುವದಿಲ್ಲ. ೪. ಸಬ್ಬತ್ ದಿವಸವನ್ನು ಪರಿಶುದ್ಧ ಮಾಡುವ ಹಾಗೆ ಜ್ಞಾಪಕ ಮಾಡಿಕೋ. ಆರು ದಿನ ಕಷ್ಟ ಮಾಡಿ, ನಿನ್ನ ಕೆಲಸವನ್ನೆಲ್ಲಾ ಮಾಡ ಬೇಕು; ಆದರೆ ಏಳನೆ ದಿವಸವು ನಿನ್ನ ದೇವರಾದ ಯೆಹೋವನ ಸಬ್ಬತ್ ದಿವಸವಾಗಿದೆ; ಅದರಲ್ಲಿ ನೀನೂ, ನಿನ್ನ ಮಗನೂ, ನಿನ್ನ ಮಗಳೂ, ನಿನ್ನ ದಾಸನೂ, ನಿನ್ನ ದಾಸಿಯೂ, ನಿನ್ನ ದನವೂ, ನಿನ್ನ ಬಾಗಲುಗಳಲ್ಲಿರುವ ಪರವಾಸಿಯೂ ಯಾವ ಕೆಲಸವನ್ನಾದರೂ ಮಾಡ ಬಾರದು. ಯಾಕಂದರೆ ಆರು ದಿವಸಗಳಲ್ಲಿ ಯೆಹೋವನು ಆಕಾಶವನ್ನೂ ಭೂಮಿಯನ್ನೂ ಸಮುದ್ರವನ್ನೂ ಅವುಗಳಲ್ಲಿರುವ ಎಲ್ಲವುಗಳನ್ನೂ ಉಂಟು ಮಾಡಿ, ಏಳನೆ ದಿವಸದಲ್ಲಿ ವಿಶ್ರಮಿಸಿಕೊಂಡನು; ಆದದರಿಂದ ಯೆಹೋವನು ಸಬ್ಬತ್ ದಿವಸವನ್ನು ಆಶೀರ್ವದಿಸಿ, ಪರಿಶುದ್ಧ ಮಾಡಿದನು. ೫. ನಿನ್ನ ದೇವರಾದ ಯೆಹೋವನು ನಿನಗೆ ಕೊಡುವ ದೇಶದಲ್ಲಿ ನಿನ್ನ ದಿವಸಗಳು ಹೆಚ್ಚಾಗುವ ಹಾಗೆ, ನಿನ್ನ ತಂದೆಯನ್ನೂ ನಿನ್ನ ತಾಯಿಯನ್ನೂ ಸನ್ಮಾನಿಸು. ೬. ಕೊಲ್ಲ ಬೇಡ. ೭. ವ್ಯಭಿಚಾರ ಮಾಡ ಬೇಡ. ೮. ಕದಿಯ ಬೇಡ. ೯. ನಿನ್ನ ನೆರೆಯವನಿಗೆ ವಿರೋಧವಾಗಿ ಅಪಸಾಕ್ಷಿ ಹೇಳ ಬೇಡ. ೧೦. ನಿನ್ನ ನೆರೆಯವನ ಮನೆ ಆಶಿಸ ಬೇಡ; ನಿನ್ನ ನೆರೆಯವನ ಹೆಂಡತಿಯನ್ನೂ, ಅವನ ದಾಸನನ್ನೂ, ಅವನ ದಾಸಿಯನ್ನೂ, ಅವನ ಎತ್ತನ್ನೂ, ಅವನ ಕತ್ತೆಯನ್ನೂ, ನಿನ್ನ ನೆರೆಯವನಿಗೆ ಇರುವ ಯಾವದನ್ನಾದರೂ ಆಶಿಸ ಬೇಡ." (ಹೊರ. ೨೦, ೧—೧೭.) (ಸಮ ನೋಡು ದ್ವಿತಿ. ೫, ೬—೨೧.)

೨.) "ನೀನು ಸೀನಾಯಿ ಪರ್ವತದ ಮೇಲಕ್ಕೆ ಇಳಿದು ಬಂದಿ; ಆಕಾಶದಿಂದ ಅವರ ಸಂಗಡ ಮಾತಾಡಿದಿ; ನೆಟ್ಟನೆಯಾದ ನ್ಯಾಯಗಳನ್ನೂ ಸತ್ಯವಾದಪ್ರಮಾಣಗಳನ್ನೂ ಉತ್ತಮವಾದ ಕಟ್ಟಳೆಗಳನ್ನೂ ಆಜ್ಞೆಗಳನ್ನೂ ಕೊಟ್ಟಿ." (ನೆಹೆ. ೯, ೧೩.)

೩.) "ಸಮಸ್ತ ಮಾತಿನ ಒಟ್ಟರ್ಥವನ್ನು ಕೇಳು— ದೇವರಿಗೆ ಭಯ ಪಡು, ಅವನ ಆಜ್ಞೆಗಳನ್ನು ಕೈಕೋ; ಯಾಕಂದರೆ ಇದೇ ಮನುಷ್ಯರೆಲ್ಲರ ಮೇಲೆ ಬಿದ್ದ ಭಾರ." (ಪ್ರಸ. ೧೨, ೧೩.) (ಲೂಕ. ೧೦, ೨೫—೨೮.)

**೧೮.** ದಶವಾಕ್ಯದ ಒಂದೊಂದು ಕಟ್ಟಳೆಯು ನ್ಯಾಯ ಜೀವದ ಒಂದು ವಿಶಿಷ್ಟ ಭಾಗವನ್ನು ನೆನಪಿಗೆ ಸುಲಭವಾಗಿ ಖಚಿತವಾಗುವ ಸಂಕ್ಷೇಪತ್ವದಿಂದಲೇ ಚನ್ನಾಗಿ ಹೊಗುವ ಒಂದೇ ವಾಕ್ಯದಲ್ಲಿ ಆವರಿಸುತ್ತದೆ. ಆದಕಾರಣ, ಅದು ತನ್ನ ವಿಶಿಷ್ಟ ಭಾಗವನ್ನೆಲ್ಲಾ ಅಲ್ಲ, ಅದರ ತುದಿಯನ್ನು ಮಾತ್ರವೇ ನುಡಿದು ಮುಟ್ಟುತ್ತದೆ. ಆದರೆ ಒಂದೊಂದು ಕಟ್ಟಳೆಯನ್ನು ವಿವರಿಸುವಾಗ್ಯೆ, ಅದರ ಎಲ್ಲಾ ಬೇರುಗಳನ್ನೂ ಕೊಂಬೆಗಳನ್ನೂ ದಿವ್ಯ ಚಿತ್ರವೆಂಬ ಬೆಳಕಿಗೆ ತರ ಬೇಕಾಗುತ್ತದೆ.

**೧೯.** ಹತ್ತು ಕಟ್ಟಳೆಗಳ ಬೇರೆ ಬೇರೆ ವಿಶೇಷ ಭಾಗಗಳನ್ನೆಲ್ಲಾ ಶಿರಿಗಿ ಎರಡು ಮುಖ್ಯ ಭಾಗಗಳಾಗಿ ಎಣಿಸ ಬಹುದು: ದೇವರ ವಿಷಯದಲ್ಲಿ ನಮಗಿರುವ ಹಂಗು, ಮತ್ತು ನೆರೆಯವನ ವಿಷಯದಲ್ಲಿ ನಮಗಿರುವ ಹಂಗು, ಎರಡಕ್ಕೂ ಅತ್ಯಂತ ಪರಸ್ಪರ ಸಂಬಂಧ ಉಂಟು. ದೇವರ ಕಡೆಯ ಪ್ರೀತಿಯು ನೆರೆಯವನ ಕಡೆಯ ಪ್ರೀತಿಗೆ ಅಸ್ತಿವಾರ. ಈ ವಿಭಾಗಕ್ಕೆ ಎರಡು ಹಲಿಗೆಗಳಲ್ಲಿ ಮಾಡಿದ ಕಟ್ಟಳೆಗಳ ಭಾಗಗಳು ಸರಿ ಬೀಳುತ್ತವೆ.

"ನಿನ್ನ ದೇವರಾದ ಕರ್ತನನ್ನು ನಿನ್ನ ಪೂರ್ಣ ಹೃದಯದಿಂದಲೂ, ನಿನ್ನ ಪೂರ್ಣ ಪ್ರಾಣದಿಂದಲೂ, ನಿನ್ನ ಪೂರ್ಣ ಬುದ್ಧಿಯಿಂದಲೂ, ಪ್ರೀತಿ ಮಾಡು. ಈ ಕಟ್ಟಳೆಯು ಮೊದಲನೆದೂ, ದೊಡ್ಡದೂ, ಆಗಿದೆ. ಮತ್ತು ಎರಡನೆದು ಅದಕ್ಕೆ ಸಮಾನವಾಗಿದೆ; ಏನಂದರೆ, ನಿನ್ನ ನೆರೆಯವನನ್ನು ನಿನ್ನ ಹಾಗೆಯೇ ಪ್ರೀತಿ ಮಾಡು. ಈ ಎರಡು ಕಟ್ಟಳೆಗಳಲ್ಲಿ ನ್ಯಾಯಪ್ರಮಾಣವೆಲ್ಲವೂ, ಪ್ರವಾದಿಗಳೂ, ಅಡಕವಾಗಿವೆ." (ಮತ್ತಾ. ೨೨, ೩೭—೪೦.)

ಪರಿಶಿ. ನಮ್ಮ ವಿಷಯದಲ್ಲಿಯೂ ನಾವೇ ಹಂಗಿನಲ್ಲಿರುತ್ತೇವೆಂಬದು ಸರಿ; ಮತ್ತು ದಶವಾಕ್ಯದಲ್ಲಿ ಇದು ಬಿಟ್ಟದೆ ಎಂಬ ಹಾಗೆ ತೋರಿದರೂ, ಅದು ಬರೇ ತೋರಿಕೆ ಅಷ್ಟೆ. ದೇವರ ಕಡೆಗಾದರೂ ನೆರೆಯವನ ಕಡೆಗಾದರೂ ಹಂಗು ಸಾಧಿಸುವಂಥಾ ಪ್ರತಿಕಟ್ಟಳೆಯಲ್ಲಿ ಅದೇ ಸಮಯದಲ್ಲಿ ನಮ್ಮ ಸ್ವಂತ ರಕ್ಷಣೆ ಕ್ಷೇಮಗಳಿಗೆ ಸಹಾ ಲಕ್ಷ್ಯ ಇಟ್ಟದೆ. ದೇವರನ್ನು ಎಲ್ಲಾದರ ಮೇಲೆಯೂ ನೆರೆಯವನನ್ನು ನಮ್ಮ ಹಾಗೆಯೂ ಪ್ರೀತಿ ಮಾಡುವದರಿಂದಲ್ಲದೆ, ಬೇರೆ ತರವಾಗಿ ನಮ್ಮ ಸುಖಕ್ಕೆ ಹೆಚ್ಚು ಚಿಂತೆ ಪಡ ಕೂಡದಷ್ಟೆ. (ಸಮ ನೋಡು **೮೫—೮೭.**)

**೨೦.** ದಶವಾಕ್ಯದ ಬೇರೆ ಬೇರೆ ವಿಧಿಗಳು ಹೆಚ್ಚು ಕಡಿಮೆ ಎಲ್ಲಾ ನಿಷೇಧ ರೂಪವಾಗಿ (ಬಾರದು ಎಂಬವುಗಳಾಗಿ) ಇರುತ್ತವೆ; ಯಾಕಂದರೆ ಮನುಷ್ಯನಲ್ಲಿ ಪಾಪದ

ಅಭಿಲಾಷೆಯೂ ಮನಸ್ಸೂ ವೊದಲೆ ಉಂಟು. ಆದರೆ, ನಿಯಮವನ್ನು ತಕ್ಕ ಪ್ರಕಾರ ಪೂರೈಸ ಬೇಕಾದರೆ, ಕೆಟ್ಟದ್ದನ್ನು ಬಿಟ್ಟರೆ ಸಾಲದು, ಒಳ್ಳೇದನ್ನು ಸಂಪೂರ್ಣವಾಗಿ ಪ್ರತಿಷ್ಠೆ ಮಾಡ ಬೇಕು(೧). ಆದಕಾರಣ ಲುಥರನು ವಿವರಣೆಗಳಲ್ಲಿ ಈ ವಿಧಿರೂಪವಾದ (ಬೇಕು ಎಂಬುವ) ಮತ್ತೊಂದು ಕಡೆಯನ್ನು ವಿಶೇಷ ಮಾಡಿದ್ದು ನ್ಯಾಯ.

೧) "ಒಳ್ಳೇದನ್ನು ಮಾಡ ತಿಳಿದು ಮಾಡದವನಿಗೆ ಪಾಪ ಉಂಟು." (ಯಾಕೊ. ೪, ೧೭.)

**೨೧.** ಹತ್ತು ಕಟ್ಟಳೆಗಳಲ್ಲಿ ನ್ಯಾಯ ಜೀವದ ಕಡೆ ತುದಿಯಾಗಿರುವಂಥಾ ಕ್ರಿಯೆಯ ವಿಷಯ ಮಾತ್ರವೆ ಸ್ಪಷ್ಟವಾಗಿ ಹೇಳಿಯದೆ. ಆದರೆ ಕ್ರಿಯೆಗಳಿಗೆ ಕಾರಣವಾದ ಭಾವವು ಒಳ್ಳೇದು ಅಥವಾ ಕೆಟ್ಟದು ಆಗಿರುವ ಪ್ರಕಾರ, ಕ್ರಿಯೆ ಸಹಾ ಒಳ್ಳೇದು ಅಥವಾ ಕೆಟ್ಟದು ಆಗಿರುತ್ತದೆ. ಹೀಗಾಗಿ ಪಾಪವಾದ ಭಾವಕ್ಕೆ ಪಾಪದ ಕ್ರಿಯೆ ಕೂಡಿ ಇದ್ದರೂ, ಇಲ್ಲದಿದ್ದರೂ, ಆ ಭಾವವೆ ಕಟ್ಟಳೆಯ ಅತಿಕ್ರಮ. ಆದ್ದರಿಂದ, ಪ್ರತಿ ಕಟ್ಟಳೆಯ ವಿಷಯದಲ್ಲಿ ಒಳಗಿನ ಹೃದಯ ಸ್ಥಿತಿಯನ್ನು ವಿಚಾರಿಸ ಬೇಕಾಗುತ್ತದೆ. ಇದು ಮನುಷ್ಯರಿಗೆ ಅಡಗಿ ಇದ್ದರೂ, ದೇವರ ಮುಂದೆ ಪ್ರಕಟವಾಗಿರುತ್ತದೆ.

"ಮನುಷ್ಯನು ಕಣ್ಣು ನೋಟದಿಂದ ನೋಡುವನು, ಆದರೆ ಯೆಹೋವನು ಹೃದಯವನ್ನು ನೋಡುವನು." (೧ ಸಮು. ೧೬, ೭.) (ಕೀರ್ತ. ೭, ೯. ೧೩೯, ೨೩.—ಮತ್ತಾ. ೧೨, ೩೩. ೩೫.)

**೨೨.** ದಶವಾಕ್ಯದ ಪೀಠಿಕೆಯಲ್ಲಿರುವಂಥಾ "ನಿನ್ನ ದೇವರಾದ ಯೆಹೋವನು ನಾನೇ" ಎಂಬ ವಾಕ್ಯವು ವೊದಲನೆ ಕಟ್ಟಳೆಗೆ ಮಾತ್ರ ಶೇರಿದ್ದಾಗಿರುವದಿಲ್ಲಾ; ಅದು ಎಲ್ಲಾ ಕಟ್ಟಳೆಗಳಿಗೂ ಮೇಲ್ಬರಹವೆಂದು ನೆನಸ ತಕ್ಕದ್ದು. ಅದರಿಂದ ವಿಧೇಯತ್ವವನ್ನು ಕೇಳಲಿಕ್ಕೆ ನಿಯಮಕರ್ತನಿಗೆ ಅಧಿಕಾರ ಉಂಟೆಂಬದೂ, ವಿಧೇಯತ್ವವನ್ನು ತೋರಿಸಲಿಕ್ಕೆ ಜನಾಂಗವು ಹಂಗಿನಲ್ಲಿರುತ್ತದೆಂಬದೂ ಪ್ರತ್ಯಕ್ಷವಾಗುತ್ತದೆ.

**೨೩.** "ದಾಸಗೃಹವಾಗಿರುವ ಐಗುಪ್ತ ದೇಶದೊಳಗಿಂದ ನಿನ್ನನ್ನು ನಡಿಸಿದಂಥಾ ನಾನು" ಎಂಬ ಸಹವಾಕ್ಯವು ಇಸ್ರಯೇಲ್ಯರ ಹಾಗೆಯೆ ನಮಗೂ ಉಂಟಾಗಿರುತ್ತದೆ. ಹ್ಯಾಗಂದರೆ ಕರ್ತನು ನಮ್ಮನ್ನು ಸಹಾ (ಪಾಪವೆಂಬ) ಒಂದು ದಾಸಗೃಹದೊಳಗಿಂದ ತಪ್ಪಿಸಿದವನಾಗಿ, ಪರಲೋಕದ ಕನಾನಿಗೆ ನಮ್ಮನ್ನು ತರ ಬೇಕೆಂದಿದ್ದಾನೆ. ಈ ಸಹವಾಕ್ಯದಿಂದ ತಿಳಕೊಳ್ಳ ಬೇಕಾದ್ದು ಏನಂದರೆ: ವಿಧೇಯತ್ವದಿಂದ ಮಾತ್ರವಲ್ಲಾ, ಕೃತಜ್ಞತೆಯಿಂದಲೂ ಕಟ್ಟಳೆಗಳನ್ನು ಪೂರೈಸುವದಕ್ಕೆ ನಮ್ಮಲ್ಲಿ ಮನಸ್ಸು ಹುಟ್ಟ ತಕ್ಕದೆಂಬದೆ. (೧ ಯೋಹಾ. ೪, ೧೯.)



# ಮೊದಲನೆ ಪಾಲಿಗೆ.

## ದೇವರ ಕಡೆಯ ಹಂಗು.

---

## ಮೊದಲನೆ ಕಟ್ಟಳೆ.

### ನನ್ನ ಮುಂದೆ ನಿನಗೆ ಬೇರೆ ದೇವರುಗಳು ಇರ ಬಾರದು.

ಹಾಗಂದರೇನು?

ನಾವು ದೇವರಲ್ಲಿ ಎಲ್ಲಾದರ ಮೇಲೆ ಭಯವನ್ನೂ ಪ್ರೀತಿಯನ್ನೂ ಭರವಸವನ್ನೂ ಇಡ ಬೇಕು.

**೨೪.** ಮೊದಲನೆ ಕಟ್ಟಳೆಯಲ್ಲಿ ಎಲ್ಲಾ ಅಪದೈವಾರಾಧನೆಯು ನಿಷೇಧಿಸಿ ಅದೆ. ಹೃದಯವು ಜೀವವುಳ್ಳ ದೇವರಿಂದ ತೊಲಗಿ, ಬೇರೇನಾದರೂ ಒಬ್ಬನಾದ ಜೀವವುಳ್ಳ ದೇವರ ಹಾಗೆಯೆ ಇಲ್ಲವೆ ಇನ್ನೂ ಹೆಚ್ಚಾಗಿ ಪ್ರೀತಿ ಮಾಡಿ, ಸನ್ಮಾನಿಸಿ, ಭಯ ಪಟ್ಟರೆ, ಅದೇ ಅಪದೈವಾರಾಧನೆ. ಮನುಷ್ಯನು ಸ್ಥೂಲವಾದ ಅಜ್ಞಾನದಲ್ಲಿಯೂ ಆತ್ಮಿಕ ಕುರುಡತನದಲ್ಲಿಯೂ ಇದ್ದು, ನಿರ್ಮಾಣಿಕನ ಬದಲಾಗಿ ಯಾವದೊಂದು ನಿರ್ಮಾಣವನ್ನಾದರೂ ಆರಾಧಿಸಿ, ಅದೇ ದೇವರೆಂದು ಎಣಿಸುವದಾದರೆ, ಅಂಥಾದ್ದೇ ಸ್ಥೂಲವಾದ ಅಪದೈವಾರಾಧನೆ. (ಸಮ ನೋಡು. ಯೆಶಾ. ೪೨, ೮. — ರೋಮ. ೧, ೨೫. — ಕೀರ್ತ. ೧೩೫, ೧೫ — ೧೭.)

ಪರಿಶಿ. ೧. ಸ್ಥೂಲ ಅಪದೈವಾರಾಧನೆಯು ಎಲ್ಲಿಯೂ ಆದಿಯಿಂದ ಇದ್ದದ್ದಲ್ಲಾ, ಅದು ಸರ್ವತ್ರದಲ್ಲಿಯೂ ದೇವರ ದೆಶೆಯಿಂದ ಬಿದ್ದು ಹೋದ್ದಕ್ಕೂ ಕಾಡಾಗಿ ಹೋದ್ದಕ್ಕೂ ಹುಟ್ಟಿದ ಫಲವಾಗಿರುತ್ತದೆ. "ಯಾಕಂದರೆ, ದೇವರನ್ನು ಕುರಿತು ತಿಳಿಯ ತಕ್ಕದ್ದು ಅವರಲ್ಲಿ ತೋರಿ ಇದೆ; ಯಾಕಂದರೆ ದೇವರು ಅದನ್ನು ಅವರಿಗೆ ತೋರಿಸಿದ್ದಾನೆ. ಹ್ಯಾಗಂದರೆ, ಲೋಕಸೃಷ್ಟಿಯಿಂದ ಅವನ ಅದೃಶ್ಯವಾದವುಗಳು, ಅವನ ನಿತ್ಯಬಲವೂ, ದೈವತ್ವವೂ, ನಿರ್ಮಾಣಗಳಿಂದ ಗ್ರಹಿಸಲ್ಪಟ್ಟು ಪ್ರತ್ಯಕ್ಷವಾಗಿವೆ; ಆದ್ದರಿಂದ ನೆವನವಿಲ್ಲದವರಾಗಿದ್ದಾರೆ. ಯಾಕಂದರೆ ದೇವರನ್ನು ತಿಳಿದು, ಅವನನ್ನು ದೇವರೆಂದು ಮಹಿಮೆ ಪಡಿಸದೆ, ಸ್ತುತಿಸದೆ, ತಮ್ಮ ಯೋಜನೆಗಳಲ್ಲಿ ನಿಷ್ಪ್ರಯೋಜಕರಾದರು; ಅವರ ಬುದ್ಧಿ ಇಲ್ಲದ ಹೃದಯವು ಅಂಧಕಾರವಾಯಿತು. ತಾವು ಜ್ಞಾನಿಗಳೆಂದು ಅಂದು ಕೊಂಡು, ಹುಚ್ಚರಾದರು. ಮತ್ತು ಲಯವಿಲ್ಲದ ದೇವರ ಮಹಿಮೆಯನ್ನು, ಲಯವಾಗುವ ನರ ಪಕ್ಷಿ ಚ

ತುಷ್ಪಾದ ಕ್ರಿಮಿಗಳಿಗೆ ಸಮಾನ ರೂಪವಾಗಿ ಮಾರ್ಪಡಿಸಿದರು. ಆದಕಾರಣ ತಮ್ಮ ಶರೀರಗಳನ್ನು ತಮ್ಮಲ್ಲಿ ಅವಮಾನ ಪಡಿಸುವ ಹಾಗೆ, ದೇವರು ಅವರ ಹೃದಯಗಳ ಆಶೆಗಳ ಪ್ರಕಾರ, ಅವರನ್ನು ಅಶುದ್ಧತ್ವಕ್ಕೆ ಒಪ್ಪಿಸಿ ಬಿಟ್ಟನು. ಇವರು ದೇವರ ಸತ್ಯವನ್ನು ಸುಳ್ಳಿಗಾಗಿ ಮಾರ್ಪಡಿಸಿ, ನಿರ್ಮಾಣಿಕನಿಗಿಂತ ನಿರ್ಮಾಣವನ್ನು ಹೆಚ್ಚಾಗಿ ಪೂಜಿಸಿ, ಸೇವಿಸಿದರು." (ರೋಮ ೧, ೧೯. ೨೦. ಇತ್ಯಾದಿ.) ಆದರೆ ಕ್ರೈಸ್ತ ಧರ್ಮವು ಎಲ್ಲಿ ಪ್ರವೇಶಿಸುತ್ತದೋ, ಅಲ್ಲಿ ಅದರ ಬೆಳಕಿನಿಂದ ಈ ಕತ್ತಲೆಯು ಪರಿಹಾರವಾಗುತ್ತದೆ. ಆದರೆ ಇನ್ನೂ ೫೦೦ ಮಿಲ್ಲಿಯು, ಅಂದರೆ ೫೦ ಕೋಟಿ ಮನುಷ್ಯಪ್ರಾಣಿಗಳು ಎಲ್ಲಾ ಅಸಹ್ಯಗಳ ಸಹಿತವಾದ ಅತಿಸ್ಥೂಲ ವಿಗ್ರಹಾರಾಧನೆಯ ಅಂಧಕಾರದಲ್ಲಿ ಬದುಕುತ್ತಾರಲ್ಲಾ! ಹಾಗಾದರೆ ಪ್ರೇಷಿತ ಕಾರ್ಯಕ್ಕೆ ಬೇಕಾದ ವಾತ್ಸಲ್ಯಕ್ಕೂ ಪ್ರಾರ್ಥನೆಗೂ ಇದು ನಮ್ಮನ್ನು ಪ್ರೇರೇಪಿಸ ತಕ್ಕದ್ದಲ್ಲವೆ!

ಪರಿಶಿ. ೨. ಕ್ರೈಸ್ತ ಸಭೆಯಲ್ಲಿ ಸೇರಿದವರಾದ ನಾವು, ಇನ್ನೂ ಅದೈವಿಕ ಮನಸ್ಸು ನಮ್ಮಲ್ಲಿ ಇದ್ದರೂ, ಮೇಲೆ ಹೇಳಿದಂಥಾ ವಿಗ್ರಹಾರಾಧನೆಯ ಪಾಶಗಳಿಗೆ ಬಿಡುಗಡೆಯಾಗಿದ್ದೇವೆ. ಆದರೂ ಕ್ರೈಸ್ತರಾದ ನಮ್ಮಲ್ಲಿಯೂ ಒಂದು ತರದ ಸ್ಥೂಲವಿಗ್ರಹಾರಾಧನೆ ಉಂಟು; ಯಾವದಂದರೆ, ಅಪವಿಶ್ವಾಸವೆ. ಅಪವಿಶ್ವಾಸವುಳ್ಳ ಕ್ರೈಸ್ತರು ಜನಾಂಗಗಳವರ ಹಾಗೆಯೆ ಜೀವವುಳ್ಳ ದೇವರಲ್ಲಿ ದೃಢವಾಗಿ ನಂಬದೆ ಶಕುನ ಇತ್ಯಾದಿಗಳಿಗೆ ಸಹಾ ಭಯ ಪಟ್ಟು ನಡ ಕೊಳ್ಳುತ್ತಾರೆ. ಯಾಕಂದರೆ, ಯಾರಾದರೂ ಜೀವವುಳ್ಳ ದೇವರ ಮೇಲೆ ಭರವಸ ಇಡದಿದ್ದರೆ, ಏನೆಂದು ಹೇಳ ಕೂಡದ ಅದೃಷ್ಟದಿಂದ ಎಲ್ಲಾ ಆಗುತ್ತದೆಂದು ನಂಬುತ್ತಾರೆ.

**೨೫.** ಮನುಷ್ಯನು ಲೋಕದಲ್ಲಿ ಇರುವಂಥಾದ್ದ್ಯಾವದೊಂದಾದರೂ ದೇವರಲ್ಲವೆಂದು ಚನ್ನಾಗಿ ತಿಳಕೊಂಡರೂ, ಅದರಲ್ಲಿ ದೇವರಿಗಿಂತ ಹೆಚ್ಚು ಇಲ್ಲವೆ ದೇವರ ಹಾಗೆಯೆ ಭೀತಿಯನ್ನೂ ಪ್ರೀತಿಯನ್ನೂ ಭರವಸವನ್ನೂ ಇಡುವದೆ ಸೂಕ್ಷ್ಮ ಅಪದೈವಾರಾಧನೆ. ಸ್ಥೂಲ ಅಪದೈವಾರಾಧನೆಯು ತಿಳುವಿಕೆಯ ಕುರುಡತನವಾಗಿರುತ್ತದೆ, ಆದರೆ ಸೂಕ್ಷ್ಮ ಅಪದೈವಾರಾಧನೆಯು ಹೃದಯದ ಕುರುಡತನವಾಗಿರುತ್ತದೆ, ಆದ್ದರಿಂದಲೆ ಅದು ಎಷ್ಟೋ ಎಷ್ಟು ಕಠಿಣವೂ ಗಂಡಾಂತರ ಉಳ್ಳದ್ದೂ ಆಗಿರುತ್ತದಲ್ಲಾ! ಅದು ಸ್ವದೈವೀಕರಣವಾಗಿಯೂ, ನೆರೆಯವರ ದೈವೀಕರಣವಾಗಿಯೂ, ಅಥವಾ ಲೋಕದ ಮತ್ತು ಅದರ ಅಭಿಲಾಷೆಯ ದೈವೀಕರಣವಾಗಿಯೂ ಪ್ರತ್ಯಕ್ಷವಾಗುತ್ತದೆ.

**೨೬.** ಮನುಷ್ಯನು ದೇವರಿಗಿಂತ ತನ್ನನ್ನು ಹೆಚ್ಚು ಪ್ರೀತಿ ಮಾಡುವದೂ, ದೇವರ ಆಶೀರ್ವಾದ ಸಹಾಯ ಕೃಪೆಗಳಿಗಿಂತ ಹೆಚ್ಚಾಗಿ ಸ್ವಂತ ತ್ರಾಣದಲ್ಲಿಯೂ ಜ್ಞಾನದಲ್ಲಿಯೂ ಸದ್ಗುಣದಲ್ಲಿಯೂ ಭರವಸ ಇಡುವದೂ, ಸ್ವದೈವೀಕರಣ.

"ಜ್ಞಾನಿಯು ತನ್ನ ಜ್ಞಾನದಲ್ಲಿ ಹೆಚ್ಚಳ ಪಡದಿರಲಿ, ಮತ್ತು ಬಲಿಷ್ಠನು ತನ್ನ ಬಲದಲ್ಲಿ ಹೆಚ್ಚಳ ಪಡದಿರಲಿ, ಐಶ್ವರ್ಯವಂತನು ತನ್ನ ಐಶ್ವರ್ಯದಲ್ಲಿ ಹೆಚ್ಚಳ ಪಡದಿರಲಿ. ಆದರೆ ಹೆಚ್ಚಳ ಪಡುವವನು ಇದರಲ್ಲಿ ಹೆಚ್ಚಳ ಪಡಲಿ, ಯಾವದರಲ್ಲಂದರೆ, ಯೆಹೋವನಾದ ನಾನು ಭೂಮಿಯಲ್ಲಿ ಕೃಪೆಯನ್ನೂ ನ್ಯಾಯವನ್ನೂ ನೀತಿಯನ್ನೂ ನಡಿಸುವವನಾಗಿದ್ದೇನೆಂದು, ನನ್ನನ್ನು ಗ್ರಹಿಸಿ ತಿಳುಕೊಳ್ಳುವದರಲ್ಲಿಯೇ; ಯಾಕಂದರೆ, ಇವುಗಳಲ್ಲಿ ಸಂತೋಷ ಪಡುತ್ತೇನೆಂದು, ಯೆಹೋವನು ಅನ್ನುತ್ತಾನೆ." (ಯೆರೆ. ೯, ೨೩. ೨೪.)

**೨೭.** ತಂದೆ ತಾಯಿಗಳಲ್ಲಿಯಾಗಲಿ, ಹೆಂಡತಿ ಮಕ್ಕಳಲ್ಲಿಯಾಗಲಿ, ಸ್ನೇಹಿತ ಉಪಕಾರಿಗಳಲ್ಲಿಯಾಗಲಿ, ಅರಸು ಅಧಿಕಾರಿಗಳಲ್ಲಿಯಾಗಲಿ, ದೇವರಿಗಿಂತ ಹೆಚ್ಚಾಗಿ ಭೀತಿ ೧) ಪ್ರೀತಿ ೨) ಭರವಸಗಳನ್ನು ೩) ಇಡುವದೆ ನೆರೆಯವರ ದ್ವೈವೀಕರಣವು.

೧) "ಮನುಷ್ಯರಿಗಿಂತ ಹೆಚ್ಚಾಗಿ ದೇವರಿಗೆ ವಿಧೇಯರಾಗಿರಬೇಕು." (ಅ. ಕ್ರಿ. ೫, ೨೯.) ("ಪ್ರಾಣವನ್ನು ಕೊಲ್ಲಲಾರದೆ, ಶರೀರವನ್ನು ಕೊಲ್ಲುವವರಿಗೆ ಭಯ ಪಡುವದನ್ನು ಬಿಟ್ಟು, ಪ್ರಾಣವನ್ನೂ ಶರೀರವನ್ನೂ ನರಕದಲ್ಲಿ ನಾಶನ ಮಾಡ ಬಲ್ಲವನಿಗೆ ಭಯ ಪಡಿರಿ." ಮತ್ತಾ. ೧೦, ೨೮.)

೨) "ತಂದೆಯನ್ನಾದರೂ ತಾಯಿಯನ್ನಾದರೂ, ನನಗಿಂತ ಹೆಚ್ಚಾಗಿ ಸ್ನೇಹಿಸುವವನು ನನಗೆ ಯೋಗ್ಯನಲ್ಲ." (ಮತ್ತಾ. ೧೦, ೩೭.)

೩) "ಮನುಷ್ಯನಲ್ಲಿ ನಂಬಿಕೆ ಇಟ್ಟು, ಮಾಂಸವನ್ನು ತನ್ನ ತೋಳಾಗ ಮಾಡಿಕೊಂಡು, ಯೆಹೋವನ ಕಡೆಯಿಂದ ತನ್ನ ಹೃದಯವು ತೊಲಗುವ ಪುರುಷನಿಗೆ ಶಾಪ!" (ಯೆರೆ. ೧೭, ೫.)

**೨೮.** ಕಡೆಯಲ್ಲಿ, ಯಾರು ದೇವರಿಗಿಂತಲೂ ದೇವಾರಾಧನೆಗಿಂತಲೂ ಮಾನ, ಹೊಗಳಿಕೆ, ಹಮ್ಮು, ಡಂಭ, ಭೋಗ, ಕಾಮ, ದ್ರವ್ಯ ವಸ್ತುಗಳಲ್ಲಿ ಹೆಚ್ಚು ಮೆಚ್ಚುತ್ತಾನೊ, ಮತ್ತು ದೇವರ ಮನಸ್ಸಂತೋಷಕ್ಕಿಂತಲೂ ತನ್ನ ಆತ್ಮದ ರಕ್ಷಣೆಗಿಂತಲೂ ಮಾನ ಇತ್ಯಾದಿಗಳಿಗೋಸ್ಕರ ಹೆಚ್ಚು ಪ್ರಯತ್ನ ಮಾಡುತ್ತಾನೊ, ಅಂಥವನು ಲೋಕವನ್ನೂ ಅದರ ಅಭಿಲಾಷೆಯನ್ನೂ ದ್ವೈವೀಕರಿಸುತ್ತಾನೆ.

"ಲೋಕವನ್ನಾದರೂ, ಲೋಕದಲ್ಲಿರುವವುಗಳನ್ನಾದರೂ, ಪ್ರೀತಿ ಮಾಡ ಬೇಡಿರಿ. ಯಾವನಾದರೂ ಲೋಕವನ್ನು ಪ್ರೀತಿ ಮಾಡಿದರೆ, ಅವನಲ್ಲಿ ತಂದೆಯ ಪ್ರೀತಿಯು ಇಲ್ಲ. ಯಾಕಂದರೆ ಮಾಂಸದ ಆಶೆಯೂ, ಕಣ್ಣುಗಳ ಆಶೆಯೂ ಬದುಕಿನ ಹಮ್ಮೂ ಎಂಬ ಲೋಕದಲ್ಲಿರುವಂಥಾದ್ದೆಲ್ಲಾ ತಂದೆಯಿಂದಲ್ಲ, ಲೋಕದಿಂದ ಹುಟ್ಟುವದು. ಲೋಕವೂ, ಅದರ ಆಶೆಯೂ ಕಳೆದು ಹೋಗುತ್ತವೆ; ಆದರೆ ದೇವರ ಚಿತ್ತವನ್ನು ಮಾಡುವವನು ಎಂದೆಂದಿ

ಗೂ ನೆಲೆಯಾಗಿರುತ್ತಾನೆ." (೧ ಯೋಹಾ. ೨, ೧೫—೧೭.) "ಅವರ ಅಂತ್ಯವು ನಾಶನವೇ; ಅವರ ದೇವರು ಹೊಟ್ಟೆಯೇ; ಅವರ ಮಹಿಮೆಯು ಅವರ ನಾಚಿಕೆಯಲ್ಲಿಯೇ; ಅವರು ಭೂಲೋಕದವುಗಳ ಮೇಲೆ ಮನಸ್ಸಿಡುತ್ತಾರೆ." (ಫಿಲಿ. ३, ೧೯.)

**೨೯.** ದೇವಾರಾಧನೆಯೂ ನಿರ್ಮಾಣಾರಾಧನೆಯೂ, ಈವೆರಡೂ ಒಟ್ಟಿಗೆ ಇರ ಕೂಡದು. ನಿರ್ಮಾಣವನ್ನು ನಾವು ಪ್ರೀತಿ ಮಾಡಿ ಸನ್ಮಾನಿಸ ತಕ್ಕದ್ದೆಂಬದು ಸರಿ, ಮತ್ತು ದೇವರ ಮಹಿಮೆಯು ಅದರಲ್ಲಿ ಎಷ್ಟು ಅಧಿಕವಾಗಿ ಪ್ರತಿಬಿಂಬಿಸಿ ಇರುತ್ತದೊ, ಅಷ್ಟು ಹೆಚ್ಚಾಗಿ ಹಾಗೆ ಮಾಡ ತಕ್ಕದ್ದು, ಆದರೆ ನಿರ್ಮಾಣವನ್ನೆ ಪ್ರೀತಿ ಮಾಡಿ ಸನ್ಮಾನಿಸುತ್ತೇವೆಂಬ ಹಾಗಲ್ಲಾ, ಅದನ್ನು ನಮಗೆ ಮೇಲಾಗಿಯೂ ನಮಗೆ ಸಮಾನವಾಗಿಯೂ ನಮ್ಮ ಕೈ ಕೆಳಗೆಯೂ ಇಟ್ಟ ದೇವರನ್ನು ಅದರ ಪರಿಮುಖವಾಗಿ ಎಂಬ ಹಾಗೆ ಮಾತ್ರವೆ.

"ಯಾವನಾದರೂ ಇಬ್ಬರು ಯಜಮಾನರಿಗೆ ದಾಸನಾಗಿರಲಾರನು; ಹ್ಯಾಗಂದರೆ ಒಬ್ಬನನ್ನು ಹಗೆ ಮಾಡಿ, ಮತ್ತೊಬ್ಬನನ್ನು ಪ್ರೀತಿ ಮಾಡುವನು. ಇಲ್ಲವೆ ಒಬ್ಬನನ್ನು ಹೊಂದಿ ಕೊಂಡು, ಮತ್ತೊಬ್ಬನನ್ನು ಅಸಡ್ಡೆ ಮಾಡುವನು. ನೀವು ದೇವರಿಗೂ ಮಮ್ಮೋನಿಗೂ ದಾಸರಾಗಿರಲಾರಿರಿ." (ಮತ್ತಾ. ೬, ೨೪.) "ಕ್ರಿಸ್ತನಿಗೂ ಬೆಲಿಯಾಳನಿಗೂ ಒಪ್ಪಿಗೆ ಏನು?" (೨ ಕೊರಿ. ೬, ೧೫.) (೧ ಅರಸು. ೧೮, ೨೧.)

**೩೦.** ನಾವು ಎಲ್ಲಾದರ ಮೇಲೆ ದೇವರಲ್ಲಿ ಭೀತಿಯನ್ನೂ, ಪ್ರೀತಿಯನ್ನೂ, ಭರವಸವನ್ನೂ ಇಡುವದೆ ಮೊದಲನೆ ಕಟ್ಟಳೆಯ ಸಮವಾದ ಪೂರೈಸುವಿಕೆ.

### ಅ.) ಎಲ್ಲಾದರ ಮೇಲೆ ದೇವರಲ್ಲಿ ಭೀತಿ ಇಡುವದು.

**೩೧.** ನಾವು ನಮ್ಮ ಎಲ್ಲಾ ನಡತೆಯನ್ನೂ, ನಮ್ಮ ಎಲ್ಲಾ ಆಲೋಚನೆಗಳನ್ನೂ, ಮಾತುಗಳನ್ನೂ, ಕ್ರಿಯೆಗಳನ್ನೂ ದೇವರ ಮುಖದ ಬೆಳಕಿನಲ್ಲಿ ಇಟ್ಟು[೧] (ಕೀರ್ತ. ೯೦, ೮) ಸರ್ವಶಕ್ತನಾದ ದೇವರ ಪರಿಶುದ್ಧತ್ವವನ್ನೂ, ನೀತಿಯನ್ನೂ, ಸರ್ವತ್ರತೆಯನ್ನೂ, ಸರ್ವಜ್ಞತೆಯನ್ನೂ ಮನಸ್ಸಿಗೆ ಪೂರ್ಣ ಖಚಿತ ಮಾಡಿ ಕೊಳ್ಳುವದರಿಂದ ಎಲ್ಲಾ ಪಾಪಕ್ಕೆ ಹೆದರಿ, ಎಲ್ಲಾ ಒಳ್ಳೇದಕ್ಕೆ ಮನ ಒಪ್ಪಿಸ ಬಿಡುವದರಲ್ಲಿಯೆ[೨] ಜ್ಞಾನದ ಬುಡವಾಗಿರುವ ದೇವಭೀತಿಯುಂಟು. (ಕೀರ್ತ. ೧೧೧, ೧೦.)

೧) "ನಾನೇ ಸರ್ವಶಕ್ತನಾದ ದೇವರು; ನನ್ನ ಮುಂದೆ ನಡೆದು ಕೊಂಡು ಸಂಪೂರ್ಣವಾಗಿರು." (ಉತ್ಪ. ೧೭, ೧.)

೨) "ಪ್ರಾಣವನ್ನು ಕೊಲ್ಲಲಾರದೆ, ಶರೀರವನ್ನು ಕೊಲ್ಲುವವರಿಗೆ ಭಯ ಪಡುವದ

ನ್ನು ಬಿಟ್ಟು, ಪ್ರಾಣವನ್ನೂ ಶರೀರವನ್ನೂ ನರಕದಲ್ಲಿ ನಾಶನ ಮಾಡ ಬಲ್ಲವನಿಗೆ ಭಯ ಪಡಿರಿ.” (ಮತ್ತಾ. ೧೦, ೨೮.) (**೨೭**, ೧.) (ಯೆರೆ. ೧೦, ೬. ೭.—ಪ್ರಕಟ. ೧೫, ೪.)

**೩೧.** ಆದರೆ ಸಮವಾದ ದೇವಭೀತಿಯು ದಾಸನ ಭಯವಲ್ಲಾ, ಅಂದರೆ, ದೇವರ ಮುಖದಿಂದ ಓಡಿ ಹೋಗುವಂಥಾ, ಪಾಪಕ್ಕಾಗಿಯೆ ದುಃಖ ಪಡಲೊಲ್ಲದೆ ಭಯಂಕರವಾದ ನ್ಯಾಯತೀರಿಕೆಗಾಗಿ ನಡುಗುವಂಥಾ, ಮಾನಸಾಂತರವಿಲ್ಲದ ಪಾಪಿಯ ಭಯವಲ್ಲಾ; ಅದು ಮಕ್ಕಳಿಗೆ ತಕ್ಕ ಭೀತಿ, ಅಂದರೆ, ದೇವರ ಮುಂದೆಯೆ ನಡ ಕೊಂಡು ಹೊಸ ಪಾಪಗಳಿಂದ ಪರಲೋಕದಲ್ಲಿರುವ ತಂದೆಯನ್ನು ಕರ್ಕರೆ ಕೋಪ ಪಡಿಸುವದಕ್ಕೆ[೧] ಎಲ್ಲಾದಕ್ಕಿಂತ ಹೆಚ್ಚು ಹೆದರಿ ಹೇಸುವಂಥಾ ಭಕ್ತನ ಭೀತಿಯಾಗಿರುತ್ತದೆ. ದಾಸನ ಭಯವು ಪ್ರೀತಿಯೊಡನೆ ಇರ ಕೂಡದು; ಆದರೆ ಮಗುವಿನ ಭೀತಿಯು ಪ್ರೀತಿಯ ನೆಲಗಟ್ಟು[೨].

೧) “ನಾನು ಈ ದೊಡ್ಡ ಕೇಡನ್ನು ಮಾಡಿ, ದೇವರಿಗೆ ಪಾಪ ಮಾಡುವದು ಹ್ಯಾಗೆ?” (ಉತ್ಪ. ೩೯, ೯.)

೨) “ಪ್ರೀತಿಯಲ್ಲಿ ಭಯವಿಲ್ಲ. ಸಂಪೂರ್ಣವಾದ ಪ್ರೀತಿಯು ಭಯವನ್ನು ಹೊರಗೆ ಹಾಕುತ್ತದೆ. ಯಾಕಂದರೆ ಭಯವು ವೇದನೆಯುಳ್ಳದ್ದು; ಭಯ ಪಡುವವನು ಪ್ರೀತಿಯಲ್ಲಿ ಸಂಪೂರ್ಣವಾಗಿರುವವನಲ್ಲ.” (೧ ಯೋಹಾ. ೪, ೧೮.)

### ೩.) ಎಲ್ಲಾದರ ಮೇಲೆ ದೇವರಲ್ಲಿ ಪ್ರೀತಿ ಇಡುವದು.

**೩೨.** ತನ್ನನ್ನು ತಾನೆ ಬರಿದು ಮಾಡಿ ಕೊಳ್ಳುವದೂ, ತನ್ನನ್ನು ಅರ್ಪಿಸಿ ಬಿಡುವದೂ, ಅನ್ಯೋನ್ಯವೂ, ಭಾಗ್ಯವೂ, ಇವೆ ಪ್ರೀತಿಯ ಸ್ವಭಾವ (೧ ಕೊರಿ. ೧೩.). ಆದ್ದರಿಂದ ದೇವರ ಕಡೆಗೆ ನಮಗಿರುವ ಪ್ರೀತಿಯು ಸಮವಾದ್ದು ಆಗಿದ್ದರೆ, ಅದು ಆತನ ಸಂಗಡ ಐಕ್ಯವಾಗಿರ ಬೇಕೆಂದು ಬಹಳ ಅಪೇಕ್ಷಿಸುವದರಿಂದಲೂ[೧], ಆತನ ಸಂಗಡ ಇರುವ ಸಹವಾಸದಲ್ಲಿಯೆ ಭಾಗ್ಯವಂತರಾಗಿರುವದರಿಂದಲೂ[೨], ಆತನನ್ನು ನಡೆನುಡಿಗಳಿಂದ ಲೋಕದ ಮುಂದೆ ಅವಶ್ಯವಾಗಿ ಸ್ತುತಿಸ ಬೇಕೆಂದಿರುವದರಿಂದಲೂ[೩], ಆತನ ಮನಸ್ಸಂತೋಷಕ್ಕೆ ಬದುಕ ಪ್ರಯತ್ನ ಮಾಡುವದರಿಂದಲೂ[೪], ಆತನ ಹೆಸರಿಗೋಸ್ಕರವೂ ಅರಿಕೆಗೋಸ್ಕರವೂ ಸಂತೋಷವಾಗಿ ಕಷ್ಟ ತಾಳಿ ಕೊಳ್ಳುವದರಿಂದಲೂ[೫], ಕಾಣ ಬರುತ್ತದೆ.

೧) “ಆಕಾಶದಲ್ಲಿ ನನಗೆ ಯಾರು? ನಿನ್ನ ಹೊರ್ತಾಗಿ ಭೂಮಿಯಲ್ಲಿ ನನಗೆ ಸಂತೋಷವಿಲ್ಲ. ನನ್ನ ಮಾಂಸವೂ ನನ್ನ ಹೃದಯವೂ ಕಳೆಯುತ್ತವೆ; ದೇವರು ಯುಗಯುಗಕ್ಕೂ ನನ್ನ ಹೃದಯದ ಬಂಡೆಯೂ ನನ್ನ ಪಾಲೂ ಆಗಿದ್ದಾನೆ.” (ಕೀರ್ತ. ೭೩, ೨೫. ೨೬.)

"ದುಪ್ಪಿಯು ನೀರಿನ ತೊರೆಗಳನ್ನು ಹ್ಯಾಗೆ ಬಯಸುವದೋ, ಹಾಗೆಯೇ ನನ್ನ ಪ್ರಾಣವು ನಿನ್ನನ್ನು ಬಯಸುತ್ತದೆ, ದೇವರೇ. ದೇವರಿಗೋಸ್ಕರ, ಜೀವವುಳ್ಳ ದೇವರಿಗೋಸ್ಕರ ನನ್ನ ಪ್ರಾಣವು ದಾಹಗೊಳ್ಳುತ್ತದೆ; ಯಾವಾಗ ಬಂದು, ದೇವರ ಮುಂದೆ ಕಾಣಿಸಿ ಕೊಳ್ಳುವೆನು?" (ಕೀರ್ತ. ೪೨, ೧. ೨.) (ಯೆಶಾ. ೨೬, ೮. ೯.)

೨) "ನಿನ್ನನ್ನು ನನ್ನ ಹಾಸಿಗೆಯ ಮೇಲೆ ಜ್ಞಾಪಕ ಮಾಡಿ ಕೊಳ್ಳುವಾಗ, ರಾತ್ರಿಯ ಝಾವುಗಳಲ್ಲಿ ನಿನ್ನನ್ನು ಧ್ಯಾನಿಸುತ್ತೇನೆ." (ಕೀರ್ತ. ೬೩, ೬.)

೩) "ನಾನು ಬದುಕುವ ಮಟ್ಟಿಗೂ ಯೆಹೋವನನ್ನು ಸ್ತುತಿಸುವೆನು; ನಾನು ಇರುವ ಮಟ್ಟಿಗೂ ನನ್ನ ದೇವರಿಗೆ ಕೀರ್ತಿಸುವೆನು." (ಕೀರ್ತ. ೧೪೬, ೨.) (ಕೀರ್ತ. ೧೦೩, ೧. ೫.)

೪) "ಅವನ ಕಟ್ಟಳೆಗಳನ್ನು ಕೈಕೊಳ್ಳುವದೇ ದೇವರ ಪ್ರೀತಿಯಾಗಿದೆ. ಮತ್ತು ಅವನ ಕಟ್ಟಳೆಗಳು ಭಾರವಾದವುಗಳಲ್ಲ." (೧ ಯೋಹಾ. ೫, ೩.)

೫) "ಇವರು, (ಅಪೊಸ್ತಲರು) ಯೇಸುವಿನ ಹೆಸರಿನ ನಿಮಿತ್ತ ನಿಂದೆ ಪಡುವದಕ್ಕೆ ಯೋಗ್ಯರಾಗಿ ಎಣಿಸಲ್ಪಟ್ಟೆವೆಂದು, ಸಂತೋಷ ಪಟ್ಟು, ಮಂತ್ರಿ ಸಭೆಯ ಸಮುಖದಿಂದ ಹೊರಟು ಹೋದರು." (ಅ. ಕ್ರಿ. ೫, ೪೧.)

**೩೪.** ದೇವರ ಕಡೆಗಿರುವ ನಮ್ಮ ಪ್ರೀತಿಯ ತ್ರಾಣವೂ ಬಲವೂ ನಮ್ಮ ಕಡೆಗಿರುವ ದೇವರ ಪ್ರೀತಿಯಲ್ಲಿ ಆಧಾರಗೊಂಡು ಅದೆ. ಇದರಿಂದಲೆ ಅದಕ್ಕೆ ಯಾವಾಗಲೂ ಆಹಾರವೂ ಬಲವೂ ಬರುತ್ತದೆ.

"ಕ್ರಿಸ್ತನ ಪ್ರೀತಿಗೆ ನಮ್ಮನ್ನು ಅಗಲಿಸುವವನ್ಯಾರು? ಉಪದ್ರವೋ? ಸಂಕಟವೋ? ಹಿಂಸೆಯೋ? ಬರವೋ? ಬೆತ್ತಲೆಯೋ? ಗಂಡಾಂತರವೋ? ಖಡ್ಗವೋ?—ಆದರೆ ಇವೆಲ್ಲವುಗಳಲ್ಲಿ ನಮ್ಮನ್ನು ಪ್ರೀತಿ ಮಾಡಿದವನ ಮುಖಾಂತರ ಅಧಿಕ ಜಯಶಾಲಿಗಳಾಗುತ್ತೇವೆ. ಯಾಕಂದರೆ ಮರಣವಾದರೂ, ಜೀವವಾದರೂ, ದೂತರಾದರೂ, ಅಧಿಕಾರಗಳಾದರೂ, ಬಲಗಳಾದರೂ, ಇರುವವುಗಳಾದರೂ, ಬರುವವುಗಳಾದರೂ, ಎತ್ತರವಾದರೂ, ಆಳವಾದರೂ, ಬೇರೆ ಯಾವ ಸೃಷ್ಟಿಯಾದರೂ, ನಮ್ಮನ್ನು ನಮ್ಮ ಕರ್ತನಾದ ಕ್ರಿಸ್ತ ಯೇಸುವಿನಲ್ಲಿರುವ ದೇವರ ಪ್ರೀತಿಗೆ ಅಗಲಿಸಲಾರದೆಂದು, ನಿಶ್ಚಯಿಸಿ ಕೊಂಡಿದ್ದೇನೆ." (ರೋಮ. ೮, ೩೫—೩೯.) "ಇದರಲ್ಲಿ ಪ್ರೀತಿ ಉಂಟು; ನಾವು ದೇವರನ್ನು ಪ್ರೀತಿ ಮಾಡಿದ್ದರಲ್ಲಿ ಅಲ್ಲ; ಅವನು ನಮ್ಮನ್ನು ಪ್ರೀತಿ ಮಾಡಿದ್ದರಲ್ಲಿಯೇ." (೧ ಯೋಹಾ. ೪, ೧೦.)

**೩೫.** ದೇವರು ಮಾತ್ರವೆ ಒಳ್ಳೆಯವನಾಗಿಯೂ ಎಲ್ಲಾ ಒಳ್ಳೇದರ ಮೂಲವರ್ತೆಯಾಗಿಯೂ ಇರುವದರಿಂದಲೂ[೧], ಅವನು ನಮ್ಮನ್ನು ಮೊದಲು ಪ್ರೀತಿ ಮಾಡಿದ್ದರಿಂದ

ಲೂ ೨), ದೇವರ ಕಡೆಯ ಪ್ರೀತಿಯು ಇಹಪರದಲ್ಲಿಯೂ ನಮ್ಮನ್ನು ಭಾಗ್ಯ ಪಡಿಸು ವದರಿಂದಲೂ ೩), ನಾವು ಎಲ್ಲಾದರ ಮೇಲೆ ದೇವರಲ್ಲಿ ಪ್ರೀತಿ ಇಡ ತಕ್ಕದ್ದು.

೧) "ದೇವರೊಬ್ಬನೇ ಹೊರ್ತು ಒಳ್ಳೆಯವನು ಯಾವನೂ ಇಲ್ಲ." (ಮಾರ್ಕ. ೧೦, ೧೮.) "ಎಲ್ಲಾ ಒಳ್ಳೇ ವರಗಳೂ, ಎಲ್ಲಾ ಸಂಪೂರ್ಣ ದಾನಗಳೂ, ಮೇಲಿನಿಂದ ಉಂಟಾಗಿ, ಬೆಳಕುಗಳ ತಂದೆಯಿಂದ ಇಳಿದು ಬರುತ್ತವೆ." (ಯಾಕೊ. ೧, ೧೭.)

೨) "ಅವನು ಮೊದಲು ನಮ್ಮನ್ನು ಪ್ರೀತಿ ಮಾಡಿದ್ದರಿಂದ, ನಾವು ಅವನನ್ನು ಪ್ರೀತಿ ಮಾಡುತ್ತೇವೆ." (೧ ಯೋಹಾ. ೪, ೧೯.)

೩) "ದೇವರನ್ನು ಪ್ರೀತಿ ಮಾಡುವವರಿಗೆ ಮೇಲಿಗಾಗಿ ಎಲ್ಲವುಗಳು ಕೈಕೂಡಿ ಬರುತ್ತವೆಂದು ಬಲ್ಲೆವು." (ರೋಮಾ. ೮, ೨೮.) "ಭಕ್ತಿಯು ಎಲ್ಲಕ್ಕೂ ಪ್ರಯೋಜನವಾಗಿದೆ. ಅದಕ್ಕೆ ಇಹ ಪರ ಜೀವಗಳ ವಾಗ್ದತ್ತವು ಉಂಟು." (೧ ತಿಮೊ. ೪, ೮.)

## ಉ.) ಎಲ್ಲಾದರ ಮೇಲೆ ದೇವರಲ್ಲಿ ಭರವಸ ಇಡುವದು.

**೩೬.** ದೇವರಲ್ಲಿ ಭರವಸವಿಡುವದಂದರೆ: ನಡಿಸುವ ದೇವರಿಗೆ ತನ್ನನ್ನು ಸಂತೋಷದಲ್ಲಿಯೂ ನಂಬಿಕೆಯಲ್ಲಿಯೂ ಒಪ್ಪಿಸಿ ಕೊಟ್ಟು ೧), ಶರೀರ ಪ್ರಾಣಗಳ ಸಮಸ್ತ ಸಂಕಷ್ಟಗಳಲ್ಲಿಯೂ, ಬದುಕುವಾಗಲೂ ಸಾಯುವಾಗಲೂ ಕರ್ತನನ್ನು ತನ್ನ ಆಶ್ರಯ ಮಾಡಿಕೊಂಡು ೨), ಸಹಾಯವು ಬರಲಿಕ್ಕೆ ತಡವಾದರೆ ನಿಧಾನವಾಗಿ ಕಾದು ಕೊಂಡಿದ್ದು ೩), ಆತನು ಉತ್ತಮ ರೀತಿಯಾಗಿ ಎಲ್ಲಾ ನಡಿಸುವನೆಂತಾ ಧಿಟವಾಗಿ ನಂಬುವದೆ ೪).

೧) "ನಿನ್ನ ಮಾರ್ಗವನ್ನು ಯೆಹೋವನ ಮೇಲೆ ಹೊರಳಿಸು; ಅವನಲ್ಲಿ ಭರವಸವಿಡು; ಆಗಲವನು ನಡಿಸುವನು." (ಕೀರ್ತ. ೩೭, ೫.) "ಯೆಹೋವನಲ್ಲಿ ನಂಬಿಕೆ ಇಡುವಂಥಾ ಯೆಹೋವನನ್ನು ತನ್ನ ನಂಬಿಕೆಯಾಗಿ ಮಾಡಿ ಕೊಳ್ಳುವಂಥಾ ಪುರುಷನಿಗೆ ಆಶೀರ್ವಾದ!" (ಯೆರೆ. ೧೭, ೭.) (ಕೀರ್ತ. ೧೩, ೬. ೯೧, ೧. ೨.)

೨) "ನನ್ನ ಕಣ್ಣುಗಳನ್ನು ಬೆಟ್ಟಗಳ ಕಡೆಗೆ ಎತ್ತುತ್ತೇನೆ; ನನ್ನ ಸಹಾಯವು ಎಲ್ಲಿಂದ ಬರುವದು? ಆಕಾಶವನ್ನೂ ಭೂಮಿಯನ್ನೂ ಉಂಟು ಮಾಡಿದ ಯೆಹೋವನ ಬಳಿಯಿಂದಲೇ ನನ್ನ ಸಹಾಯವು ಆಗುತ್ತದೆ. ಅವನು ನಿನ್ನ ಕಾಲನ್ನು ಕದಲಲೀಸದಿರಲಿ; ನಿನ್ನನ್ನು ಕಾಪಾಡುವವನು ತೂಕಡಿಸದಿರಲಿ. ಇಗೋ, ಇಸ್ರಯೇಲನ್ನು ಕಾಪಾಡುವವನು ತೂಕಡಿಸುವದಿಲ್ಲ, ನಿದ್ದೆ ಮಾಡುವದಿಲ್ಲ." (ಕೀರ್ತ. ೧೨೧, ೧—೪.) "ಕರ್ತನೇ, ತಲತಲಾಂತರಗಳಲ್ಲಿ ನೀನು ನಮ್ಮ ವಾಸಸ್ಥಾನವಾಗಿದ್ದೀ." (ಕೀರ್ತ. ೯೦, ೧.) (ಯೆರೆ. ೧೬, ೧೯.)

೩) "ನನ್ನ ಪ್ರಾಣವೇ, ಯಾಕೆ ಕುಗ್ಗುತ್ತೀ? ಯಾಕೆ ನನ್ನಲ್ಲಿ ಕುದಿಯುತ್ತೀ? ದೇವರನ್ನು ಎದುರು ನೋಡು; ಯಾಕಂದರೆ ನನ್ನ ಮುಖದ ರಕ್ಷಣೆಯೂ ನನ್ನ ದೇವರೂ

ಆಗಿರುವವನನ್ನು ಇನ್ನೂ ಕೊಂಡಾಡುವೆನು." (ಕೀರ್ತ. ೪೨, ೧೧.) "ಶಾಂತಿಯಲ್ಲಿಯೂ ನಂಬಿಕೆಯಲ್ಲಿಯೂ ನಿಮ್ಮ ಬಲವಿರುವದು." (ಯೆಶಾ. ೩೦, ೧೫.) "ಯೆಹೋವನನ್ನು ಕಾದು ಕೊಳ್ಳುವವರು ಹೊಸ ಬಲವನ್ನು ತಂದು ಕೊಳ್ಳುವರು; ಹದ್ದುಗಳಂತೆ ರೆಕ್ಕೆಗಳಿಂದ ಏರುವರು; ದಣಿಯದೆ ಓಡುವರು; ಆಯಾಸ ಪಡದೆ ನಡಿಯುವರು". (ಯೆಶಾ. ೪೦, ೩೧.) (ಇಬ್ರಿ. ೧೦, ೩೬.)

೪) "ತಾಳ್ಮೆಯು ಪರೀಕ್ಷೆಯನ್ನು, ಪರೀಕ್ಷೆಯು ನಿರೀಕ್ಷೆಯನ್ನು, ಉಂಟು ಮಾಡುತ್ತದೆ. ನಿರೀಕ್ಷೆಯಾದರೆ, ನಾಚಿಕೆ ಪಡಿಸುವದಿಲ್ಲ." (ರೋಮಾ. ೫, ೪. ೫.) "ಯೆಹೋವನ ಕ್ರಿಯೆಗಳನ್ನು ಜ್ಞಾಪಕ ಮಾಡಿ ಕೊಳ್ಳುವೆನು; ನಿಶ್ಚಯವಾಗಿ ನಿನ್ನ ಪೂರ್ವದ ಅದ್ಭುತಗಳನ್ನು ಜ್ಞಾಪಕ ಮಾಡಿ ಕೊಳ್ಳುವೆನು." (ಕೀರ್ತ. ೭೭, ೧೧.) "ಅವನಿಗೆ ಆಶ್ಚರ್ಯವಾದ ಆಲೋಚನೆಯೂ ದೊಡ್ಡ ಚಾತುರ್ಯವೂ ಉಂಟು." (ಯೆಶಾ. ೨೮, ೨೯.)

**೩೭.** ಚಿಂತೆ ಪಡುವಂಥಾದ್ದು ದೇವ ಭರವಸದೊಡನೆ ಸರ್ವಥಾ ಇರ ಕೂಡದು. ಯಾಕಂದರೆ ಚಿಂತೆ ಪಡುವದು ತನಗೆ ತಾನೆ ಸಹಾಯ ಮಾಡಿ ಕೊಳ್ಳ ಬೇಕೆಂಬ ಹುಚ್ಚು ಪಾಪವುಳ್ಳ ಆಲೋಚನೆಯಲ್ಲಿಯೂ, ಲೋಕಕ್ಕೆ ದೇವರೆ ಇಲ್ಲವೆಂಬ ಹಾಗೆ ನೆನಸುವ ನಿಸ್ಸಂತೋಷವಾದ ಜನಾಂಗಗಳ ಬುದ್ಧಿಯಲ್ಲಿಯೂ ಆಧಾರ ಪಡ ಕೊಳ್ಳುತ್ತದೆ. ಹೀಗಿರುವದರಿಂದ ಚಿಂತೆ ಪಡುವಂಥಾದ್ದು ನಮ್ಮ ಕೆಲಸವಲ್ಲಾ, ಅದು ದೇವರದು. ನಮ್ಮ ಕೆಲಸವು ಇಷ್ಟೆ: ಪ್ರಾರ್ಥನೆ ಮಾಡುವದೂ ಕಷ್ಟ ಮಾಡುವದೂ, ಮತ್ತಿದು ಚಿಂತೆ ಪಡುವದರ ಪ್ರತೀಕಾರ.

"ಆದಕಾರಣ ನಿಮಗೆ ಹೇಳುತ್ತೇನೆ, ನಿಮ್ಮ ಪ್ರಾಣಕ್ಕೋಸ್ಕರ ಏನು ಉಣ್ಣುವ, ಏನು ಕುಡಿಯುವ ಎಂದೂ, ನಿಮ್ಮ ಶರೀರಕ್ಕೋಸ್ಕರ ಏನು ಹೊದ್ದು ಕೊಳ್ಳುವ ಎಂದೂ, ಚಿಂತೆ ಪಡ ಬೇಡಿರಿ." ಇತ್ಯಾದಿ. (ಮತ್ತಾ. ೬, ೨೫ — ೩೪.) "ನಿಮ್ಮ ಚಿಂತೆಯನ್ನೆಲ್ಲಾ ಅವನ ಮೇಲೆ ಹಾಕಿರಿ; ಯಾಕಂದರೆ ಅವನು ನಿಮಗೋಸ್ಕರ ಚಿಂತಿಸುತ್ತಾನೆ." (೧ ಪೇತ್ರ. ೫, ೭.) "ಯಾವದಕ್ಕೂ ಚಿಂತೆ ಪಡ ಬೇಡಿರಿ; ಆದರೆ ಎಲ್ಲಾದರಲ್ಲಿ ಪ್ರಾರ್ಥನೆಯಿಂದಲೂ ವಿಜ್ಞಾಪನೆಯಿಂದಲೂ ನಿಮ್ಮ ಬಿನ್ನಹಗಳು ಸ್ತೋತ್ರದ ಸಂಗಡ ದೇವರಿಗೆ ಅರಿಕೆಯಾಗಲಿ." (ಫಿಲಿ. ೪, ೬.) "ಶಾಂತವಾಗಿರ ಪ್ರಯಾಸ ಪಟ್ಟು, ಸ್ವಂತ ಕೆಲಸಗಳನ್ನು ನೋಡಿ ಕೊಂಡು, ನಿಮ್ಮ ಸ್ವಂತ ಕೈಗಳಿಂದ ಕಷ್ಟ ಮಾಡ ಬೇಕು." (೧ ಥೆಸ್ಸ. ೪, ೧೨.) (ಕೀರ್ತ. ೧೨೭, ೧. ೨.)



## ಎರಡನೆ ಕಟ್ಟಳೆ.

**೩೮.** "ನೀನು ನಿನಗೆ ವಿಗ್ರಹವನ್ನಾಗಲಿ ಪ್ರತಿಮೆಯನ್ನಾಗಲಿ ಮಾಡಿ ಕೊಳ್ಳ ಬಾರದು. ಅವುಗಳನ್ನು ಆರಾಧಿಸಲೂ ಸೇವಿಸಲೂ ಬಾರದು" ಎಂಬ ಈ ಕಟ್ಟಳೆಯು ಲುಥರನ ದಶವಾಕ್ಯವಿಭಾಗದ ಪ್ರಕಾರ. ಮೊದಲನೆ ಕಟ್ಟಳೆಗೆ ಕೂಡಿಸಿ ಅದೆ. ಆದರೂ ಅದನ್ನು ಪುನರೂಪಿತಸಭೆಯ ಹಾಗೆ ಪ್ರತ್ಯೇಕವಾದ ಎರಡನೆ ಕಟ್ಟಳೆಯಾಗಿ ಎಣಿಸುವದು ಒಳ್ಳೇದು. ಆಗೈ ಒಂಭತ್ತನೆ ಹತ್ತನೆ ಕಟ್ಟಳೆಗಳು ಒಟ್ಟಿಗೆ ಒಂದೆ ಹತ್ತನೆ ಕಟ್ಟಳೆಯಾಗುತ್ತವೆ. ಹ್ಯಾಗೂ ಲುಥರನ ಪ್ರಕಾರ ಒಂಭತ್ತನೆ ಹತ್ತನೆ ಕಟ್ಟಳೆಗಳು ನಿಷೇಧಿಸುವಂಥಾದ್ದಕ್ಕಿಂತ ಸುಲಭವಾಗಿ, ಅಪದ್ವೈವಾರಾಧನೆಯುನ್ನೂ ವಿಗ್ರಹಾರಾಧನೆಯನ್ನೂ ಬೇರೆ ಬೇರೆ ಮಾಡ ಬಹುದು. ಆಗೈ ಅಪದ್ವೈವಾರಾಧನೆ ಎಂದರೆ ಸುಳ್ಳು ದೇವರುಗಳ ಆರಾಧನೆ ಎಂದೂ, ವಿಗ್ರಹಾರಾಧನೆ ಎಂದರೆ ಸತ್ಯ ದೇವರ ಸುಳ್ಳು ಆರಾಧನೆ ಎಂದೂ ಹೇಳ ಬಹುದು. (ಇದನ್ನು ಆರೋನನು [ಹೊರ. ೩೨. ೫.] ನಡಸಿದನು.)

**೩೯.** ಸ್ಥೂಲ ವಿಗ್ರಹಾರಾಧನೆ ಎಂಬದುಂಟು. (ಹಾಗೆ ಇಸ್ರಾಯೇಲರು ಮಾಡಿದ ಕರುಗಳ ಆರಾಧನೆ.) ಅಂಥಾ ಆರಾಧಕನು, ದೇವರು ಆತ್ಮವೆಂಬದನ್ನೂ, ಆತ್ಮವಾಗಿರುವ ಕಾರಣ ಆತ್ಮದಿಂದಲೂ ಸತ್ಯದಿಂದಲೂ ಆರಾಧಿಸಲ್ಪಡ ಇಚ್ಛೈಸುತ್ತಾನೆಂಬದನ್ನೂ (ಯೋಹಾ. ೪, ೧೪.) ಮರತು, ಅದೃಶ್ಯವಾದ ದೇವರಿಗೆ ಮಾತ್ರ ಯೋಗ್ಯವಾಗಿರುವ ಆರಾಧನೆಯನ್ನು ದೃಶ್ಯವಾದ ರೂಪಕ್ಕೂ ಪ್ರತಿಮೆಗೂ ಮಾಡುತ್ತಾನೆ.

**೪೦.** ಈ ದಿವ್ಯಕಟ್ಟಳೆಯಲ್ಲಿ ನಮಗೂ ಒಂದು ಚುರುಕಾದ ಗದರಿಕೆ ಉಂಟು. ಹ್ಯಾಗಂದರೆ, ಕೈಗಳಿಂದ ಮರ ಕಲ್ಲು ಲೋಹ ವರ್ಣಗಳಲ್ಲಿ ಮಾತ್ರವೆ ಅಲ್ಲಾ, ಬುದ್ಧಿಯಿಂದಲೂ ಆಲೋಚನೆಗಳಿಂದಲೂ ಹೃದಯದಲ್ಲಿಯೂ ತಿಳುವಿಕೆಯಲ್ಲಿಯೂ ದೇವರನ್ನು ಕುರಿತು ಅದೈವಿಕ ರೂಪಗಳನ್ನು ಮಾಡಲಿಕ್ಕೆ ಆಗುತ್ತದೆ. ಸೂಕ್ಷ್ಮವಾದ ವಿಗ್ರಹಾರಾಧನೆ ಎಂಬದು ಸಹಾ ಉಂಟು, ಮತ್ತು ಇದು ಸ್ಥೂಲವಾದ್ದಕ್ಕಿಂತ ಗಂಡಾಂತರವುಳ್ಳದ್ದು. ಈ ಸೂಕ್ಷ್ಮ ವಿಗ್ರಹಾರಾಧನೆಯಲ್ಲಿ ಬೀಳುವದು ಹ್ಯಾಗಂದರೆ, ದೇವರು ತನ್ನ ಪ್ರಕಟಣೆಯ ವಾಕ್ಯದಲ್ಲಿ ತನ್ನನ್ನು ತಾನೆ ಚಿತ್ರಿಸಿ ವರ್ಣಿಸಿ ಇರುವ ಪ್ರಕಾರವಲ್ಲದೆ, ಬೇರೊಂದು ತರವಾಗಿ ದೇವರ ಸ್ವಭಾವವನ್ನೂ ಗುಣಗಳನ್ನೂ ನೆನಸಿ ನಂಬುವದರಿಂದಲೆ.

"ಯಾಕಂದರೆ ಅವರು ಸ್ವಸ್ಥ ಭೋಧನೆಯನ್ನು ತಾಳದೆ ತೀಟೆ ಕಿವಿಗಳ್ಳಾಗಿ, ಸ್ವಂತ ಇಚ್ಛೆಗಳ ಪ್ರಕಾರ ತಮಗೆ ತಾವೇ ಭೋಧಕರನ್ನು ಕೂಡಿಸಿ ಕೊಂಡು, ಸತ್ಯದ ಕಡೆಯಿಂದ

ಕಿವಿಯನ್ನು ತಿರುಗಿಸಿ, ಕಟ್ಟುಕಥೆಗಳಿಗೆ ತಿರುಗಿ ಕೊಳ್ಳುವ ಸಮಯವು ಬರುವದು." (೨ ತಿಮೊ. ೪, ೩. ೪.)

**೪೧.** ಮೊದಲನೆ ಕಟ್ಟಳೆಯು ಎಲ್ಲಾ ಕಟ್ಟಳೆಗಳನ್ನು ಆವರಿಸಿ ಕೊಳ್ಳುತ್ತದೆ. ಹ್ಯಾಗಂದರೆ, ದೇವಭೀತಿಯೂ ದೇವಪ್ರೀತಿಯೂ ನಮ್ಮ ಎಲ್ಲಾ ಮಾಡು ಬಿಡುಗಳಿಗೆ ವರ್ತೆಯಾಗಿರ ಬೇಕು[೧]. ಈ ವರ್ತೆಯಿಂದ ಬಾರದಂಥಾದ್ದೆಲ್ಲಾ, ಅದು ತೋರಿಕೆಗೆ ಎಷ್ಟು ಒಳ್ಳೇದಾಗಿ ಕಂಡರೂ, ಪಾಪವೂ ದೇವರಿಗೆ ಅಹಿತವಾದದ್ದೂ, ಆಗಿರುತ್ತದೆ[೨]. ಆದಕಾರಣ ಲುಥರನು ಸಹಾ ಒಂದೊಂದು ಕಟ್ಟಳೆಯ ವಿವರಣೆಯಲ್ಲಿ "ನಾವು ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು" ಎಂಬ ಮಾತುಗಳಿಂದ ಆರಂಭಿಸಿ, ಮೊದಲನೆ ಕಟ್ಟಳೆ ಒಂದರಿಂದಲೆ ಎಲ್ಲಾ ಬೇರೆ ಕಟ್ಟಳೆಗಳ ಅನುಸರಣೆ ಉಂಟಾಗುತ್ತದೆಂದು ಮಾಪಿದ್ದು ಬಹು ಪರಿಷ್ಕಾರವಾಗಿರುತ್ತದೆ.

೧) "ಪ್ರೀತಿಯು ನ್ಯಾಯಪ್ರಮಾಣದ ಪೂರ್ತಿಯಾಗಿದೆ." (ರೋಮಾ. ೧೩, ೧೦.) "ಆಜ್ಞೆಯ ಪೂರ್ಣತೆ ಏನಂದರೆ, ಶುದ್ಧ ಹೃದಯದಿಂದಲೂ, ಒಳ್ಳೇ ಮನಸ್ಸಾಕ್ಷಿಯಿಂದಲೂ, ನಿಷ್ಕಪಟವಾದ ವಿಶ್ವಾಸದಿಂದಲೂ, ಉಂಟಾಗುವ ಪ್ರೀತಿಯೇ." (೧ ತಿಮೊ. ೧, ೫.) "ನಿನ್ನ ದೇವರಾದ ಕರ್ತನನ್ನು ನಿನ್ನ ಪೂರ್ಣ ಹೃದಯದಿಂದಲೂ, ನಿನ್ನ ಪೂರ್ಣ ಪ್ರಾಣದಿಂದಲೂ, ನಿನ್ನ ಪೂರ್ಣ ಬುದ್ಧಿಯಿಂದಲೂ, ಪ್ರೀತಿ ಮಾಡು. ಈ ಕಟ್ಟಳೆಯು ಮೊದಲನೆದೂ, ದೊಡ್ಡದೂ, ಆಗಿದೆ. ಮತ್ತು ಎರಡನೆದು ಅದಕ್ಕೆ ಸಮಾನವಾಗಿದೆ; ಏನಂದರೆ, ನಿನ್ನ ನೆರೆಯವನನ್ನು ನಿನ್ನ ಹಾಗೆಯೇ ಪ್ರೀತಿ ಮಾಡು. ಈ ಎರಡು ಕಟ್ಟಳೆಗಳಲ್ಲಿ ನ್ಯಾಯಪ್ರಮಾಣವೆಲ್ಲವೂ, ಪ್ರವಾದಿಗಳೂ, ಅಡಕವಾಗಿವೆ." (ಮತ್ತಾ. ೨೨, ೩೭—೪೦.) (**೧೮.**)

೨) "ಮನುಷ್ಯರ ಭಾಷೆಗಳಲ್ಲಿಯೂ ದೂತರ ಭಾಷೆಗಳಲ್ಲಿಯೂ ಮಾತಾಡಿದರೂ, ಪ್ರೀತಿ ಇಲ್ಲದವನಾದರೆ, ಧ್ವನಿಯಾಗುವ ಹಿತ್ತಾಳಿಯೂ, ಘಣಘಣಿಸುವ ಕೈತಾಳವೂ ಆಗಿದ್ದೇನೆ. ಮತ್ತು ಪ್ರವಾದನೆಯುಳ್ಳವನಾಗಿಯೂ, ಎಲ್ಲಾ ಮರ್ಮಗಳನ್ನೂ ಎಲ್ಲಾ ತಿಳುವಿಕೆಯನ್ನೂ ಅರಿತವನಾಗಿಯೂ ಇದ್ದರೂ, ಬೆಟ್ಟಗಳನ್ನು ಕಿತ್ತಿಡುವ ಹಾಗೆ ಎಲ್ಲಾ ವಿಶ್ವಾಸವುಳ್ಳವನಾಗಿದ್ದರೂ, ಪ್ರೀತಿ ಇಲ್ಲದವನಾದರೆ, ನಾನೇನೂ ಇಲ್ಲ. ಮತ್ತು ನನಗೆ ಉಂಟಾದದ್ದನ್ನೆಲ್ಲಾ ಉಣ್ಣ ಕೊಟ್ಟರೂ, ನನ್ನ ಶರೀರವನ್ನು ಸುಡುವದಕ್ಕೆ ಒಪ್ಪಿಸಿದರೂ, ಪ್ರೀತಿ ಇಲ್ಲದವನಾದರೆ, ನನಗೇನೂ ಪ್ರಯೋಜನವಿಲ್ಲ." (೧ ಕೊರಿ. ೧೩, ೧—೩.)



## ಮೂರನೆ ಕಟ್ಟಳೆ.

"ನಿನ್ನ ದೇವರಾದ ಯೆಹೋವನ ಹೆಸರನ್ನು ವ್ಯರ್ಥವಾಗಿ ಎತ್ತ ಬಾರದು. ಯಾಕಂದರೆ, ಯೆಹೋವನು ತನ್ನ ಹೆಸರನ್ನು ವ್ಯರ್ಥವಾಗಿ ಎತ್ತುವವನನ್ನು ನಿರ್ಮಲನೆಂದು ತೀರಿಸುವದಿಲ್ಲ."

ಹಾಗಂದರೇನು?

ನಾವು ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ಶಾಪ ಆಣೆ ಮಂತ್ರ ಸುಳ್ಳು ಮೋಸಾದಿಗಳಿಗಾಗಿ ದೇವರ ಹೆಸರನ್ನು ಎತ್ತದೆ, ಸಕಲ ಕಷ್ಟಗಳಲ್ಲಿ ಆತನಿಗೆ ಬಿನ್ನಹ ಪ್ರಾರ್ಥನೆ ಸ್ತುತಿ ಸ್ತೋತ್ರ ಮಾಡಲಿಕ್ಕಾಗಿ ಮಾತ್ರ ಎತ್ತ ತಕ್ಕದ್ದು.

**೪೧.** ಮೊದಲನೆ ಎರಡು ಕಟ್ಟಳೆಗಳು ಹೃದಯದ ದೇವಾರಾಧನೆಯ ವಿಷಯವಾಗಿ, ಮೂರನೆದು ಬಾಯಿಯ ದೇವಾರಾಧನೆಯ ವಿಷಯವಾಗಿ ಇರುತ್ತದೆ. ಮೊದಲನೆ ಕಟ್ಟಳೆಯು ದಿವ್ಯ ಸ್ವಭಾವದ ವಿಷಯವಾಗಿ, ಮೂರನೆದು ದೇವರ ನಾಮದ ವಿಷಯವಾಗಿ ಇರುತ್ತದೆ. ಒಂದು ಒಡವೆಯ ಹೆಸರು ಅದರ ಸ್ವಭಾವವನ್ನು ಕಾಣಿಸ ತಕ್ಕದ್ದು. ಮುಖ್ಯವಾಗಿ ದೇವರ ನಾಮವೆಂದರೆ, ದೇವರು ತನ್ನ ಸ್ವಭಾವವನ್ನೂ ಗುಣಗಳನ್ನೂ ಕುರಿತು ನಮಗೆ ಪ್ರಕಟಿಸಲಿಕ್ಕೆ ದಯ ಮಾಡಿದಷ್ಟು ಪೂರ್ಣವಾಗಿ ಕಾಣಿಸುವಂಥಾದ್ದು! ಮತ್ತು ದೇವರಿಗಿರುವ ಹೆಸರುಗಳಲ್ಲಿ ಒಂದೊಂದರಿಂದ ಈ ಪ್ರಕಟಿಸಲ್ಪಟ್ಟ ಸ್ವಭಾವವು ಒಂದೊಂದು ಕಡೆಯಿಂದ ಕಾಣ ಬರುತ್ತದೆ.

ಪರಿಶಿ. ಹಾಗಾದರೆ, ದೇವರ ನಾಮವು ಎಂಬದನ್ನು ಪೂರ್ಣಾರ್ಥವಾಗಿ ತಿಳ್ಕೊಂಡರೆ, ಅದು ಅನಂತ ವ್ಯಾಪ್ತಿಯುಳ್ಳ ವಿಶೇಷವಾದ ಮಾತು. ದೇವರ ಹೆಸರಿನ ವಿಷಯವಾಗಿ ಒಟ್ಟಾರೆ ಮಾತಾಡುವಲ್ಲಿ, ಅದಕ್ಕೆ ಯಾವಾಗಲೂ ಆ ಅಭಿಪ್ರಾಯ ಉಂಟು. ಹಾಗೆ ದೇವರ ಹೆಸರನ್ನು ಅರಿಕೆ ಮಾಡುವದು, ದೇವರ ಹೆಸರಿನಲ್ಲಿ ನಂಬುವದು, ದೇವರ ಹೆಸರಿನಲ್ಲಿ ಏನಾದರೂ ಮಾಡುವದು ಎಂದಿತ್ಯಾದಿ ಹೇಳುವಲ್ಲಿ.

**೪೨.** ನಾವು ದೇವರ ನಾಮವನ್ನು ಆಲೋಚನೆ ಇಲ್ಲದೆ ಪ್ರಯೋಜನವೇನೂ ಇಲ್ಲದೆ ಸಹಾ, ಅಥವಾ ಶಾಪ ಆಣೆ ಮಂತ್ರ ಸುಳ್ಳು ಮೋಸಾದಿಗಳಿಗೋಸ್ಕರ ದೇವದೂಷಣೆಯಾಗಿ ಕೆಟ್ಟ ಕೆಲಸಕ್ಕೆ ಪ್ರಯೋಗಿಸುವದೆ ವ್ಯರ್ಥವಾಗಿ ಪ್ರಯೋಗಿಸುವಂಥಾದ್ದಾಗಿರುತ್ತದೆ.

**೪೪.** ದೇವರ ಪ್ರಕಟಿಸಲ್ಪಟ್ಟ ಸ್ವಭಾವ ವಾಕ್ಯಗಳ ವಿಷಯವಾಗಿ ಅವುಗಳ ಘನತೆಯನ್ನು ಹೃದಯಪೂರ್ವಕವಾಗಿ ಅನುಭವಿಸದೆ ಮಾತಾಡಿದರೆ ಅಥವಾ ಕೇಳಿದರೆ, — ಹಾಗೆಯೆ ಅಂಜಿಕೆಯೂ ಭೀತಿಯೂ ಇಲ್ಲದೆ ಅಭ್ಯಾಸದಿಂದಲೂ ಲಘುಮನಸ್ಸಿನಿಂದಲೂ ಮಾತ್ರವೆ ದೇವರ ನಾಮುಗಳಲ್ಲಿ ಈ ಆ ನಾಮುವನ್ನು ಉಚ್ಚರಿಸುವದಾದರೆ, ದೇವರ ನಾಮುವನ್ನು ಆಲೋಚನೆ ಇಲ್ಲದೆ ಪ್ರಯೋಗಿಸಿ ಪಾಪ ಮಾಡಿದ ಹಾಗಾಯಿತು.

"ಆದರೆ ನಿಮುಗೆ ಹೇಳುತ್ತೇನೆ, ಮನುಷ್ಯರು ಆಡುವ ಸಕಲ ವ್ಯರ್ಥ ಮಾತುಗಳಿಗೋಸ್ಕರ ನ್ಯಾಯತೀರ್ವಿಕೆಯ ದಿನದಲ್ಲಿ ಲೆಖ್ಖ ಒಪ್ಪಿಸುವರು. ಯಾಕಂದರೆ ನಿನ್ನ ಮಾತುಗಳಿಂದ ನೀತಿನಿರ್ಣಯ ಪಡುವಿ; ಮತ್ತು ನಿನ್ನ ಮಾತುಗಳಿಂದ ಆಜ್ಞೆನಿರ್ಣಯ ಪಡುವಿ." (ಮತ್ತಾ. ೧೨, ೩೬. ೩೭.)

**೪೫.** ದೇವರ ಶಿಕ್ಷೆಯೂ ತೀರ್ಪೂ ತನ್ನ ಮೇಲೆಯಾಗಲಿ ಮತ್ತೊಬ್ಬರ ಮೇಲೆಯಾಗಲಿ ಬರಲಿ ಎಂಬದಾಗಿ ಹೇಳುವಂಥಾದ್ದೆ ಶಪಿಸೋಣ. ಇದು ಮಾನುಷ ಕೆಟ್ಟ ಕೋಪದಿಂದ ಆಗುವದಾದರೆ, ಯಾವ ಸಂಗತಿಯಲ್ಲಿಯೂ, ಪಾಪವೂ ದ್ರೋಹವೂ ಆಗಿರುತ್ತದೆ.

"ನಾಲಿಗೆಯಿಂದ ತಂದೆಯಾದ ದೇವರನ್ನು ಆಶೀರ್ವದಿಸುತ್ತೇವೆ; ಅದರಿಂದಲೇ ದೇವರ ಹೋಲ್ವಿಕೆಯ ಪ್ರಕಾರ ಹುಟ್ಟಿದ ಮನುಷ್ಯರನ್ನು ಶಪಿಸುತ್ತೇವೆ. ಅದೇ ಬಾಯೊಳಗಿಂದ ಆಶೀರ್ವಾದವೂ ಶಾಪವೂ ಹೊರಡುತ್ತವೆ. ನನ್ನ ಸಹೋದರರೇ, ಇವು ಹಾಗಿರಬಾರದು." (ಯಾಕೊ. ೩, ೯. ೧೦.) "ನಿಮ್ಮನ್ನು ಹಿಂಸಿಸುವವರನ್ನು ಆಶೀರ್ವದಿಸಿರಿ; ಶಪಿಸದೆ ಆಶೀರ್ವದಿಸಿರಿ." (ರೋಮಾ. ೧೨, ೧೪.) (ಲೂಕ. ೯, ೫೧—೫೫.)

ಪರಿಶಿ. ಪ್ರತಿಫಲವನ್ನು ಹ್ಯಾಗೊ ಹಾಗೆಯೆ ಶಾಪವನ್ನು ಸಹಾ ಕೊಡುವದು ನೀತಿಯುಳ್ಳ ಪರಿಶುದ್ಧ ದೇವರ ತೀರ್ಪಿಗೆ ಮಾತ್ರವೆ ತಕ್ಕದ್ದಾಗಿದೆ. ಅಂಥಾ ಶಾಪವನ್ನು ದೇವರು ಮನುಷ್ಯರ ಪರಿಮುಖವಾಗಿ ಸಾರಿಸ ಬಹುದು, ಆಗ್ಯೆ ದೇವರ ಹೆಸರಿನಲ್ಲಿಯೂ ಅಪ್ಪಣೇಪ್ರಕಾರವಾಗಿಯೂ ಸಾರುವಂಥಾ ಆ ಮನುಷ್ಯನಿಗೆ ಅದು ಪಾಪವಲ್ಲವೆಂಬದು ಸ್ವಾಭಾವಿಕ. (ಉದಾಹ.—ನೋಹ, ಯಾಕೋಬು, ಪ್ರವಾದಿಗಳು.) ಅದೇ ಪ್ರಕಾರ ಲಘುಮನಸ್ಸಿನ ಪಾಪಿಯು ತಿರುಗಿ ಕೊಂಡು, ಬರಲಿಕ್ಕಿರುವ ಶಾಪದ ದೆಶೆಯಿಂದ ತಪ್ಪಿ ಹೋಗುವ ಹಾಗೆ, ಅಂಥವನಿಗೆ ದೇವರ ಶಾಪವನ್ನೂ ತೀರ್ಪನ್ನೂ ಆತನ ವಾಕ್ಯದಿಂದ ತಿಳಿಸುವಂಥಾದ್ದು ಅನ್ಯಾಯ ಅಲ್ಲ ಮಾತ್ರವಲ್ಲಾ, ಇನ್ನೂ ಹೆಚ್ಚು, ಅದು ಶುದ್ಧವಾದ ಕ್ರೈಸ್ತ ಹಂಗು.—"ನೀನು ಅವನ (ನಿನ್ನ ಸಹೋದರನ) ನಿಮಿತ್ತ ಪಾಪವನ್ನು ಹೊರದ ಹಾಗೆ, ನಿನ್ನ ನೆರೆಯವನನ್ನು ಗದರಿಸಲೇ ಗದರಿಸ ಬೇಕು." (ಲೇವಿಕ. ೧೯, ೧೭.)

**೪೬.** ಸರ್ವಜ್ಞನೂ ಪರಿಶುದ್ಧನೂ ಆಗಿರುವ ದೇವರಿಗೆ ಸತ್ಯಕ್ಕೆ ಸಾಕ್ಷಿಯಾಗಿಯೂ ಅಸತ್ಯಕ್ಕೆ ಪ್ರತಿಫಲ ಕೊಡುವವನಾಗಿಯೂ ಮೊರೆ ಇಡುವದೆ ಆಣೆ ಇಡುವದಾಗಿರುತ್ತದೆ. ಸುಳ್ಳು ಪ್ರಮಾಣ ಮಾಡುವದು ದೇವರ ಸರ್ವಜ್ಞತೆ ಪರಿಶುದ್ಧತ್ವ ಸರ್ವತ್ರಾಣಗಳನ್ನು ಪ್ರಸಿದ್ಧವಾಗಿ ಪರಿಹಾಸ್ಯ ಮಾಡುವಂಥಾದ್ದಾಗಿರುವದರಿಂದ, ಅದು ಅತಿ ಭಯಂಕರವಾದ ದ್ರೋಹ. ಆದರೆ ಪ್ರಮಾಣ ಮಾಡುವಂಥಾದ್ದೆ ಕೆಟ್ಟತನದಿಂದ ಉಂಟಾದದ್ದು ೧), ಯಾಕಂದರೆ, ಅತ್ಯಂತ ಪರಿಶುದ್ಧವಾದಂಥಾ ಆಚಾರ ಸಹಿತವಾದಂಥಾ ಆಣೆಯ ಹಾಗೆಯೆ ಬರೇ ಹೌದು ಅಲ್ಲಾ ಸಹಾ ತನಗೆ ಪೂರ್ಣ ಪರಿಶುದ್ಧವೂ ಮತ್ತೊಬ್ಬರಿಗೆ ಪೂರ್ಣ ಭರವಸಯೋಗ್ಯವೂ ಆಗಿರುವ ಹಾಗೆಯೂ, ಆಚಾರ ಸಹಿತವಾದ ಸುಳ್ಳು ಆಣೆಗೆ ಹ್ಯಾಗೊ, ಹಾಗೆಯೆ ಒಂದು ಸುಳ್ಳು ಹೌದು ಅಲ್ಲಾ ಎಂಬದಕ್ಕಾಗಿ ಸಹಾ ಹೆದರಿ ಹಿಂಜಾರುವ ಹಾಗೆಯೂ, ಮನುಷ್ಯನು ಅಷ್ಟು ಸತ್ಯದಲ್ಲಿಯೂ ದೇವರ ಸಮುಖದಲ್ಲಿಯೂ ಬದುಕ ತಕ್ಕದ್ದು. ಆದರೆ ಮನುಷ್ಯರು ಈ ಪ್ರಕಾರವಾಗಿರದೆ, ಅವರಲ್ಲಿ ಸ್ಥೂಲ ಸೂಕ್ಷ್ಮ ಸುಳ್ಳು ಸರ್ವತ್ರದಲ್ಲಿಯೂ ನಡಿಯುವದರಿಂದ (**೧೧೯**), ಪ್ರಮಾಣ ಮಾಡುವದು ವಿಶೇಷ ಕಾರ್ಯಗಳಲ್ಲಿ ಅವಶ್ಯವಾಯಿತು ೨).

೧) "ಹ್ಯಾಗಾದರೂ ಆಣೆ ಇಡ ಬೇಡ. . . . . ಆದರೆ ನಿಮ್ಮ ಮಾತು — ಹೌದು, ಹೌದು, ಅಲ್ಲ, ಅಲ್ಲ, ಅಂತಿರಲಿ. ಇವುಗಳಿಗೆ ಹೆಚ್ಚಾದದ್ದು ಕೆಟ್ಟತನದಿಂದ ಉಂಟಾಗುವದು." (ಮತ್ತಾ. ೫, ೩೪ — ೩೭.)

೨) "ನಿನ್ನ ದೇವರಾದ ಯೆಹೋವನಿಗೆ ಭಯ ಪಡ ಬೇಕು; ಅವನನ್ನು ಸೇವಿಸ ಬೇಕು; ಅವನ ಹೆಸರಿನಲ್ಲಿ ಆಣೆ ಇಟ್ಟು ಕೊಳ್ಳ ಬೇಕು." (ದ್ವಿತಿ. ೬, ೧೩; ೧೦, ೨೦.) "ಸ್ಥಿರ ಪಡಿಸುವದಕ್ಕೆ ಆಣೆಯು ಅವರಿಗೆ ಎಲ್ಲಾ ವಾಗ್ವಾದದ ಅಂತ್ಯವು." (ಇಬ್ರಿ. ೬, ೧೬.)

ಪರಿಶಿ. ಕ್ರಿಸ್ತನ ಮಾತಿಗೆ, ಪ್ರಮಾಣವೆ ಎಲ್ಲಾ ವಿಷಯದಲ್ಲಿಯೂ ಪಾಪವೆಂಬ ಹಾಗೆ, ಅನೇಕರು ಅರ್ಥ ಮಾಡುತ್ತಾರೆ. ಆದರೆ, (ಮತ್ತಾ. ೨೬, ೬೩ನೆ ಪ್ರಕಾರ) ಕ್ರಿಸ್ತನು ತಾನೆ ಆಚಾರ ಸಹಿತವಾದ ಪ್ರಮಾಣವನ್ನು ಮಾಡಿದದರಿಂದ, ಆ ಅರ್ಥವು ಸಮವಲ್ಲವೆಂದು ಪ್ರತ್ಯಕ್ಷವಾಗಿದೆ. ಪ್ರಮಾಣವೆ ಕೆಟ್ಟದ್ದು ಅಲ್ಲಾ, ಪ್ರಮಾಣದ ಅವಶ್ಯತ್ವಕ್ಕೆ ಕಾರಣವಾಗಿರುವಂಥಾದ್ದೆ ಕೆಟ್ಟದ್ದು, ಹಾಗಂದರೆ, ಕಾಲಾನುಭಾಗದಲ್ಲಿ ಪ್ರತಿ ಮನುಷ್ಯನು ಅಸತ್ಯ ಹೇಳ್ಯಾನು ಎಂಬ ಭಯ ಉಂಟು ಮಾಡಿದ ತಪ್ಪಿಲ್ಲದ ಅನುಭವವೆ. (ಕೀರ್ತ. ೧೧೬, ೧೧. — ರೋಮಾ. ೩, ೪.) ಎಲ್ಲಾ ದಿವ್ಯ ಕಟ್ಟಳೆಗಳ ಹಾಗೆಯೆ ಕ್ರಿಸ್ತನ ಈ ಅಪ್ಪಣೆ ಸಹಾ ಒಳಗಿನ ಹೃದಯ ಸ್ಥಿತಿಗೋಸ್ಕರವಾಗಿರುತ್ತದೆ. (**೨೧.**) ಇಲ್ಲಿ ಒಳಗೆ ಸಹಾ ಪ್ರಮಾಣವು ಅವಶ್ಯವಾದರೆ, ಅಂದರೆ, ಮನುಷ್ಯನು ಪ್ರಮಾಣ ಮಾಡಿದ ಹೊರ್ತು ಸತ್ಯ

ವನ್ನು ಹೇಳಿನಾದರೆ, ಪ್ರಮಾಣವೆ, ಸತ್ಯಪ್ರಮಾಣ ಸಹಾ, ಪಾಪವು. ಆದರೆ ಪ್ರಮಾಣದ ಅವಶ್ಯತ್ವವು ಪ್ರಮಾಣ ಮಾಡುವವನಲ್ಲಿ ಅಲ್ಲಾ, ಸತ್ಯವನ್ನೂ ನಂಬಿಕೆಯನ್ನೂ ಸ್ಥಿರವಾಗಿ ಇಡುವದಕ್ಕಾಗಿ ಪ್ರಮಾಣವನ್ನು ಅಪೇಕ್ಷಿಸುವವನಲ್ಲಿ ಮಾತ್ರವೆ ಉಂಟಾಗಿದ್ದರೆ, ನಿಷೇಧದ ನಿಜಕಾರಣವು ಬಿದ್ದು ಹೋದ ಹಾಗಾಯಿತು; ಆಗ್ಯೆ ಕ್ರೈಸ್ತನು ಅಪೇಕ್ಷಿಸಲ್ಪಟ್ಟ ಪ್ರಮಾಣವನ್ನು ಪಾಪವಿಲ್ಲದೆ ಮಾಡ ಬಹುದು. ಆದರೆ ಪ್ರಮಾಣವನ್ನು ಅಪೇಕ್ಷಿಸುವಂಥಾದ್ದು ಸಹಾ ನ್ಯಾಯವಾಗಿರುತ್ತದೆ; ಹ್ಯಾಗಂದರೆ, ಅದು ಸತ್ಯವನ್ನು ಸಾಧ್ಯವಾಗುವಷ್ಟು ಸ್ಥಿರವಾಗಿ ಇಡುವದಕ್ಕೆ ಅತ್ಯವಶ್ಯವಾಗುತ್ತದಷ್ಟೆ. ಇದು ಮುಖ್ಯವಾಗಿ ರಾಜ್ಯಾಧಿಕಾರ ನಡಿಸುವವರ ವಿಷಯದಲ್ಲಿ ಹೇಳ ತಕ್ಕದ್ದು; ಯಾಕಂದರೆ, ಅವರು ತಮಗೆ ದೇವರು ಕೊಟ್ಟಂಥಾ ಉದ್ಯೋಗವನ್ನು ತಕ್ಕ ಪ್ರಕಾರ ನಡಿಸ ಬೇಕಾದರೆ, ಸತ್ಯದ ಪ್ರಕಾರ ವಿಚಾರಿಸುವದಕ್ಕೂ ಕಾಪಾಡುವದಕ್ಕೂ ಶಿಕ್ಷಿಸುವದಕ್ಕೂ, ಸಂಗತಿಗಳ ಯಥಾಸ್ಥಿತಿಯನ್ನು ಆಗುವಷ್ಟು ಕೂಲಂಕುಶವಾಗಿಯೂ ಭರವಸ ಇಡತಕ್ಕದ್ದಾಗಿಯೂ ತಿಳಿಕೊಳ್ಳ ಬೇಕಾಗುತ್ತದೆ.—ಪ್ರಮಾಣ ಮಾಡುವ ವಿಷಯದಲ್ಲಿ ಕ್ರೈಸ್ತನು ಹ್ಯಾಗೆ ನಡಕೊಳ್ಳ ಬೇಕೆಂಬದಕ್ಕೆ ಕ್ರಿಸ್ತನ ಮಾದ್ರಿಯು (೧ ಪೇತ್ರ. ೨, ೨೧.) ಸ್ಥಿರ ಪೂರ್ಣವಾದ ಸೂತ್ರ. ಶಿಷ್ಯರಿಗೂ ಜನರಿಗೂ ಬೇಕಾಗಿ ಆತನು ತನ್ನ ಹೇಳಿಕೆಯನ್ನು ಬಲ ಪಡಿಸುವದಕ್ಕೋಸ್ಕರ ಬರೇ ಹೌದು, ಆಮೆನ್, ಎಂತಾ ಹೇಳಿದ್ದು ಸಾಕಾಗಿತ್ತು; ಆದರೆ ರಾಜ್ಯಾಧಿಕಾರಿಗಳು (ಮಂತ್ರಿಸಭೆಯು, ಮತ್ತಾ. ೨೬ ೬೩.) ಮುಂದಿಟ್ಟ ಪ್ರಮಾಣವನ್ನು ಮಾಡಲಿಕ್ಕೆ ಅವನು ಒಲ್ಲೆ ಅನ್ನಲಿಲ್ಲಾ. ಅದೇ ಪ್ರಕಾರ ಕ್ರೈಸ್ತನು ಸಹಾ, ರಾಜ್ಯಾಧಿಕಾರಿಗಳು ಅಪೇಕ್ಷಿಸಿದರೆ, ಪ್ರಮಾಣ ಮಾಡ ತಕ್ಕದ್ದು; ಆದರೆ ಬೇರೆ ಸಮಯದಲ್ಲಿ ಬರೇ ಹೌದು ಅಲ್ಲಾ ಸಾಕೆಂದು ಮಾಡಿ ಕೊಳ್ಳ ತಕ್ಕದ್ದು; ಆದರೆ ಈ ಹೌದು ಅಲ್ಲಾ ಯಾವಾಗಲೂ ಖಂಡಿತವಾಗಿ ಸತ್ಯವೂ ಭರವಸ ಯೋಗ್ಯವೂ ಆಗಿರ ಬೇಕು.

**೪೭.** ದೇವರ ನಾಮದಲ್ಲಿ ಮಂತ್ರ ಮಾಡುವದು ಅಂದರೆ: ದೇವರು ಮರೆ ಮಾಡಿದ್ದನ್ನು ತಿಳಿಕೊಳ್ಳುವದಕ್ಕಾಗಿಯೂ, ದೇವರು ಕೊಡುವದಕ್ಕೆ ಮನಸ್ಸು ಮಾಡದ್ದನ್ನು ಹೊಂದುವದಕ್ಕಾಗಿಯೂ, ವಿಶ್ವಾಸವಿಲ್ಲದೆ ಸ್ವೇಚ್ಛಾನುಸಾರವಾದ ಅಭಿಲಾಷೆಗಳ ಪ್ರಕಾರ, ದೇವರ ನಾಮವನ್ನೂ, ವಾಕ್ಯವನ್ನೂ, ಅಥವಾ ಪ್ರಸಾದವನ್ನೂ ಪ್ರಯೋಗಿಸ ಯತ್ನಯಿಸುವದೆ. (ಉದಾ: ೧ ಸಮು. ೨೮, ೭ ಇತ್ಯಾದಿ; ಅ. ಕ್ರಿ. ೧೯, ೧೩. ೧೯; ೧೬, ೧೬.)

"ತನ್ನ ಮಗನನ್ನಾದರೂ ಮಗಳನ್ನಾದರೂ ಬೆಂಕಿ ದಾಟಿಸುವವನೂ, ಕಣಿ ಹೇಳುವವನೂ, ಮೇಘಮಂತ್ರದವನೂ, ಸರ್ಪಮಂತ್ರದವನೂ, ಶೂನ್ಯಗಾರನೂ, ಗಾರಡಿಗಾರನೂ, ಯಕ್ಷಿಣಿಗಾರನೂ, ಮಂತ್ರಜ್ಞನೂ, ಸತ್ತವರ ಹತ್ತರ ವಿಚಾರಿಸುವವನೂ ನಿನ್ನಲ್ಲಿ ಶಿಕ್ಕ

ಬಾರದು. ಯಾಕಂದರೆ ಇಂಥವುಗಳನ್ನು ಮಾಡುವವರೆಲ್ಲಾ ಯೆಹೋವನಿಗೆ ಅಸಹ್ಯ." (ದ್ವಿತಿ. ೧೮, ೧೦—೧೨.)

ಪರಿಶಿ. ಅಂಥಾ ಮಂತ್ರವಾದದಿಂದ ಅಪೇಕ್ಷಿಸಿದ್ದು ಆಗುತ್ತದೊ ಇಲ್ಲವೊ ಎಂಬ ಪ್ರಶ್ನೆಯು ಇಲ್ಲಿ ವಿಶೇಷವಲ್ಲಾ; ಇದನ್ನು ಮಾತ್ರ ಆಲೋಚಿಸ ತಕ್ಕದ್ದು: ಅಂಥಾದ್ದನ್ನು ತಾನೆ ಮಾಡುವದು, ಅಥವಾ ಮಾಡಿಸಿ ಕೊಳ್ಳುವದು ಹ್ಯಾಗೂ ಪಾಪವೂ ದೇವರ ಹೆಸರಿನ ದೂಷಣೆಯೂ ಆಗಿದೆ ನಿಶ್ಚಯ.

**೪೮.** ಸುಳ್ಳು ಆಣೆ ಇಟ್ಟರೆ ಮತ್ತು ಸುಳ್ಳು ಪ್ರಮಾಣ ಮಾಡಿದರೆ ಮಾತ್ರವಲ್ಲಾ, ದೇವರ ನಾಮವನ್ನು ಹೃದಯದಲ್ಲಿ ಅಲ್ಲಾ, ಬಾಯಿಯಲ್ಲಿ ಮಾತ್ರವೆ ಇಟ್ಟು ಕೊಂಡು ೧), ತೋರಿಕೆಯ ಪರಿಶುದ್ಧತ್ವವನ್ನು ತುಟಿಗಳ ಸೇವೆಯನ್ನು ನಡಿಸಿದರೆ ಸಹಾ, ಸುಳ್ಳಿಗಾಗಿಯೂ ಮೋಸಕ್ಕಾಗಿಯೂ ದೇವರ ನಾಮವನ್ನು ವೃರ್ಥವಾಗಿ ಎತ್ತಿದ ಹಾಗಾಯಿತು ೧). ಹಾಗೆಯೆ ದೇವರ ವಾಕ್ಯವನ್ನು ಸುಳ್ಳು ಬೋಧನೆಗೋಸ್ಕರ ಅಪಯೋಗಿಸಿದರೆ ೨), ಅಥವಾ ದೇವರು ಕರುಣಾಳುವೂ ದೀರ್ಘಶಾಂತನೂ ಎಂದು ಹೇಳಿ, ತನ್ನನ್ನು ಅಥವಾ ಮತ್ತೊಬ್ಬರನ್ನು ಲಘುಮನಸ್ಸಿನಲ್ಲಿಯೂ ನಿರ್ಭಯದಲ್ಲಿಯೂ ಬಲ ಪಡಿಸಿದರೆ ಸಹಾ ೩) ಅದೆ ಪ್ರಕಾರ ಮಾಡಿದ ಹಾಗಾಯಿತು.

೧) "ದುಷ್ಟನಿಗೆ ದೇವರು ಹೇಳುವದೇನಂದರೆ— ನನ್ನ ನೇಮಕಗಳನ್ನು ಸಾರುವದು ನಿನಗೇನು? ನನ್ನ ಒಡಂಬಡಿಕೆಯನ್ನು ನಿನ್ನ ಬಾಯಿಯಲ್ಲಿ ಎತ್ತುವದೇನು? ನೀನು ಶಿಕ್ಷೆಯನ್ನು ಹಗೆ ಮಾಡಿ, ನನ್ನ ವಾಕ್ಯಗಳನ್ನು ನಿನ್ನ ಹಿಂದೆ ಹಾಕಿ ಬಿಡುತ್ತೀಯಲ್ಲ?" (ಕೀರ್ತ. ೫೦, ೧೬. ೧೭.) "ಕಪಟಿಗಳೇ, ನಿಮ್ಮನ್ನು ಕುರಿತು ಯೆಶಾಯನು ಚನ್ನಾಗಿ ಪ್ರವಾದಿಸಿದ್ದಾನೆ; ಏನಂದರೆ, ಈ ಜನರು ಬಾಯಿಂದ ನನಗೆ ಸಮಿಾಪಿಸಿ, ತುಟಿಗಳಿಂದ ನನ್ನನ್ನು ಸನ್ಮಾನಿಸುತ್ತಾರೆ; ಆದರೆ ಅವರ ಹೃದಯವು ನನಗೆ ದೂರವಾಗಿದೆ." (ಮತ್ತಾ. ೧೫, ೭. ೮.) "ಕರ್ತನೇ, ಕರ್ತನೇ, ಎಂದು ನನಗೆ ಹೇಳುವವರೆಲ್ಲರು ಅಲ್ಲ, ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತವನ್ನು ಮಾಡುವವನೇ ಪರಲೋಕರಾಜ್ಯದಲ್ಲಿ ಪ್ರವೇಶಿಸುವನು." ಇತ್ಯಾದಿ. (ಮತ್ತಾ. ೭, ೨೧—೨೩.)

೨) ಪ್ರಕಟ. ೨೨, ೧೮. ೧೯.—ದ್ವಿತಿ. ೪, ೨.—ಅ. ಕ್ರಿ. ೧೫, ೧. ೨೪.—ಗಲ. ೧, ೬—೮.

೩) ಯೂದ. ೪.—ಇಬ್ರಿ. ೧೦, ೨೬.

**೪೯.** ಮನುಷ್ಯರು ಅಂಥಾ ಪಾಪಗಳನ್ನು, ಅವುಗಳು ಮಾತುಗಳಿಂದ ಮಾತ್ರವೆ ನಡಿಯಲಾಗಿ, ಅಲಕ್ಷಿಸಿ ಅಲ್ಪವೆಂದೆಣಿಸುತ್ತಾರಾದ್ದರಿಂದ, ದೇವರು, ತನ್ನ ನಾಮದ ದೂಷಕ

ರನ್ನು ಶಿಕ್ಷಿಸದೆ ಸರ್ವಥಾ ಇರೆನು ಎಂಬದಾಗಿ ಬೆದರಿಸುತ್ತಾನೆ ಸಹಾ. (ಉದಾ. ಲೇವಿಕ. ೨೪.)

"ತಪ್ಪಿ ಹೋಗ ಬೇಡಿರಿ; ದೇವರು ಹಾಸ್ಯ ಮಾಡಲ್ಪಡುವವನಲ್ಲ." (ಗಲ. ೬, ೭.) "ಜೀವವುಳ್ಳ ದೇವರ ಕೈಗಳಲ್ಲಿ ಬೀಳುವದು ಭಯಂಕರವಾದದ್ದು." (ಇಬ್ರಿ. ೧೦, ೩೧.) (ಹೋಶೆ. ೧೭, ೧೮—೨೦.)

**೩೦.** ಲೋಕದ ವಸ್ತುಗಳನ್ನು ಕೆಟ್ಟದ್ದಕ್ಕೆ ಪ್ರಯೋಗಿಸುವವನು ಮಾತ್ರವಲ್ಲ, ಅವುಗಳನ್ನು ಯಾವದಕ್ಕೂ ಉಪಯೋಗಿಸದವನು ಸಹಾ ಅವುಗಳನ್ನು ಅಪಯೋಗಿಸಿದ ಹಾಗಾಯಿತು. ಅದೆ ಪ್ರಕಾರ ದೇವರ ನಾಮವೂ ವಾಕ್ಯವೂ ಎಂಬ ಪರಲೋಕದ ವಸ್ತುಗಳ ವಿಷಯದಲ್ಲಿಯೂ ಇರುವದು. ಮೂರನೆ ಕಟ್ಟಳೆಯನ್ನು ಪೂರೈಸ ಬೇಕೆಂದಿರುವವರಲ್ಲಿ ದೇವರ ನಾಮದ ತಕ್ಕ ಪ್ರಯೋಗ ಸಹಾ ಅವಶ್ಯವಾಗಿದೆ. ಅದನ್ನು ತಕ್ಕ ಹಾಗೆ ಪ್ರಯೋಗಿಸುವವರು ಯಾರಂದರೆ, ದೇವರ ನಾಮಕ್ಕೆ ಸಕಲ ಕಷ್ಟಗಳಲ್ಲಿ ಬಿನ್ನಹ ಪ್ರಾರ್ಥನೆ ಸ್ತುತಿ ಸ್ತೋತ್ರ ಮಾಡುವವರೆ.

**೩೧.** ದೇವರ ನಾಮಕ್ಕೆ ಸಕಲ ಕಷ್ಟಗಳಲ್ಲಿ ಬಿನ್ನಹ ಮಾಡುವದೆಂದರೆ: ಸ್ವಂತ ಕಷ್ಟದಲ್ಲಿಯೂ ಅನ್ಯಕಷ್ಟದಲ್ಲಿಯೂ, ದೊಡ್ಡದಾಗಿದ್ದರೂ ಸಣ್ಣದಾಗಿದ್ದರೂ, ಮೊದಲಾಗಿ ದೇವರ ಹತ್ತರ ಸಹಾಯ ಹುಡುಕುವದೆ. ಅಂಥಾ ಬಿನ್ನಹವನ್ನು ದೇವರು ಕೃಪೆಯಿಂದ ಕೇಳುತ್ತಾನೆಂಬ ವಾಗ್ದತ್ತ ಉಂಟು.

"ಇಕ್ಕಟ್ಟಿನ ದಿವಸದಲ್ಲಿ ನನ್ನನ್ನು ಕರೆ; ನಾನು ನಿನ್ನನ್ನು ತಪ್ಪಿಸಿ ಬಿಡುವೆನು, ನೀನು ನನ್ನನ್ನು ಘನ ಪಡಿಸುವಿ." (ಕೀರ್ತ. ೫೦, ೧೫.) "ಯೆಹೋವನು ತನ್ನನ್ನು ಕರೆಯುವವರೆಲ್ಲರಿಗೆ, ಸತ್ಯದಿಂದ ತನ್ನನ್ನು ಕರೆಯುವವರೆಲ್ಲರಿಗೆ ಸಮೀಪವಾಗಿದ್ದಾನೆ." (ಕೀರ್ತ. ೧೪೫, ೧೮.)

**೩೨.** ದೇವರ ನಾಮದಲ್ಲಿ ಪ್ರಾರ್ಥಿಸುವದೆಂದರೆ: ಆತನ ಅಪ್ಪಣೆ ವಾಗ್ದತ್ತಗಳ ನಿಮಿತ್ತ, ವಿಶ್ವಾಸವೂ, ಬಾಲಕನಂತೆ ದೈನ್ಯವೂ ಉಳ್ಳ ಹೃದಯ ಸಂಭಾಷಣೆಯಲ್ಲಿ ಸ್ವಂತ ಮತ್ತು ಅನ್ಯ ಅಪೇಕ್ಷೆಗಳನ್ನು ದೇವರ ಮುಂದೆ ತರುವದೆ.

"ಸಕಲ ಪ್ರಾರ್ಥನೆ ವಿಜ್ಞಾಪನೆಗಳಿಂದ ಸರ್ವಕಾಲ ಆತ್ಮದಲ್ಲಿ ಪ್ರಾರ್ಥಿಸಿ, ಇದಕ್ಕಾಗಿಯೇ ಸಕಲ ಪರಿಶುದ್ಧರಿಗೋಸ್ಕರ ಸಕಲ ಸ್ಥಿರತ್ವದಿಂದಲೂ ವಿಜ್ಞಾಪನೆಯಿಂದಲೂ ಎಚ್ಚರವಾಗಿರಿ." (ಎಫೆ. ೬, ೧೮.) "ಆದದರಿಂದ ಎಲ್ಲಾದರ ಮೊದಲು, ಬಿನ್ನಹ ಪ್ರಾರ್ಥನೆ ವಿಜ್ಞಾಪನೆ ಸ್ತೋತ್ರಗಳನ್ನು, ಎಲ್ಲಾ ಮನುಷ್ಯರಿಗೋಸ್ಕರವೂ, ಅರಸರಿಗೋಸ್ಕರವೂ,

ಅಧಿಕಾರದಲ್ಲಿರುವವರೆಲ್ಲರಿಗೋಸ್ಕರವೂ, ನಾವು ಸಕಲ ಭಕ್ತಿಯಿಂದಲೂ, ಮರ್ಯಾದೆಯಿಂದಲೂ, ಶಾಂತವಾಗಿಯೂ, ಸಮಾಧಾನವಾಗಿಯೂ, ಕಾಲಕ್ಷೇಪ ಮಾಡುವ ಹಾಗೆ, ಮಾಡ ಬೇಕೆಂದು ಬುದ್ಧಿ ಹೇಳುತ್ತೇನೆ." (೧ ತಿಮೊ ೨, ೧. ೨.)

**೩೩.** ದೇವರ ನಾಮವನ್ನು ಸ್ತುತಿಸುವದೆಂದರೆ: ದೇವರ ಕೃಪೆ ಮಹಿಮೆಗಳ ಅನುಭವದಿಂದ ತುಂಬಿರುವ ಹೃದಯಗಳಲ್ಲಿ ಹುಟ್ಟುವ ಅವಶ್ಯತ್ವದಿಂದ ಆತನ ನಾಮವನ್ನು ಸಮಸ್ತ ಲೋಕದ ಮುಂದೆ ಸಂತೋಷವಾಗಿ ಅರಿಕೆ ಮಾಡಿ೧), ಆತನನ್ನು ಮಾತಿನಿಂದಲೂ೨), ಕ್ರಿಯೆಯಿಂದಲೂ೩), ಹೊಗಳುವದೆ ೪).

೧) "ಕ್ರಿಸ್ತನ ಸುವಾರ್ತೆಗೆ ನಾಚಿಕೆ ಪಡೆನು. ಅದು ವಿಶ್ವಾಸಿಸುವವರೆಲ್ಲರಿಗೆ, . . . ರಕ್ಷಣೆಗೋಸ್ಕರವಾದ ದೇವರ ಬಲವಾಗಿದೆ." (ರೋಮಾ. ೧, ೧೬.) "ಹಾಗಾದರೆ ಮನುಷ್ಯರ ಮುಂದೆ ನನ್ನನ್ನು ಅರಿಕೆ ಮಾಡುವವನ್ಯಾವನೋ, ಅವನನ್ನು ಪರಲೋಕದಲ್ಲಿರುವ ನನ್ನ ತಂದೆಯ ಮುಂದೆ ನಾನೂ ಅರಿಕೆಮಾಡುವೆನು." ಇತ್ಯಾದಿ. (ಮತ್ತಾ. ೧೦, ೩೨. ೩೩.)

೨) "ಕ್ರಿಸ್ತನ ವಾಕ್ಯವು ನಿಮ್ಮಲ್ಲಿ ಸಕಲ ಜ್ಞಾನದಿಂದ ಐಶ್ವರ್ಯವಾಗಿ ವಾಸ ಮಾಡಲಿ; ಒಬ್ಬರಿಗೊಬ್ಬರು ಬೋಧಿಸುತ್ತಾ, ಬುದ್ಧಿ ಹೇಳುತ್ತಾ, ಕೀರ್ತನೆಗಳಿಂದಲೂ ಗೀತಗಳಿಂದಲೂ, ಆತ್ಮಭಾವವಾದ ಹಾಡುಗಳಿಂದಲೂ, ನಿಮ್ಮ ಹೃದಯದೊಳಗೆ ಕರ್ತನಿಗೆ ಇಂಪಾಗಿ ಹಾಡಿರಿ." (ಕೊಲೊ. ೩, ೧೬.)

೩) "ಅವರು ನಿಮ್ಮ ಸತ್ಕ್ರಿಯೆಗಳನ್ನು ನೋಡಿ, ಪರಲೋಕದಲ್ಲಿರುವ ನಿಮ್ಮ ತಂದೆಯನ್ನು ಮಹಿಮೆ ಪಡಿಸುವ ಹಾಗೆ, ಮನುಷ್ಯರ ಮುಂದೆ ನಿಮ್ಮ ಬೆಳಕು ಪ್ರಕಾಶಿಸಲಿ." (ಮತ್ತಾ. ೫, ೧೬.) "ಯೆಹೋವನು ಕೊಟ್ಟನು, ಯೆಹೋವನು ತಕ್ಕೊಂಡನು; ಯೆಹೋವನ ಹೆಸರಿಗೆ ಆಶೀರ್ವಾದ!" (ಯೋಬ್. ೧, ೨೧.)

೪) "ಹೃದಯದ ಸಂಪೂರ್ಣತೆಯಿಂದ ಬಾಯಿಯು ಮಾತಾಡುತ್ತದೆ." (ಮತ್ತಾ. ೧೨, ೩೪.) "ನಾವು ನೋಡಿದವುಗಳನ್ನೂ ಕೇಳಿದವುಗಳನ್ನೂ ಮಾತಾಡದೆ ಇರಲಾರೆವು." (ಅ. ಕ್ರಿ. ೪, ೨೦.)

**೩೪.** ದೇವರ ನಾಮದಲ್ಲಿ ಕೃತಜ್ಞಾಪಿಸುವದೆಂದರೆ: ನಮ್ಮ ಮನೆ ಮಾರು, ಸ್ಥಿತಿಗತಿ, ಮಾಡು ಬಿಡುಗಳೆಲ್ಲಾ, ದೇವರ ಕೃಪೆಯೂ, ಏನೂ ಯೋಗ್ಯತೆ ಇಲ್ಲದವರಿಗೆ ಆತನು ಮಾಡುವ ಉಪಕಾರವೂ ಆಗಿರುತ್ತದೆ ಹೊರ್ತು, ಮತ್ತೇನೂ ಅಲ್ಲವೆಂದು ಸಂತೋಷದಿಂದಲೂ ದೈನ್ಯಭಾವದಿಂದಲೂ ತಿಳಕೊಂಡು ಅರಿಕೆ ಮಾಡುವದೆ. ಈ ಅರಿಕೆಯು ಹೃದಯಪೂರ್ವಕವಾಗಿದ್ದರೆ, ದೇವರ ದಾನಗಳನ್ನು ನಮ್ಮ ಮನಸ್ಸಂತೋಷಕ್ಕೆ ಅಲ್ಲಾ, ದೇ

ವರ ಮನಸ್ಸಂತೋಷಕ್ಕೆ ಪ್ರಯೋಗಿಸಿ, ಈ ಪ್ರಕಾರ ಕ್ರಿಯೆಯಿಂದಲೂ ನಮ್ಮ ಕೃತಜ್ಞತೆಯನ್ನು ತೋರಿಸ್ಯೇವು.

"ಯಾವಾಗಲೂ, ಎಲ್ಲಾದಕ್ಕೋಸ್ಕರ, ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಸರಿನಲ್ಲಿ ತಂದೆಯಾದ ದೇವರಿಗೆ ಸ್ತೋತ್ರ ಮಾಡಿರಿ." (ಎಫೆ. ೫, ೨೦.)

---

## ನಾಲ್ಕನೆ ಕಟ್ಟಳೆ.

### ನೀನು ವಿಶ್ರಾಂತಿ ದಿವಸವನ್ನು ಆಚರಿಸ ಬೇಕು.

ಹಾಗಂದರೇನು?

ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ಆತನ ವಾಕ್ಯದ ಪ್ರಸಂಗವನ್ನು ಅಲಕ್ಷಿಸದೆ ಪರಿಶುದ್ಧವೆಂದೆಣಿಸಿ, ವಿಶ್ರಾಂತಿಯ ದಿವಸದಲ್ಲಿ ಅದನ್ನು ಕೇಳುವದರಲ್ಲಿಯೂ ಕಲಿಯುವದರಲ್ಲಿಯೂ ಸಂತೋಷ ಪಡ ಬೇಕು.

**೫೫.** ಮೊದಲನೆ ಮೂರು ಕಟ್ಟಳೆಗಳಲ್ಲಿ, ಮನುಷ್ಯನು ದೇವರ ಕಡೆಗೆ ಹೃದಯದಿಂದಲೂ ಬಾಯಿಯಿಂದಲೂ ಹ್ಯಾಗೆ ನಡಕೊಳ್ಳ ತಕ್ಕದ್ದೆಂಬದು ತೋರಿಸಿ ಆಯಿತು. ಮಾಡು ಬೀಡುಗಳಲ್ಲಿ ದೇವಾರಾಧನೆಯು ಹ್ಯಾಗೆ ಕಾಣ ಬರ ಬೇಕೆಂಬದು ನಾಲ್ಕನೆಯದರಲ್ಲಿ ತೋರಿಸಿಯದೆ.

ಅ.) ಆರು ದಿವಸ ಕಷ್ಟ ಮಾಡಿ, ನಿನ್ನ ಕಾರ್ಯಗಳನ್ನು ತೀರಿಸ ಬೇಕು.

**೫೬.** ದೇವರು ಮನುಷ್ಯನನ್ನು ಪ್ರವೃತ್ತಿಗೆ ನೇಮಿಸಿದ್ದಾನೆ. (ಉತ್ಪತ್ತಿ. ೨, ೧೫.) ಆದರೆ, ಪಾಪವಿಲ್ಲದೆ ಯಾವದು ಇಷ್ಟವಾಗಿತ್ತೋ, ಪಾಪದ ಶಾಪದಿಂದ ಅದೆ ಕಷ್ಟವಾಯಿತು¹⁾. ಆದರೆ ಈ ದೈವ ಶಾಪದಲ್ಲಿ ಒಂದು ಆಶೀರ್ವಾದವೂ ಉಂಟು. ಹ್ಯಾಗಂದರೆ, ಕಷ್ಟ ಮಾಡುವದರಿಂದ ಅನೇಕ ಪಾಪಗಳಿಗೆ ತಪ್ಪಿ ಹೋಗುತ್ತೇವೆ.

ಆದರೆ ಮೈಗಳ್ಳತನವು ಎಲ್ಲಾ ಕಳ್ಳತನದ ಮೂಲ. ಮುಖದ ಬೆವರಿನಿಂದ ಕಷ್ಟ ಮಾಡದಿದ್ದರೆ, ಇಹದಲ್ಲಿ ಸ್ಥಿರವಾದ ತೃಪ್ತಿಯೂ ಇಲ್ಲಾ, ಜೀವದ ನಿಜ ಸಂತೋಷವೂ ಇಲ್ಲಾ, ಅದಕ್ಕೆ ಬದಲಾಗಿ ಜೀವದ ಮೇಲೆ ಬೇಸರ, ಅಸಂತೃಪ್ತಿ, ಅಸಹ್ಯ. ಆದ್ದರಿಂದ ಎಷ್ಟು ಸಂಪತ್ತೂ ಅಧಿಕಾರವೂ ಉಳ್ಳವನಾಗಿದ್ದರೂ, ಈ ದಿವ್ಯ ಕ್ರಮದಿಂದ ತೊಲಗಿ ಹೋಗುವವನಿಗೆ ಕಠಿಣ ತರವಾದ ಶಾಪವು ಹತ್ತದೇ ನಿಲ್ಲದು ²⁾.

೧) "ಮಣ್ಣಿಗೆ ತಿರುಗುವ ತನಕ ನಿನ್ನ ಮುಖದ ಬೆವರಿನಿಂದ ರೊಟ್ಟಿ ತಿನ್ನುವಿ; ಯಾಕಂದರೆ ಅದರೊಳಗಿಂದ ತೆಗೆಯಲ್ಪಟ್ಟಿ." (ಉತ್ಪ. ೩, ೧೯.)

೨) "ಒಬ್ಬನು ಕೆಲಸ ಮಾಡಲೊಲ್ಲದಿದ್ದರೆ, ಅವನು ತಿನ್ನಲೂ ಬಾರದು." (೨ ಥೆಸ್ಸ. ೩, ೧೦.)

ಇ.) ಆದರೆ ಏಳನೆ ದಿವಸ ಯೆಹೋವನ ವಿಶ್ರಾಂತಿ, ಇತ್ಯಾದಿ.

**೫೭.** ವಾರ ಸಬ್ಬತು ನಿರ್ಮಾಣ ಸಬ್ಬತಿಗೆ ಪ್ರತಿ ಗುರುತಾಗಿಯೂ (ಹೊರ. ೨೦, ೮–೧೧.) ನಿತ್ಯ ಸಬ್ಬತಿಗೆ ಮುಂಗುರುತಾಗಿಯೂ (ಇಬ್ರಿ. ೪, ೯. ೧೦.) ಮಾಡಿಟ್ಟದೆ. ನಿತ್ಯ ಸಬ್ಬತು ಅಂದರೆ, ನಿರ್ಮಾಣವು ದೇವರ ವಿಶ್ರಾಂತಿಯೊಳಗೆ ಪ್ರವೇಶಿಸುವದೆ. ಹ್ಯಾಗೆ ದೇವರು, ನಿರ್ಮಾಣಕಾರ್ಯವನ್ನು ಪೂರ್ಣ ಮಾಡಿದ ಮೇಲೆ, ವಿಶ್ರಮಿಸಿ ಕೊಂಡನೊ (ಉತ್ಪ. ೨, ೧–೩.), ಹಾಗೆಯೆ ನಿರ್ಮಾಣ ಸಹಾ ಪೂರ್ಣ ವಿಕಸಿತವಾಗಿ ಗುರಿ ಮುಟ್ಟಿದ ಮೇಲೆ (ಇಬ್ರಿ. ೪, ೯. ೧೦.) ನಿತ್ಯಾನಂದದಲ್ಲಿ ವಿಶ್ರಮಿಸಿ ಕೊಂಡು, ದೇವರ ಆನಂದ ವಿಶ್ರಾಂತಿಯಲ್ಲಿ ಪಾಲು ಹೊಂದ ಬೇಕು. (ಸಮ ನೋಡು **೩೦೫.**) ಭೂ ಸಬ್ಬತಿನಲ್ಲಿ ಕನ್ನಡಿಯಲ್ಲಿ ಎಂಬ ಹಾಗೆ ನಿತ್ಯ ಸಬ್ಬತು ಪ್ರತಿ ಬಿಂಬಿತವಾಗಿ, ಆ ಮುಂಗುರ್ತಿನಲ್ಲಿ ಇದಕ್ಕೆ ಮಾರ್ಗ ಸಿದ್ಧವಾಗ ಬೇಕು. ಸಬ್ಬತಿನ ಧರ್ಮಾಭಿಪ್ರಾಯ ಒಟ್ಟಾರೆ ಅದೆ.

**೫೮.** ನಿತ್ಯ ವಿಶ್ರಾಂತಿಯಲ್ಲಿ ಎಲ್ಲಾ ಭೂಸಂಬಂಧವಾದ ಕಷ್ಟಾಯಾಸಗಳು ಶೀರಿಕೆಯಾಗಿ, ಅವುಗಳ ಬದಲಿಗೆ ಮತ್ತೊಂದು ಉತ್ತಮೋತ್ತಮವಾದ ಪ್ರವೃತ್ತಿ ಬರುತ್ತದೆ; ಯಾವದೆಂದರೆ: ದೇವರನ್ನು ನಿತ್ಯ ನೋಡಿ ಹೊಗಳುತ್ತಾ, ಆತನ ಮಹಿಮೆ ಆನಂದಗಳನ್ನು ಆತನ ಸಂಗಡ ಅನುಭವಿಸುತ್ತಾ, ಅತ್ಯಂತ ಸಂಪೂರ್ಣ ಪ್ರೀತಿಪಾಶಗಳಿಂದ ಸಕಲ ನಿರ್ಮಾಣವನ್ನು ಸುತ್ತಿ ಕೊಳ್ಳುತ್ತಾ ಇರುವದೆ. (ಸಮ ನೋಡು **೩೦೫.**) ಆ ಪ್ರಕಾರ ಭೂಸಬ್ಬತಿನ ವಿಶ್ರಾಂತಿ ಪ್ರವೃತ್ತಿಗಳನ್ನು ಸಹಾ ನಿಶ್ಚಯಿಸ ತಕ್ಕದ್ದು: ಸಬ್ಬತಿನಲ್ಲಿ ಶೇರುವವರು ಎಲ್ಲಾ ಭೂ ಸಂಬಂಧದ ಉದ್ಯೋಗದ ಕಷ್ಟಾಯಾಸಗಳ ಪರಿಹಾರವನ್ನು ಹೊಂದಿ, ಸ್ವರ್ಗ ಸಂಬಂಧದ ಉದ್ಯೋಗದ ಪ್ರವೃತ್ತಿಗೋಸ್ಕರ ಸಿದ್ಧ ಮಾಡಿ ಕೊಳ್ಳುವವರಾಗಿ, ಇಲ್ಲಿಯೆ ಅದರ ರುಚಿಯನ್ನು ಮುಂದಾಗಿ ಅನುಭವಿಸುತ್ತಾ ಇರುತ್ತಾರೆ. (ದೇವರ ಸಂಗಡ ಸಂಚಾರ ಮಾಡಿ ಪ್ರೀತಿಯ ಕ್ರಿಯೆಗಳನ್ನು ನಡಿಸುತ್ತಾರೆ.)

**೫೯.** ಅ. ಹಳೆ ಒಡಂಬಡಿಕೆಯಲ್ಲಿ ವಿಧಿಸಿ ಇದ್ದ ಸಬ್ಬತಿನ ವಿಶ್ರಾಂತಿಯನ್ನು ಯಾರಾದರೂ ಕೆಡಿಸಿದರೆ ಕೆಡಿಸಿದವನಿಗೆ ಮರಣಶಿಕ್ಷೆ ಆಯಿತು. (ಹೊರ. ೩೧, ೧೪. ೧೫. ೪.

ಅಂಕೆ. ೧೫, ೩೨—೩೫.) ಈ ಕಟ್ಟಳೆಯು ಅಷ್ಟು ಕಠಿಣವಾಗಿರಲಿಕ್ಕೆ ಕಾರಣವೇನೆಂದರೆ: ಹಳೆ ಒಡಂಬಡಿಕೆಯಲ್ಲಿ ಸಬ್ಬತು ಒಡಂಬಡಿಕೆಯ ಗುರ್ತಾಗಿರಲಾಗಿ (ಹೊರ. ೩೧, ೧೩—೧೭.) ಅದನ್ನು ಅಪವಿತ್ರ ಮಾಡುವದು ಸ್ವಾಮಿದ್ರೋಹವಾಗಿತ್ತು. ಹೊಸ ಒಡಂಬಡಿಕೆಯಲ್ಲಿ ಸಬ್ಬತು ಪವಿತ್ರ ಮಾಡುವದೆಂದರೆ, ಕ್ಷಮಿಸಲೊಲ್ಲದಷ್ಟು ಕಠಿಣವಾದ ನಿಯಮದ ಕ್ರಿಯೆ ಅಲ್ಲಾ, ಅದು ಧರ್ಮಚಾವದ ಅಪೇಕ್ಷೆಯಿಂದಲೂ ಸ್ವತಂತ್ರವುಳ್ಳ ಪ್ರೀತಿಯಿಂದಲೂ ಹುಟ್ಟುವ ಕ್ರಿಯೆ ಆಗಿರುತ್ತದೆ. ಹಳೆ ಒಡಂಬಡಿಕೆಯ ಸಬ್ಬತಾಚರಣೆ ಸಹಾ ಕ್ರಿಸ್ತನಲ್ಲಿ ಸಂಪೂರ್ತಿ ಆಯಿತು[೧], ಮತ್ತು ಕ್ರಿಸ್ತನು ತಾನೆ ಹ್ಯಾಗೊ, ಹಾಗೆಯೆ ಕ್ರಿಸ್ತನ ಶಿಷ್ಯನು (ಆತನಿಂದ) ಸಬ್ಬತಿಗೆ ಕರ್ತನಾದನು[೨].

೧) "ಆದದರಿಂದ, ಇನ್ನು ಯಾವನಾದರೂ ಅನ್ನಪಾನಗಳಲ್ಲಿಯಾದರೂ, ಹಬ್ಬ ಅಮಾವಾಸಿ ಸಬ್ಬತುಗಳ ವಿಷಯದಲ್ಲಿಯಾದರೂ, ನಿಮಗೆ ನ್ಯಾಯ ತೀರಿಸದಿರಲಿ. ಇವು ಮುಂದಿನವುಗಳ ನೆರಳಾಗಿವೆ. ಆದರೆ ಶರೀರವು ಕ್ರಿಸ್ತನದೇ." (ಕೊಲೊ. ೨, ೧೬. ೧೭.) (ಸಮ ನೋಡು ರೋಮ. ೧೪, ೫. ೬.—ಗಲಾ. ೪, ೯. ೧೦.)

೨) "ಮನುಷ್ಯನು ಸಬ್ಬತಿಗೋಸ್ಕರವಲ್ಲ, ಸಬ್ಬತು ಮನುಷ್ಯನಿಗೋಸ್ಕರ ಉಂಟಾಯಿತು. ಹೀಗಿರಲಾಗಿ ಮನುಷ್ಯನ ಮಗನು ಸಬ್ಬತಿಗೂ ಕರ್ತನಾಗಿದ್ಧಾನೆ." (ಮಾರ್ಕ. ೨, ೨೭. ೨೮.)

**೫೯.** ಇ. ಹೀಗೆ ಹಳೆ ಒಡಂಬಡಿಕೆಯ ಸಬ್ಬತಾಚರಣೆಯೂ ನಿಯಮದ ಕ್ರಿಯೆಯೂ, ಮುಂಗುರ್ತೆಂಬದರಿಂದ ತಾತ್ಕಾಲಿಕ ಮಾತ್ರವೆ ಆಗಿರುವ (**೨೧೭**) ದೇವಾರಾಧನೆಯ ಸಂಬಂಧದ್ದು ಆಗಿರುತ್ತದೆ, ಎಂಬ ಲೆಖ್ಖದಿಂದ, ಆ ಸಬ್ಬತಾಚರಣೆಗೆ ಕ್ರೈಸ್ತರು ಹಂಗಿನವರಾಗಿರುವದಿಲ್ಲ ಸರಿ; ಆದರೆ ಅದು ಮನುಷ್ಯನ ಧರ್ಮಚಾವದ ಅಪೇಕ್ಷೆಗೆ ತಕ್ಕದ್ದಾಗಿರುತ್ತದೆ ಎಂಬ ಲೆಖ್ಖದಿಂದ ಅದು ಹೊಸ ಒಡಂಬಡಿಕೆಯಲ್ಲಿ ಸಹಾ ಕ್ಷೇಮಕರವಾಗಿಯೂ ಸಲ್ಲುವದಾಗಿಯೂ ಇರುತ್ತದೆ. ಆದರೆ ಹೊಸ ಒಡಂಬಡಿಕೆಯಲ್ಲಿ ಸಬ್ಬತಾಚರಣೆಯೂ ನಿಯಮಾಶ್ರಿತವಾಗದೆ, ಸುವಾರ್ತೆಯ ಸ್ವತಂತ್ರಾನುಸಾರವಾಗಿರಲಾಗಿ, ಆದಿ ಕ್ರೈಸ್ತಸಭೆಯವರು ನಮ್ಮ ರಕ್ಷಣೆಯ ಆಧಾರವಾದ ಕ್ರಿಸ್ತನ ಉತ್ಥಾನ ದಿನವಾಗಿರುವ ವಾರದ ಮೊದಲನೆ ದಿನವನ್ನು, ಅಂದರೆ, ಆದಿತ್ಯವಾರವನ್ನು (**೨೪೮**) ದೇವಾರ್ಪಿತ ವಿಶ್ರಾಂತಿ ದಿನವಾಗಿಯೂ ಹುದುವಾದ ದೇವಾರಾಧನೆಯ ದಿನವಾಗಿಯೂ ಏಳನೆ ದಿನದ ಸ್ಥಳದಲ್ಲಿ ಸ್ಥಾಪಿಸಲಿಕ್ಕೆ ಸ್ವತಂತ್ರವುಳ್ಳವರಾಗಿದ್ದರು. (ಅ. ಕ್ರಿ. ೨೦, ೭. [೧ ಕೊರಿ. ೧೬, ೨.] ಪ್ರಕ. ೧, ೧೦.)

**೫೯.** ಉ. ಹೀಗಿರಲಾಗಿ, ಕ್ರೈಸ್ತನು ಸಬ್ಬತು ವಿಶ್ರಾಂತಿಯನ್ನು ಆಚರಿಸ ಬೇಕೆಂಬ ಹಂಗಿನ ವಿಷಯವು ಈ ಪ್ರಕಾರ ಉಂಟು: ಆದಿತ್ಯವಾರದಲ್ಲಿ ಕಷ್ಟ ಮಾಡುವದು ತಾನೆ ಪಾಪವಲ್ಲ, ಕಷ್ಟ ಮಾಡುವದಕ್ಕೆ ಕಾರಣವಾಗಿರುವ ಮನೋಭಾವವೆ, ಅಂದರೆ, ದೇವಾರಾಧನೆಯು ಅವಶ್ಯವಿಲ್ಲವೆಂದು ನೆನಸಿ, ದೇವರ ಸಂಗಡ ಸಂಚರಿಸುವದಕ್ಕೆ ಮನಸ್ಸೂ ಅಭಿಲಾಷೆಯೂ ಇಲ್ಲದೆ, ನಮ್ಮ ಪ್ರಾಣರಕ್ಷಣೆಯ ಚಿಂತೆಗಿಂತ ಭೂಸಂಬಂಧವಾದ ಕಷ್ಟಲಾಭಗಳು ಅವಶ್ಯವಾಗಿಯೂ, ವಿಶೇಷವಾಗಿಯೂ ಪ್ರಯೋಜನಕರವಾಗಿಯೂ ಇರುತ್ತವೆಂದು ಎಣಿಸುವ ನಮ್ಮ ಹೃದಯದ ದೇವಹೀನವಾದ ಸ್ಥಿತಿಯೆ ಪಾಪವಾಗಿರುತ್ತದೆ. ಸಬ್ಬತು ವಿಶ್ರಾಂತಿಗೆ, ಯೋಗ್ಯ ಮನೋಭಾವವು ಆಧಾರವಾಗಿಲ್ಲದಿದ್ದರೆ, ಸಬ್ಬತಿನ ಪ್ರಯೋಜನವು ಕಷ್ಟ ಮಾಡುವದರಿಂದ ಹ್ಯಾಗೊ ಹಾಗೆಯೆ ವಿಶ್ರಮಿಸುವದರಿಂದ ಸಹಾ ತಪ್ಪಿತು. ಆದಿತ್ಯವಾರದಲ್ಲಿ, ದೈವಹೀನವಾಗಿ ಕೆಲಸ ಮಾಡುವದು ಹ್ಯಾಗೊ ಹಾಗೆಯೆ ದೈವಹೀನವಾದ ವಿಶ್ರಾಂತಿ ಸಹಾ ಪಾಪವು.

**೬೦.** ಹಳೆ ಒಡಂಬಡಿಕೆಯಲ್ಲಿಯೆ ವಾರಸಬ್ಬತಿನ ಹೊರ್ತು, ದೇವರು ಕೃಪೆಯಿಂದ ಇಸ್ರಾಯೇಲನನ್ನು ನಡಿಸಿದ ವಿಷಯವಾದ, ನಡದ ಪ್ರಾಮುಖ್ಯ ಕಾರ್ಯಗಳ ನೆನಪಿಗೆ ಮಾಡಿಟ್ಟ ಕೆಲವು ಹಬ್ಬದ ದಿನಗಳು ಇದ್ದವು. ಇವುಗಳ ಆಚರಣೆಯು ನಿಜವಾದ ಸಬ್ಬತುಗಳ ಹಾಗೆಯೆ ಕಠಿಣವಾಗಿತ್ತು. ಅದೆ ಪ್ರಕಾರ ಕ್ರೈಸ್ತ ಸಭೆ ಸಹಾ ನಡದ ವಿಮೋಚನೆಯ ಮಹಾ ಕಾರ್ಯಗಳ ನೆನಪಿಗೆ ವರ್ಷ ವರ್ಷಕ್ಕೆ ಬರುವ ಕೆಲವು ಹಬ್ಬಗಳನ್ನು ಸ್ಥಾಪಿಸಿ, ಆದಿತ್ಯವಾರದ ಹಾಗೆಯೆ ಅವುಗಳನ್ನು ಸಹಾ ಪವಿತ್ರ ಮಾಡ ಬೇಕೆಂದು ಅಪೇಕ್ಷಿಸುತ್ತದೆ.

**೬೧.** ಪ್ರಸಂಗಕ್ಕೆ ಆಲಸ್ಯ ಮಾಡಿ, ದೇವರ ವಾಕ್ಯವನ್ನು ತುಚ್ಛೀಕರಿಸುವದರಿಂದ, ಅಂದರೆ, ಹುದುವಾಗಿ ಸಭೆಯಲ್ಲಿ ನಡಿಯುವ ದೇವಾರಾಧನೆಯನ್ನು ಭಕ್ತಿಯಿಂದ ಪ್ರಯೋಗಿಸುವದನ್ನೂ ದೇವರ ವಾಕ್ಯವನ್ನು ಆಸಕ್ತಿಯಿಂದ ಶೋಧಿಸುವದನ್ನೂ ಬಿಟ್ಟು, ಪ್ರಪಂಚದ ಅಥವಾ ಪಾಪದ ಕೆಲಸಗಳನ್ನು ನಡಿಸಿ, ಪ್ರಪಂಚದ ಭೋಗಗಳಲ್ಲಿಯೂ ಖುಷಾಲು ತಮಾಷೆಗಳಲ್ಲಿಯೂ ನಿಮಗ್ನನಾಗಿ ಇರುವದರಿಂದ, ಆದಿತ್ಯವಾರವೂ ಹಬ್ಬವೂ ಅಪವಿತ್ರವಾಗುತ್ತವೆ.

"ಪ್ರೀತಿಗೂ ಸತ್ಕ್ರಿಯೆಗಳಿಗೂ ಪ್ರೇರೇಪಿಸುವದಕ್ಕೆ ಒಬ್ಬರನ್ನೊಬ್ಬರು ಆಲೋಚಿಸೋಣ. ಕೆಲವರಿಗೆ ವಾಡಿಕೆ ಇರುವ ಪ್ರಕಾರ, ನಾವು ಕೂಡಿ ಬರುವದನ್ನು ಬಿಡದೆ, ಬುದ್ಧಿ ಹೇಳೋಣ." (ಇಬ್ರಿ. ೧೦, ೨೪. ೨೫.) "ಹೊಟ್ಟೇಬಾಕತನಕ್ಕೆ ಆಸ್ಪದವಾಗಿರುವ ದ್ರಾಕ್ಷೆ

ಯ ರಸದಿಂದ ಮತ್ತರಾಗದೆ, ಆತ್ಮದಿಂದ ತುಂಬಿ ಕೊಂಡು, ಕೀರ್ತನೆಗಳಿಂದಲೂ, ಗೀತಗಳಿಂದಲೂ, ಆತ್ಮಭಾವವಾದ ಹಾಡುಗಳಿಂದಲೂ, ಒಬ್ಬರ ಸಂಗಡಲೊಬ್ಬರು ಮಾತಾಡಿ ಕೊಂಡು ನಿಮ್ಮ ಹೃದಯದಲ್ಲಿ ಕರ್ತನಿಗೆ ಹಾಡಿ ಬಾರಿಸಿರಿ." (ಎಫೆ. ೫, ೧೮. ೧೯.) (ರೋಮ. ೧೪, ೧೭. ೧೮.)

**೬೨.** ಆದರೆ ಆದಿತ್ಯವಾರವು ಸರ್ವಥಾ ದುಃಖ, ಗೋಳಾಟ, ಕರ್ಕರೆಗಳ ದಿನವಲ್ಲ ೧), ಅದು ಸಂತೋಷ ಮೆಚ್ಚಿಕೆಗಳ ೨) ದಿನವು. ಆದರೆ ಈ ಸಂತೋಷವು ಕರ್ತನಲ್ಲಿಯೂ ೩), ಈ ಮೆಚ್ಚಿಕೆಯು ದೇವವಾಕ್ಯದ ಮೇಲೆಯೂ ೪) ಇರ ತಕ್ಕದ್ದು.

೧) (ಯೆಶಾ. ೫೮, ೫.) ೨) (ಕೀರ್ತ. ೧೧೮, ೨೪. ೧೬, ೧೧.) ೩) (ಫಿಲಿ. ೪, ೪.) ೪) (ಕೀರ್ತ. ೧, ೨. ರೋಮ. ೭, ೨೨.)

**೬೩.** ಮಾಡಲಿಕ್ಕೆ ನಮಗೆ ಅನುಜ್ಞೆಯೂ, ವಿಶ್ರಾಂತಿ ದಿನದ ಪ್ರಯೋಜನಕ್ಕೆ ಪೂರ್ಣ ಯೋಗ್ಯವಾಗಿಯೂ ಇರುವ ಕ್ರಿಯೆಗಳು ಕ್ರೈಸ್ತ ಪ್ರೀತಿಯ ಕ್ರಿಯೆಗಳೆ ೧). ಅದೆ ಪ್ರಕಾರ, ಇನ್ನೊಂದು ಸಾರಿ ಮಾಡೇನೆಂತ ಹೇಳಲಾಗದಷ್ಟು ಅತ್ಯಂತ ಅವಶ್ಯವಾದ ಕ್ರಿಯೆಗಳನ್ನು ಪ್ರಪಂಚದಲ್ಲಿ ಸ್ವಂತ ಪ್ರಯೋಜನಕ್ಕೆ ಸಹಾ ಮಾಡ ಬಹುದು ೨), ಆದರೆ ಒಂದು ಮಾತ್ರ, ಅವುಗಳಿಗೆ ಆಲಸ್ಯವೂ, ಗಲಿಬಿಲಿಯೂ, ಪೋಕರಿತನವೂ ಕಾರಣವಾಗಿರಲಾಗದು.

೧) "ತಂದೆಯಾದ ದೇವರ ಸನ್ನಿಧಿಯಲ್ಲಿ ಶುದ್ಧವೂ ನಿಷ್ಕಳಂಕವೂ ಆಗಿರುವ ಭಕ್ತಿಯು ಇದೇ—ದಿಕ್ಕಿಲ್ಲದವರನ್ನೂ ವಿಧವೆಯರನ್ನೂ ಅವರ ಉಪದ್ರದಲ್ಲಿ ಪರಾಮರಿಸಿ, ಲೋಕದಿಂದ ತನ್ನನ್ನು ಕಳಂಕವಿಲ್ಲದೆ ಕಾಪಾಡಿ ಕೊಳ್ಳುವದೇ." (ಯಾಕೊ. ೧, ೨೭.) (ಎಶಾ. ೫೮, ೫—೭.)

೨) "ನಿಮ್ಮೊಳಗೆ ಯಾವ ಮನುಷ್ಯನು ಒಂದೇ ಕುರಿ ಉಂಟಾದವನಾಗಿ, ಅದು ಸಬ್ಬತಿನಲ್ಲಿ ಕುಣಿಯಲ್ಲಿ ಬಿದ್ದರೆ, ಅದನ್ನು ಹಿಡಿದು ಎತ್ತದೆ ಇರುವನು? ಹಾಗಾದರೆ ಕುರಿಗಿಂತ ಮನುಷ್ಯನು ಎಷ್ಟೋ ಹೆಚ್ಚಾಗಿದ್ದಾನೆ! ಆದಕಾರಣ ಸಬ್ಬತಿನಲ್ಲಿ ಒಳ್ಳೇದನ್ನು ಮಾಡ ಬಹುದು." (ಮತ್ತಾ. ೧೨, ೧೧. ೧೨.)

**೬೪.** ದೇವರ ವಾಕ್ಯವನ್ನು ಪರಿಶುದ್ಧವೆಂದೆಣಿಸಿ, ಸಂತೋಷದಿಂದ ಕೇಳಿ ಕಲಿಯುವದರಿಂದ, ವಿಶ್ರಾಂತಿ ದಿನವು ಶುದ್ಧೀಕರಿಸಲ್ಪಡುತ್ತದೆ. (ಅ. ಕ್ರಿ. ೧೭, ೧೧. ಲೂಕ. ೨, ೧೯.) ಇದು ಸಭಾಲಯದಲ್ಲಿಯೂ ಮನೆಯಲ್ಲಿಯೂ, ಹುದುವಾದ ಕಟ್ಟುವಿಕೆ

ಯಲ್ಲಿಯೂ, ಕೋಣೆಯ ಅಂತರಂಗದಲ್ಲಿಯೂ, ಎಲ್ಲಾ ಕಡೆಯಲ್ಲಿಯೂ ಆಗ ತಕ್ಕದ್ದು. (ಮತ್ತಾ. ೬, ೬.)

"ಸ್ತೋತ್ರದ ಶಬ್ದದಿಂದ ತಿಳಿಸಿ, ನಿನ್ನ ಅದ್ಭುತಗಳನ್ನೆಲ್ಲಾ ಸಾರುವ ಹಾಗೆ, ನನ್ನ ಕೈಗಳನ್ನು ನಿರ್ಮಲತ್ವದಲ್ಲಿ ತೊಳೆದು, ನಿನ್ನ ಬಲಿಪೀಠವನ್ನು ಸುತ್ತಿ ಕೊಳ್ಳುವೆನು, ಯೆಹೋವನೇ. ಯೆಹೋವನೇ, ನಿನ್ನ ಮನೆಯ ಸ್ಥಾನವನ್ನೂ ನಿನ್ನ ಘನದ ನಿವಾಸವನ್ನೂ ಪ್ರೀತಿ ಮಾಡುತ್ತೇನೆ." (ಕೀರ್ತ. ೨೬, ೬—೮; ೨೭, ೪.) "ಕ್ರಿಸ್ತನ ವಾಕ್ಯವು ನಿಮ್ಮಲ್ಲಿ ಸಕಲ ಜ್ಞಾನದಿಂದ ಐಶ್ವರ್ಯವಾಗಿ ವಾಸ ಮಾಡಲಿ" ಇತ್ಯಾದಿ. (ಕೊಲೊ. ३, ೧೬.) (३೭, ३.)

**೬३.** ಕ್ರೈಸ್ತನು ಮನಸ್ಸು ನಿಧಾನವಾಗಿಯೂ, ಚನ್ನಾಗಿ ಸಿದ್ಧವಾಗಿಯೂ ದೇವಾಲಯಕ್ಕೆ ಹೋಗಿ[೧], ಪೂರ್ಣ ಹೃದಯದಿಂದ ದೇವಾರಾಧನೆಯಲ್ಲಿ ಶೇರಿ, ದೇವರ ವಾಕ್ಯದ ಪ್ರಸಂಗವನ್ನು ತನಗೆ ಚನ್ನಾಗಿ ಹೃತ್ಖಚಿತ ಮಾಡಿ ಕೊಳ್ಳ ತಕ್ಕದ್ದು. ಈ ಪ್ರಕಾರ ಒಳಮನುಷ್ಯನಲ್ಲಿ ಶಿರಿಗಿ ಬಲಗೊಂಡವನೂ ತ್ರಾಣ ಹೊಂದಿದವನೂ ಆಗಿ[೨], ಪ್ರಪಂಚದ ಕಡೆಯ ಕೆಲಸಕ್ಕೆ ಹೋಗುವದಕ್ಕೂ, ಕೇಳುವವನು ಮಾತ್ರವಲ್ಲಾ, ವಾಕ್ಯವನ್ನು ಮಾಡುವವನು ಸಹಾ ಆಗುವದಕ್ಕೂ ಆಗ ಬೇಕು[३]. ಯಾಕಂದರೆ ಕಪಟದ ದೇವಾರಾಧನೆಯು ಕರ್ತನಿಗೆ ಅಸಹ್ಯವಾಗಿದೆ[४].

೧) "ದೇವರ ಮನೆಗೆ ಹೋಗುವಾಗ, ನಿನ್ನ ಪಾದಗಳನ್ನು ಕಾಪಾಡು, ಕೇಳುವದಕ್ಕೆ ಸಮಿಾಪಿಸು; ಇದು ಹುಚ್ಚರ ಬಲಿ ಕೊಡುವದಕ್ಕಿಂತ ಒಳ್ಳೇದು." (ಪ್ರಸಂಗಿ. ೫, ೧.)

೨) "ರೊಟ್ಟಿಯಿಂದ ಮಾತ್ರವಲ್ಲ, ದೇವರ ಬಾಯಿಯೊಳಗಿಂದ ಹೊರಡುವ ಪ್ರತಿ ವಾಕ್ಯದಿಂದ ಮನುಷ್ಯನು ಬದುಕುವನು." (ಮತ್ತಾ. ४, ४.)

३) "ದೇವರ ವಾಕ್ಯವನ್ನು ಕೇಳಿ, ಅದನ್ನು ಕೈಕೊಳ್ಳುವವರೇ ಭಾಗ್ಯವಂತರು." (ಲೂಕ. ೧೧, ೨೮.) "ಇದಲ್ಲದೆ ನಿಮ್ಮನ್ನು ನೀವೇ ಮೋಸಗೊಳಿಸಿ ವಾಕ್ಯವನ್ನು ಕೇಳುವವರು ಮಾತ್ರವಲ್ಲಿ, ಅದನ್ನು ಮಾಡುವವರು ಆಗಿರಿ." (ಯಾಕೊ. ೧, ೨೨.)

४)(ಆಮೊ. ೫, ೨೧. ೨३.)

---

## ತತ್ಸಂಬಂಧಕ: ಕ್ರೈಸ್ತ ಸಭಾವರ್ಷ.

**೬೬.** ಕ್ರೈಸ್ತ ಸಭಾವರ್ಷಕ್ಕೆ ಮುಂಗುರ್ತು ಹಳೆ ಒಡಂಬಡಿಕೆಯ ದೇವಾರಾಧನೆಯಲ್ಲಿ ಇತ್ತು. ಹಳೆ ಒಡಂಬಡಿಕೆಯ ಸಭಾವರ್ಷವು ನೀಸಾನ ತಿಂಗಳ ೧೪ನೆ ದಿವಸವಾಗಿರುವ ಪಸ್ಕ ಹಬ್ಬದ ದಿನ ಆರಂಭವಾಯಿತು. ಇದು ಐಗುಪ್ತದ ಬಿಡುಗಡೆ

ಯ ಮತ್ತು ಜ್ಯೇಷ್ಠ ಪುತ್ರರನ್ನು ಬದುಕಿಸಿದರ ಹಬ್ಬವಾಗಿಯೂ, ಅದೆ ಸಮಯದಲ್ಲಿ ಸುಗ್ಗೀಹಬ್ಬವಾಗಿಯೂ ಇತ್ತು. ಪಸ್ಕ ಹಬ್ಬದ ಐವತ್ತು ದಿವಸದ ಮೇಲೆ (ವಾರಗಳ ಅಥವಾ ಪ್ರಥಮ ಫಲಗಳ ಹಬ್ಬವೆಂದು ಸಹಾ ಹೆಸರಿರುವ) ಪಂಚಾಶತ್ತಿನ ಹಬ್ಬವಾಯಿತು. ಇದು, ಆ ಸಮಯದಲ್ಲಿ ವಸಂತಕಾಲದ ಬೆಳೆಯು ತೀರಿ ಇರ ಬೇಕಾದ್ದರಿಂದ, ಸುಗ್ಗೀಬೆಳೆಗಾಗಿ ಸ್ತೋತ್ರದ ಹಬ್ಬವಾಗಿಯೂ, ಸೀನಾಯಿ ಪರ್ವತದಲ್ಲಿ ಕೊಟ್ಟ ನಿಯಮದ ನೆನಪಿಗಾಗಿಯೂ ಆಚರಿಸಲ್ಪಟ್ಟಿತು. ಏಳನೆ ತಿಂಗಳ (ತಿಸ್ರಿಯ) ಹತ್ತನೆ ದಿನದಲ್ಲಿ ದೊಡ್ಡ ವಿಮೋಚನಾ ದಿನವು ಬಂತು. ಅದು ಎಲ್ಲರಿಗೂ ಮಾನಸಾಂತರ ಉಪವಾಸಗಳ ದಿವಸವಾಗಿತ್ತು, ಮತ್ತು ಅದರಲ್ಲಿಯೆ ಎಲ್ಲಾ ಜನಾಂಗದ ಪಾಪಗಳು ವಿಮೋಚಿಸಲ್ಪಟ್ಟವು. ಅದೆ ತಿಂಗಳ ಹದಿನೈದನೆ ದಿನದಲ್ಲಿ ಗುಡಾರಗಳ ಹಬ್ಬವು ಆರಂಭವಾಯಿತು. ಅದು ಅರಣ್ಯದ ಪ್ರಯಾಣದ ನೆನಪಿಗಾಗಿಯೂ, ಅದೆ ಸಮಯದಲ್ಲಿ ಎರಡನೆ (ಹಣ್ಣು, ಎಣ್ಣೆ, ದ್ರಾಕ್ಷೆರಸಗಳ) ಪೈರಿನ ಹಬ್ಬವೂ ಆಗಿತ್ತು. — ಅಮವಾಸೆ, ಸಬ್ಬತು ವರ್ಷ, ಯೋಬೇಲ್ ವರ್ಷ.

**೬೭.** ಕ್ರೈಸ್ತ ಸಭಾ ವರ್ಷವು ಕ್ರಿಸ್ತಜನ್ಮ ದಿನದ ಮೊದಲು ನಾಲ್ಕನೆ ಆದಿತ್ಯವಾರದಲ್ಲಿ, ಅಂದರೆ, ಆಗಮನದ ಮೊದಲನೆ ಆದಿತ್ಯವಾರದಲ್ಲಿ ಆರಂಭವಾಗುತ್ತದೆ. ಈ ವರ್ಷಕ್ಕೆ ಎರಡು ಭಾಗಗಳು: ಹಬ್ಬವುಳ್ಳ ಅರ್ಧ, ಹಬ್ಬವಿಲ್ಲದ ಅರ್ಧ. ಎರಡರ ಮಧ್ಯವು ತ್ರಿಯೇಕತ್ವದ ಹಬ್ಬ (೭೪). ಸಭಾವರ್ಷದ ಮೊದಲನೆ ಅರ್ಧದಲ್ಲಿ (ಇತಿಹಾಸ ಭಾಗದಲ್ಲಿ) ಕ್ರಿಸ್ತನ ವಿಮೋಚಿಸುವ ಜೀವಪ್ರಯತ್ನಗಳೂ, ಎರಡನೆದರಲ್ಲಿ (ಬೋಧನಾಭಾಗದಲ್ಲಿ) ಸಭೆಯ ಕ್ರೈಸ್ತಜೀವವೂ, ಹುದುವಾದ ಕ್ರೈಸ್ತಕಟ್ಟುವಿಕೆಗೂ, ಬೋಧನೆಗೂ ಅಭ್ಯಾಸಕ್ಕೂ ಪ್ರಸ್ತಾಪವಾಗಿರ ತಕ್ಕದ್ದು.

**೬೮.** ಒಂದೊಂದು ಆದಿತ್ಯವಾರಕ್ಕೂ ಹಬ್ಬಕ್ಕೂ ಪೂರ್ವಕಾಲದಲ್ಲಿಯೆ ಸಭೆಯು ಪರಿಶುದ್ಧ ಬರಹದಿಂದ ಎರಡು ಪರಿಚ್ಛೇದಗಳನ್ನು, ಒಂದನ್ನು ಸುವಾರ್ತೆಗಳಿಂದಲೂ, ಒಂದನ್ನು ಪತ್ರಿಕೆಗಳಿಂದಲೂ ಪ್ರಸಂಗ ಕಟ್ಟುವಿಕೆಗಳ ಆಧಾರಕ್ಕೆ ಆರಿಸಿ ಕೊಂಡದೆ.

**೬೯.** ಹಬ್ಬಗಳು ಚಲ ಮತ್ತು ಅಚಲವೆಂದು ಎರಡು ತರ. ಚಲ ಹಬ್ಬಗಳು ವರ್ಷ ವರ್ಷ ಇಂಥಾದ್ದೆ ವಾರ ದಿನದಲ್ಲಿ ಬರ ಬೇಕೆಂತಾ ಇದ್ದರೂ, ತಿಂಗಳ ದಿನವು ಬೇರೆ ಬೇರೆ ಆಗಿರ ಬಹುದು. ಹಾಗೆ ಪಸ್ಕ ಹಬ್ಬ ಮತ್ತು ಅದನ್ನು ಅನುಸರಿಸುವ ಬೇರೆ ಹಬ್ಬಗಳು. ಅಚಲ ಹಬ್ಬಗಳು ತಿಂಗಳ ಇಂಥಾದ್ದೆ ದಿನದಲ್ಲಿ ಬರ ಬೇಕೆಂತಾ ಉಂಟು, ಆದರೆ ವಾರದ ದಿನವು ಬೇರೆ ಬೇರೆ ಆಗಿರ ಬಹುದು.

**೬೦.** ಆಗಮನಕಾಲಕ್ಕೆ ಕ್ರಿಸ್ತನ ಜನ್ಮದಿನದ ಮೊದಲು ಬರುವ ಕಡೆ ನಾಲ್ಕು ಆದಿತ್ಯವಾರಗಳು ಶೇರಿ ಅವೆ. ಇದೆ ರಕ್ಷಕನ ಜನನದ ಹಬ್ಬಕ್ಕೆ ಸಿದ್ಧ ಮಾಡಿ ಕೊಳ್ಳುವ ಕಾಲವು. ಕ್ರಿಸ್ತನ ಜನನವನ್ನು ಯಾವಾಗಲೂ ದಶಂಬರ ೨೫ನೆಯಲ್ಲಿ ಆಚರಿಸುತ್ತೇವೆ. (ಸಮ ನೋಡು **೨೩೯.**) ಎಂಟು ದಿನದ ಮೇಲೆ ಕ್ರಿಸ್ತನ ಪರಿಛೇದನೆಯ ಹಬ್ಬವು (ಸಮ ನೋಡು **೨೩೯** ಪರಿಶಿ.) ಲೌಕಿಕ ವರ್ಷಾದಿಯ ದಿನ. ಜನವರಿ ೬ನೆಯಲ್ಲಿ ಪ್ರತ್ಯಕ್ಷತೆಯ ಹಬ್ಬ. ರೋಮಿಯಾಯ ಸಭೆಯಲ್ಲಿ ಅದಕ್ಕೆ ಪರಿಶುದ್ಧ ತ್ರಿರಾಜರ ಹಬ್ಬವೆಂಬ ಹೆಸರುಂಟು. ಅದು ಜನಾಂಗಗಳು ಕ್ರಿಸ್ತನ ಕಡೆಗೆ ತಿರುಗಿ ಕೊಳ್ಳುವದರ ಹಬ್ಬ. ಮೂಡಣ ದೇಶದಿಂದ ಬಂದಂಥಾ ಜನಾಂಗಗಳ ಪ್ರಥಮಫಲಗಳಾಗಿದ್ದಂಥಾ ಜ್ಞಾನಿಗಳು ಕರ್ತನನ್ನು ವಂದಿಸಿದ್ದೆ ಆ ಹಬ್ಬಕ್ಕೆ ಆಧಾರ. (ಮತ್ತಾ. ೨, ೧—೧೨.) ಇದಾದ ಮೇಲೆ ಮುಂದಿರುವ ಉತ್ಥಾನ ಹಬ್ಬಕ್ಕೆ ಅನುಕೂಲವಾಗಿ ಪ್ರತ್ಯಕ್ಷತೆಯ ಮೇಲಿನ ಎಂಬ ಎರಡರಿಂದ ಆರರ ವರೆಗೆ ಆದಿತ್ಯವಾರಗಳು ಬರುತ್ತವೆ.

**೬೧.** ಉತ್ಥಾನ ಹಬ್ಬದ ಮೊದಲು ಒಂಬತ್ತನೆ ಆದಿತ್ಯವಾರಕ್ಕೆ ಹೆಸರು ಸೆಪ್ತುವಗೇಸಿಮ (ಅಂದರೆ ಎಪ್ಪತ್ತನೆ), ಎಂಟನೆದಕ್ಕೆ ಸೆಕ್ಸಗೇಸಿಮ (ಆರ್ವತ್ತನೆ), ಏಳನೆದಕ್ಕೆ ಕ್ವಿಂಕ್ವಗೇಸಿಮ (ಐವತ್ತನೆ); ಈ ಕಡೇದಕ್ಕೆ ಎಸ್ತೊಮಿಹಿ ಅಥವಾ ಉಪವಾಸಗಳ ಮೊದಲಿನ ಆದಿತ್ಯವಾರವೆಂದು ಸಹಾ ಹೆಸರುಂಟು. ಈ ಸಪ್ತಕದ ಮಂಗಳವಾರಕ್ಕೆ ಉಪವಾಸ ರಾತ್ರಿ ಎಂದು ಹೇಳುತ್ತಾರೆ, ಯಾಕಂದರೆ ರೋಮಿಯಾಯ ಸಭೆಯಲ್ಲಿ ನಾಲ್ವತ್ತು ದಿನದ ಉಪವಾಸಗಳು ಆ ಸಾಯಂಕಾಲ ಆರಂಭ. (ಆದಿತ್ಯವಾರಗಳಲ್ಲಿ ಮಾತ್ರ ಉಪವಾಸ ಇರಲಿಲ್ಲಾ.) ಇದಾದ ಮೇಲೆ ಉಪವಾಸದ ಮೊದಲನೆ ಎರಡನೆ ಮೊದಲಾದ ಆರು ಆದಿತ್ಯವಾರಗಳು ಬರುತ್ತವೆ. ಇವುಗಳಿಗೆ, ಹಳೆ ಆದಿತ್ಯವಾರಪಾಠಗಳು ಲತೀನ ಭಾಷೆಯಲ್ಲಿ ಆರಂಭವಾಗುವ ಶಬ್ದದ ಪ್ರಕಾರ ೧) ಇನ್‌ವೊಕಾವಿತ್, ೨) ರೆಮಿನಿಸ್‌ಕೆರೆ, ೩) ಒಕುಲಿ, ೪) ಲೈತಾರೆ, ೫) ಯೂದಿಕ, ೬) ಪಲ್ಮಾರುಮ್ ಎಂಬ ಹೆಸರುಗಳು ಉಂಟು. ಸುವಾರ್ತಾಪಕ್ಷದ ಸಭೆಯಲ್ಲಿ ಉತ್ಥಾನದ ಮೊದಲಿನ ಈ ಆರು ಸಪ್ತಕಗಳಿಗೆ ಶ್ರಮಕಾಲವೆಂಬ ಹೆಸರುಂಟು. ಕ್ರಿಸ್ತನ ಶ್ರಮಗಳ ಧ್ಯಾನವನ್ನು ಅವುಗಳಲ್ಲಿ ಮಾಡ ಬೇಕೆಂಬದೆ ಆ ಹೆಸರಿಗೆ ಕಾರಣ.

**೬೨.** ತಾಳಿಯ ಆದಿತ್ಯವಾರದಲ್ಲಿ ಕ್ರಿಸ್ತನು ಯೆರೂಸಲೇಮಿನಲ್ಲಿ ಪ್ರವೇಶ ಮಾಡಿದಾಗ, ಜನಾಂಗವು ಆತನ ಮೆಸ್ಸೀಯ ಘನತೆಗೆ ಒಪ್ಪಿ ಕೊಂಡದ್ದಕ್ಕೆ ನೆನಪಿಗಾಗಿ ಇರುವ ಈ ವಾರದಲ್ಲಿ ಶ್ರಮಸಪ್ತಕವು ಆರಂಭವಾಗುತ್ತದೆ. ಅದರಲ್ಲಿ ಆಚರಿಸಲ್ಪಡುವ ದಿನಗಳು

ಯಾವವೆಂದರೆ: ಬೃಹಸ್ಪತಿವಾರವು, ಪರಿಶುದ್ಧ ರಾತ್ರಿಭೋಜನ ಸ್ಥಾಪನೆಯಾದ್ದರಿಂದ ಮತ್ತು ಗೆತ್ಸೇಮನೆಯಲ್ಲಿ ಶ್ರಮದ ಹೋರಾಟ ನಡದ್ದರಿಂದ, ಶುಕ್ರವಾರವು, ರಕ್ಷಕನು ಮರಣವನ್ನು ಅನುಭವಿಸಿದದರಿಂದ, ಮಹಾಸಬ್ಬತೆಂಬ ಶನಿವಾರವು, ಕ್ರಿಸ್ತನು ಸಮಾಧಿಯಲ್ಲಿ ವಿಶ್ರಾಂತಿ ಆಗಿದ್ದದರಿಂದ.

**೭೩.** ಉತ್ಥಾನ ಹಬ್ಬವನ್ನು ಕ್ರಿಸ್ತನ ಉತ್ಥಾನದ ನೆನಪಿಗೆ ಆಚರಿಸುತ್ತೇವೆ. ಅದು ಚಲ ಹಬ್ಬವಾಗಿದ್ದು ಯಾವಾಗಲೂ ಆದಿತ್ಯವಾರ ದಿನ ಬರುತ್ತದೆ. ಮಾರ್ಚ ತಿಂಗಳ ರಾತ್ರಿ ದಿನಸಮಾರ್ಧದ ಮೇಲೆ ಬರುವ ಹುಣ್ಣುಮೆಯ ತರುವಾಯದ ಮೊದಲನೆ ಆದಿತ್ಯವಾರವೆ ಉತ್ಥಾನದ ಆದಿತ್ಯವಾರ. ಆದರೆ ಆ ಆದಿತ್ಯವಾರವು ಯೆಹೂದ್ಯರ ಪಸ್ಕ ದಿನವಾಗಿದ್ದರೆ, ಉತ್ಥಾನ ದಿನವು ಹುಣ್ಣುಮೆಯ ಮೇಲಿನ ಎರಡನೆ ಆದಿತ್ಯವಾರ. — ಉತ್ಥಾನ ದಿನವು ಮೊದಲನೆದೆಂದು, ಅದರಿಂದ ನಾಲ್ವತ್ತನೆ ದಿನ, ಹಾಗಾದರೆ, ಯಾವಾಗಲೂ ಬೃಹಸ್ಪತಿವಾರ ಕ್ರಿಸ್ತನ ದಿವಾರೋಹಣದ ಹಬ್ಬವನ್ನೂ, ಐವತ್ತನೆ ದಿನ ಪರಿಶುದ್ಧಾತ್ಮವು ಶಿಷ್ಯರ ಮೇಲೆ ಇಳಿದು ಬಂದದ್ದಕ್ಕೂ ಕ್ರೈಸ್ತಸಭೆಯು ಸ್ಥಾಪಿಸಲ್ಪಟ್ಟದ್ದಕ್ಕೂ ನೆನಪಿಗಾಗಿ ಪಂಚಾಶತ್ತಿನ ಹಬ್ಬವನ್ನೂ ಆಚರಿಸುತ್ತೇವೆ. — ಉತ್ಥಾನದ ಹಬ್ಬಕ್ಕೂ ಪಂಚಾಶತ್ತಿನ ಹಬ್ಬಕ್ಕೂ ನಡುವೆ ಬರುವ ಆರು ಆದಿತ್ಯವಾರಗಳ ಹೆಸರು ಯಾವವೆಂದರೆ: ೧) ಕ್ವಾಸಿಮೊದೊಗೇನಿತಿ (೧ ಪೇತ್ರ. ೨, ೨.); ೨) ಮಿಸೆರಿಕೊರ್ದಿಯಾಸ್‌ದೊಮಿನಿ; ೩) ಯುಬಿಲಾತೆ; ೪) ಕಂತಾತೆ; ೫) ರೊಗಾತೆ; ೬) ಎಕ್ಸೌದಿ.

**೭೪.** ಪಂಚಾಶತ್ತಿನ ಹಬ್ಬದ ಮೇಲಿನ ಆದಿತ್ಯವಾರಕ್ಕೆ ಹೆಸರು ತ್ರಿಯೇಕತ್ವದ ಹಬ್ಬ. ನಾವು ಕ್ರೈಸ್ತಧರ್ಮದಲ್ಲಿರುವ ಪರಿಶುದ್ಧ ತ್ರಿಯೇಕತ್ವದ ಮೂಲಬೋಧನೆಯಲ್ಲಿ ನಂಬುತ್ತೇವೆಂದು ಆ ದಿನದಲ್ಲಿ ಅರಿಕೆ ಮಾಡುತ್ತೇವೆ. ಅಂದಿನಿಂದ ಆಗಮನದ ಮೊದಲನೆ ಆದಿತ್ಯವಾರದ ಪರ್ಯಂತ ಬರುವ ೨೩ — ೨೭ ಆದಿತ್ಯವಾರಗಳಿಗೆ ತ್ರಿಯೇಕತ್ವದ ಮೇಲಿನ ಆದಿತ್ಯವಾರಗಳೆಂಬ ಹೆಸರುಂಟು. (ಸಮ ನೋಡು **೭೦.**)

**೭೫.** ಇವುಗಳ ಹೊರ್ತು ವಿಲಾಯತಿಯಲ್ಲಿರುವ ಸುವಾರ್ತಾಪಕ್ಷದ ಅನೇಕ ಸಭೆಗಳಲ್ಲಿ ಬೇರೆ ದಿನಗಳನ್ನು ಸಹಾ ಆಚರಿಸುವದುಂಟು; ಹಾಗೆ, ಮಾನಸಾಂತರ ದಿನ, ಪೈರಿನ ಹಬ್ಬ, ಪುನಃಸ್ಥಾಪನೆಯ ಹಬ್ಬ ೩೧ನೆ ಒಕ್ಟೋಬರ್, ಇತ್ಯಾದಿ.



## ಐದನೆ ಕಟ್ಟಳೆ.

ನಿನ್ನ ದೇವರಾದ ಕರ್ತನು ನಿನಗೆ ಕೊಡುವ ಭೂಮಿಯಲ್ಲಿ ನಿನ್ನ ದಿವಸಗಳು ಹೆಚ್ಚು ಆಗುವ ಹಾಗೆ ನಿನ್ನ ತಂದೆ ತಾಯಿಗಳನ್ನು ಸನ್ಮಾನಿಸ ಬೇಕು.

ಹಾಗಂದರೇನು?

ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ನಮ್ಮ ತಂದೆ ತಾಯಿಗಳನ್ನೂ ನಮ್ಮ ಯಜಮಾನರನ್ನೂ ಅಲಕ್ಷ ಮಾಡದೆಯೂ, ಕೋಪವೆಬ್ಬಿಸದೆಯೂ, ಅವರನ್ನು ಸನ್ಮಾನಿಸಿ, ಸೇವಿಸಿ, ಅನುಸರಿಸಿ ಸ್ನೇಹಿಸ ಬೇಕು.

**೭೬.** ಐದನೆ ಕಟ್ಟಳೆಯಿಂದ ನಾವು ದೇವರನ್ನು ಭೂಮಿಯಲ್ಲಿರುವ ಆತನ ಮಾನುಷ ಪ್ರತಿ ಸ್ಥಾನೀಯರಲ್ಲಿ ಸನ್ಮಾನಿಸ ಬೇಕೆಂದು ನಿಯಮಿಸಿ ಅದೆ. ಆದ್ದರಿಂದ ಈ ಕಟ್ಟಳೆಯು ಅದರ ಸ್ವಭಾವದ ಪ್ರಕಾರ ಮೊದಲನೆ ಹಲಿಗೆಗೆ ಶೇರಿ ಅದೆ, ಆದರೂ ಎರಡನೆ ಹಲಿಗೆಗೆ ಇದು ಸಂಕವೆಂದು ಹೇಳ ಬಹುದು.

**೭೭.** ದೇವರು ತಂದೆ ತಾಯಿಗಳಿಂದ ನಮಗೆ ಶರೀರ ಸಂಬಂಧವಾದ ಜೀವವನ್ನೂ ಅದಕ್ಕೆ ಅವಶ್ಯವಾದ ಎಲ್ಲಾನ್ನೂ ಕೊಡಲಿಕ್ಕೆ ಮಾತ್ರವಲ್ಲಾ, ನಮ್ಮನ್ನು ಎಲ್ಲಾ ವಿಷಯದಲ್ಲಿಯೂ ಆತ್ಮಿಕವಾಗಿ ಸಾಕಲಿಕ್ಕೂ ಶಿಕ್ಷಿಸಲಿಕ್ಕೂ, ಬೆಳಿಸಲಿಕ್ಕೂ ಅವರಿಗೆ ದಯ ಮಾಡಿ, ಇದೆ ಕಾರಣದಿಂದ ಅವರಿಗೆ ತನ್ನ ಸ್ವಂತ ಅಧಿಕಾರ ಮಾನಗಳ ಪ್ರತಿಕಾಂತಿಯನ್ನು ಕೊಟ್ಟು, ಇರಲಾಗಿ, ಐದನೆ ಕಟ್ಟಳೆಯಲ್ಲಿ ಮುಖ್ಯವಾಗಿ ತಂದೆ ತಾಯಿಗಳಿಗೆ ಮಕ್ಕಳು ಯಾವ ಹಂಗಿನಲ್ಲಿರುತ್ತಾರೆಂಬದು ಹೇಳಿಯದೆ.

**೭೮.** ಐದನೆ ಕಟ್ಟಳೆಯಲ್ಲಿ ನಿಷೇಧಿಸಿದ್ದು ಯಾವದಂದರೆ: ತಂದೆ ತಾಯಿಗಳನ್ನು ಹೃದಯದಲ್ಲಿ ತುಚ್ಛೀಕರಿಸುವದು ೧), ಅಥವಾ ಅವಿಧೇಯತ್ವದಿಂದಲೂ, ದುಡುಕುವದರಿಂದಲೂ, ಕೃತಘ್ನತೆಯಿಂದಲೂ, ಪ್ರೀತಿ ಹೀನತ್ವದಿಂದಲೂ ಮಾತುಗಳಲ್ಲಿಯೂ ೨) ಕ್ರಿಯೆಗಳಲ್ಲಿಯೂ ೩) ಅವರಲ್ಲಿ ಕೋಪವೆಬ್ಬಿಸುವದು.

೧) "ತಂದೆಯನ್ನು ಗೇಲಿ ಮಾಡಿ, ತಾಯಿಗೆ ವಿಧೇಯವಾಗಿರುವದಕ್ಕೆ ತಿರಸ್ಕರಿಸುವ ಕಣ್ಣನ್ನು ತಗ್ಗಿನ ಕಾಗೆಗಳು ಕಿತ್ತು, ಹದ್ದಿನ ಮರಿಗಳು ತಿನ್ನುವವು." (ಸಾಮತಿ. ೩೦, ೧೭.)

೨) "ತನ್ನ ತಂದೆ ತಾಯಿಗಳನ್ನು ತಾತ್ಸಾರ ಮಾಡುವವನಿಗೆ ಶಾಪ! ಜನವೆಲ್ಲಾ, ಆಮೆನ್! ಎಂದು ಹೇಳಲಿ." (ದ್ವಿತಿ. ೨೭, ೧೬.) (ಮತ್ತಾ. ೧೫, ೪.)

೩) "ತಂದೆಯನ್ನು ಸೂರೆ ಮಾಡಿ, ತಾಯಿಯನ್ನು ಓಡಿಸುವವನು ಲಜ್ಜೆಯನ್ನೂ ನಾಚಿಕೆಯನ್ನೂ ಹುಟ್ಟಿಸುವ ಮಗನಾಗಿದ್ದಾನೆ." (ಸಾಮತಿ. ೧೯, ೨೬.) "ತಂದೆಯನ್ನೂ ತಾಯಿಯನ್ನೂ ಹೊಡೆಯುವವನು ಸಾಯಲೇ ಸಾಯ ಬೇಕು." (ಹೊರ. ೨೧, ೧೫.) "ಒಬ್ಬನು ಸ್ವಂತ ಜನರಿಗೋಸ್ಕರವೂ, ಮುಖ್ಯವಾಗಿ ಮನೆಯವರಿಗೋಸ್ಕರವೂ, ಮುಂಚಿಂತಿಸದಿದ್ದರೆ, ವಿಶ್ವಾಸವನ್ನು ಬೊಂಕಿ, ಅವಿಶ್ವಾಸಿಗಿಂತ ಕಡೆಯಾಗಿದ್ದಾನೆ." (೧ ತಿಮೊ. ೫, ೮.)

**೭೯.** ಆದರೆ ಐದನೆ ಕಟ್ಟಳೆಯು ವಿಧಿಸುವದೇನಂದರೆ: ನಾವು ನಮ್ಮ ತಂದೆ ತಾಯಿಗಳನ್ನು ಸನ್ಮಾನಿಸಿ, ಸೇವಿಸಿ, ವಿಧೇಯರಾಗಿ, ಪ್ರೀತಿ ಮಾಡಿ ಮಾನ್ಯರೆಂದೆಣಿಸ ತಕ್ಕದ್ದು.

"ಎಲ್ಲರು ನಿಮ್ಮ ನಿಮ್ಮ ತಂದೆ ತಾಯಿಗಳಿಗೆ ಭಯ ಪಡಿರಿ." (ಲೇವಿ. ೧೯, ೩.) "ನನ್ನ ಮಗನೇ, ನಿನ್ನ ತಂದೆಯ ಶಿಕ್ಷೆಯನ್ನು ಕೇಳು; ನಿನ್ನ ತಾಯಿಯ ನ್ಯಾಯಪ್ರಮಾಣವನ್ನು ಬಿಡ ಬೇಡ. ಯಾಕಂದರೆ ಅವು ನಿನ್ನ ತಲೆಗೆ ಸುಂದರಮಾಲೆಯೂ, ನಿನ್ನ ಕೊರಳಿಗೆ ಸರಗಳೂ ಆಗಿರುವವು." (ಸಾಮತಿ. ೧, ೮. ೯.) "ಮಕ್ಕಳೇ, ಎಲ್ಲಾದರಲ್ಲಿ ಹೆತ್ತವರಿಗೆ ವಿಧೇಯರಾಗಿರ್ರಿ; ಇದೇ ಕರ್ತನಿಗೆ ಆನಂದಕರವಾದದ್ದು." (ಕೊಲೊ. ೩, ೨೦.) "ಅವರು ಮೊದಲು ಸ್ವಂತ ಮನೆಯಲ್ಲಿ ಭಕ್ತರಾಗಿರಲೂ, ಹೆತ್ತವರಿಗೆ ಪ್ರತ್ಯುಪಕಾರ ಮಾಡಲೂ, ಕಲಿತು ಕೊಳ್ಳಲಿ. ಯಾಕಂದರೆ ದೇವರ ಮುಂದೆ ಇದೇ ಒಳ್ಳೇದಾಗಿಯೂ ಸಮರ್ಪಕವಾಗಿಯೂ ಅದೆ." (೧ ತಿಮೊ. ೫, ೪.)

**೮೦.** ಆದರೆ ಐದನೆ ಕಟ್ಟಳೆಯಿಂದ ತಂದೆ ತಾಯಿಗಳನ್ನು ಮಾತ್ರವಲ್ಲಾ, ಸಂಸ್ಥಾನ ಸಭೆ ಶಾಲೆ ಮನೆಗಳಲ್ಲಿ ತಂದೆ ತಾಯಿಗಳ ಸ್ಥಾನದಲ್ಲಿರುವವರೆಲ್ಲರನ್ನು, ಹಾಗಾದರೆ ಅಧಿಕಾರಸ್ಥರನ್ನೂ ೧), ಸಭಾ ಬೋಧಕರನ್ನೂ, ಶಾಲಾ ಬೋಧಕರನ್ನೂ ೨), ಯಜಮಾನರನ್ನೂ ೩), ಸಹಾ ತಂದೆ ತಾಯಿಗಳಲ್ಲಿ ಎಂದು ತಿಳಕೊಳ್ಳ ಬೇಕು. ಹ್ಯಾಗಂದರೆ, ತಂದೆ ತಾಯಿಗಳ ಹಾಗೆಯೆ ಅವರನ್ನು ಸಹಾ (ಹೌದು ಸಲ್ಪ ಬೇರೆ ತರವಾಗಿ, ಬೇರೆ ಅಧಿಕಾರವುಳ್ಳವರಾಗಿ) ದೇವರು ತನ್ನ ಹೆಸರಿನಲ್ಲಿಯೂ ತನ್ನ ಪ್ರತ್ಯಾಮ್ನವಾಗಿಯೂ ಬೆಳಿಸಲಿಕ್ಕೂ, ಸಾಕಲಿಕ್ಕೂ, ಶಿಕ್ಷಿಸಲಿಕ್ಕೂ, ಉಪಕಾರ ಮಾಡಲಿಕ್ಕೂ ದಂಡಿಸಲಿಕ್ಕೂ ಇಟ್ಟಿದ್ದಾನೆ.

೧) "ಒಬ್ಬೊಬ್ಬ ಮನುಷ್ಯನು ಮೇಲಾಗಿರುವ ಅಧಿಕಾರಗಳಿಗೆ ವಿಧೇಯನಾಗಿರಲಿ. ಯಾಕಂದರೆ ದೇವರಿಂದಲೇ ಹೊರ್ತು, ಯಾವ ಅಧಿಕಾರವೂ ಇಲ್ಲ; ಇರುವ ಅಧಿಕಾರಗಳು ದೇವರಿಂದ ನೇಮಿಸಲ್ಪಟ್ಟಿವೆ. ಹೀಗಿರುವದರಿಂದ ಅಧಿಕಾರವನ್ನು ಎದುರಿಸುವವನು ದೇವರ ನೇಮಕವನ್ನು ಎದುರಿಸುತ್ತಾನೆ. ಆದರೆ ಎದುರಿಸುವವರು ತಮಗೆ ತಾವೇ ಆಜ್ಞೆನಿರ್ಣಯವನ್ನು ಹೊಂದುವರು." (ರೋಮಾ. ೧೩, ೧. ೨.) "ಕೈಸರನದನ್ನು ಕೈಸರನಿಗೆ,

ದೇವರದನ್ನು ದೇವರಿಗೆ ಕೊಡಿರಿ." (ಮತ್ತಾ. ೨೨, ೨೧.) (೧ ಪೇತ್ರ. ೨, ೧೩. ೧೪. ತೀತ. ೩, ೧. ೧ ತಿಮೊ. ೨, ೧—೩.)

೨) "ನಿಮ್ಮ ನಡಿಸುವವರಿಗೆ, ಅವರು ಲೆಕ್ಕ ಒಪ್ಪಿಸ ಬೇಕಾದವರಾಗಿ ನಿಮ್ಮ ಪ್ರಾಣಗಳನ್ನು ಕುರಿತು ಎಚ್ಚರತ್ತು ಇರುವದರಿಂದ, ವಿಧೇಯರಾಗಿದ್ದು ಒಳೆ ಬೀಳಿರಿ. ಅವರು ಮೂಲುಗುವಿಕೆಯಿಂದಲ್ಲ, ಸಂತೋಷದಿಂದ ಅದನ್ನು ಮಾಡುವ ಹಾಗೆಯೇ; ಯಾಕಂದರೆ ಅದು ನಿಮಗೆ ಪ್ರಯೋಜನವಿಲ್ಲ." (ಇಬ್ರಿ. ೧೩, ೧೭.) (೧ ಥೆಸ್ಸ. ೫, ೧೨. ೧೩. ಗಲಾ. ೬, ೬.)

೩) "ದಾಸರೇ, ಮಾಂಸದ ಪ್ರಕಾರವಾದ ಯಜಮಾನರಿಗೆ ಭಯದಿಂದಲೂ, ನಡುಗಿನಿಂದಲೂ, ನಿಮ್ಮ ಹೃದಯಗಳ ಯಥಾರ್ಥದಲ್ಲಿ ಕ್ರಿಸ್ತನಿಗೆಂದು ವಿಧೇಯರಾಗಿರ್ರಿ. ಕಣ್ಣು ಸೇವೆಯಿಂದ ಮನುಷ್ಯರನ್ನು ಮೆಚ್ಚಿಸುವವರ ಹಾಗಲ್ಲ, ಕ್ರಿಸ್ತನ ದಾಸರ ಹಾಗೆ ದೇವರ ಚಿತ್ತವನ್ನು ಹೃದಯದಿಂದ ಮಾಡಿ, ಸುಚಿತ್ತದಿಂದ ಮನುಷ್ಯರನ್ನಲ್ಲ, ಕರ್ತನನ್ನು ಸೇವಿಸುತ್ತೀರೆಂದು ತಿಳಿದು ಕೊಳ್ಳಿರಿ." (ಎಫೆ. ೬, ೫—೭.) "ಸೇವಕರೇ, ಒಳ್ಳೆಯವರೂ ಸಾತ್ವಿಕರೂ ಆಗಿರುವ ಯಜಮಾನರಿಗೆ ಮಾತ್ರವಲ್ಲ, ಮೂರ್ಖರಿಗೂ ಸಕಲ ಭಯದಲ್ಲಿ ಒಳಗಾಗಿರಿ." (೧ ಪೇತ್ರ. ೨, ೧೮.) (ಕೊಲೊ. ೩, ೨೨—೨೪. ತೀತ. ೨, ೯. ೧೦.)

ಪರಿಶಿ. ಮನುಷ್ಯರಲ್ಲಿ ಇರುವ ಪ್ರಾಮುಖ್ಯವಾದ ಸಕಲ ಸದ್ವಿಚಾರದ ಸಂಬಂಧಗಳು, ಅವುಗಳ ಇರುವಿಕೆಗೆ ಅವಶ್ಯವಾದ ಗುರು ಲಘುವೆಂಬ ಕ್ರಮದ ಸಹಿತವಾಗಿ, ಕುಟುಂಬವೆಂಬದರಿಂದ ಸ್ವಾಭಾವಿಕವಾಗಿ ಹುಟ್ಟಿ ಬಂದದ್ದಾಗಿರುತ್ತವೆ. ಆದಕಾರಣ ಅವುಗಳಿಗೆ ಸಹಾ ಕುಟುಂಬದ ಹಾಗೆಯೆ ಅದೆ ದಿವ್ಯ ಅಧಿಕಾರವೂ, ಅದೆ ಪರಿಶುದ್ಧವಾದ ಹಂಗುಗಳೂ ಸ್ವತಂತ್ರಗಳೂ ಉಂಟು.

**೮೧.** ಹೆತ್ತವರಿಗೂ ಮಕ್ಕಳಿಗೂ ಹ್ಯಾಗೊ, ಅದೆ ಪ್ರಕಾರದ ತಾರತಮ್ಯಗಳಿರುವಲ್ಲಿ ಎಲ್ಲಾ ಕಡೆಯಲ್ಲಿಯೂ ಈ ಐದನೆ ಕಟ್ಟಳೆಯು ಸಲ್ಲುತ್ತದೆ. ಆದಕಾರಣ, ಹಾಗೆ, ಉಪಕಾರಿಗಳಿಗೆ[೧] ಕೃತಜ್ಞರಾಗಿರ ಬೇಕೆಂಬದೂ, ಮುಖ್ಯವಾಗಿ ವೃದ್ಧರಿಗೆ[೨] ಮಾನ ಕೊಟ್ಟು ಲಕ್ಷ ಇಡ ಬೇಕೆಂಬದೂ ಈ ಕಟ್ಟಳೆಯಲ್ಲಿ ಸೇರಿತು.

೧) ಸಾಮತಿ. ೧೭, ೧೩. ೧ ಥೆಸ್ಸ. ೫, ೧೭. ಲೂಕ. ೬, ೩೨—೩೫.

೨) "ನೀತಿಮಾರ್ಗದಲ್ಲಿ ಶಿಕ್ಕುವ ನರೆಕೂದಲು ಸೌಂದರ್ಯದ ಕಿರೀಟವಾಗಿದೆ." (ಸಾಮತಿ. ೧೬, ೩೧.) "ನರೆಕೂದಲುಳ್ಳವರ ಮುಂದೆ ಏಳ ಬೇಕು; ಮುದುಕನ ಸನ್ನಿಧಾನವನ್ನು ಸನ್ಮಾನಿಸ ಬೇಕು." (ಲೇವಿಕ. ೧೯, ೩೨.) (೧ ತಿಮೊ. ೫, ೧.)

**೮೨.** ಒಡಹುಟ್ಟಿದ ಮಕ್ಕಳು ಒಟ್ಟಿಗೆ ತಂದೆ ತಾಯಿಗಳನ್ನು ಪ್ರೀತಿ ಮಾಡ ತಕ್ಕ ಹಾಗೆಯೆ, ಒಡಹುಟ್ಟಿದವರು[೧] ತಮ್ಮೊಳಗೆ ಪ್ರೀತಿ ಮಾಡಿ ಕೊಳ್ಳ ಬೇಕೆಂಬದು ಸಹಾ

ಈ ಕಟ್ಟಳೆಯಲ್ಲಿ ಉಂಟು. ಇದೆ ತಾರತಮ್ಯ ಸಂಬಂಧವು ಒಂದೆ ವಿಶ್ವಾಸದಲ್ಲಿಯೂ೨), ಒಂದೆ ಊರಿನವರಲ್ಲಿಯೂ, ಒಂದೆ ಜನಾಂಗದವರಲ್ಲಿಯೂ೩), ಇತ್ಯಾದಿ ಪ್ರತ್ಯಕ್ಷವಾಗುತ್ತದೆ.

೧) "ಇಗೋ, ಸಹೋದರರು ಒಂದೇಯಾಗಿ ವಾಸ ಮಾಡುವದು ಎಷ್ಟೋ ಒಳ್ಳೇದು! ಎಷ್ಟೋ ರಮ್ಯವಾದದ್ದು! . . . ಯಾಕಂದರೆ ಅಲ್ಲಿ ಯೆಹೋವನು ಆಶೀರ್ವಾದವನ್ನು, ಯುಗಯುಗಕ್ಕಿರುವ ಜೀವವನ್ನು ಆಜ್ಞಾಪಿಸಿದ್ದಾನೆ." (ಕೀರ್ತ. ೧೩೩, ೧. ೩.)
೨) "ಎಲ್ಲರಿಗೆ, ಮುಖ್ಯವಾಗಿ ವಿಶ್ವಾಸದ ಮನೆತನದವರಿಗೆ, ಒಳ್ಳೇದನ್ನು ಮಾಡೋಣ." (ಗಲಾ. ೬, ೧೦.) (ಅ. ಕ್ರಿ. ೨, ೪೪. ೪೫.)
೩) ಕೀರ್ತ. ೩೭, ೩. ಯೆರೆ. ೨೯, ೭.

**೮೩.** ಸಂಸ್ಥಾನ, ಸಭೆ, ಶಾಲೆ, ಕುಟುಂಬ, ಮನೆ, ಇವುಗಳು ಎಲ್ಲಾ ಭೂಸಂಬಂಧದ ಕ್ರಮಗಳಿಗೂ, ಎಲ್ಲಾ ಭೂಸಂಬಂಧದ ಸೌಖ್ಯಕ್ಕೂ ಕ್ಷೇಮಕ್ಕೂ ಅಸ್ತಿವಾರಗಳಾಗಿರುತ್ತವೆ. ಆದಕಾರಣ ಈ ಕಟ್ಟಳೆಯನ್ನು ಮಾಡುವವನಿಗೆ ಭೂಸಂಬಂಧವಾದ ಆಶೀರ್ವಾದ ಕ್ಷೇಮಗಳ ವಾಗ್ದತ್ತವೂ೧), ಅದನ್ನು ತುಚ್ಛೀಕರಿಸುವವನಿಗೆ ಭೂಸಂಬಂಧವಾದ ಶಾಪ ಕಷ್ಟಗಳ ಬೆದರಿಕೆಯೂ೨), ಹೇಳಿಯದೆ. ಮತ್ತು ಆಶೀರ್ವಾದವೂ ಬೆದರಿಕೆಯೂ ಬಾರದೆ ಹೋಗುವದಿಲ್ಲವೆಂಬದಕ್ಕೆ ಅನುದಿನದ ಅನುಭವವೆ ಸಾಕ್ಷಿ.

೧) "ನಿನಗೆ ಒಳ್ಳೇದಾಗುವ ಹಾಗೆಯೂ, ನೀನು ಭೂಮಿಯ ಮೇಲೆ ದೀರ್ಘಾಯುಷ್ಯದವನಾಗುವ ಹಾಗೆಯೂ, ನಿನ್ನ ತಂದೆಯನ್ನೂ ತಾಯಿಯನ್ನೂ ಸನ್ಮಾನಿಸು." (ಎಫೆ. ೬, ೨. ೩.) (ಹೊರ. ೨೦, ೧೨.) "ಆದದರಿಂದ ಎಲ್ಲಾದರ ಮೊದಲು, ಬಿನ್ನಹ ಪ್ರಾರ್ಥನೆ ವಿಜ್ಞಾಪನೆ ಸ್ತೋತ್ರಗಳನ್ನು, ಎಲ್ಲಾ ಮನುಷ್ಯರಿಗೋಸ್ಕರವೂ, ಅರಸರಿಗೋಸ್ಕರವೂ ಅಧಿಕಾರದಲ್ಲಿರುವವರೆಲ್ಲರಿಗೋಸ್ಕರವೂ, ನಾವು ಸಕಲ ಭಕ್ತಿಯಿಂದಲೂ, ಮರ್ಯಾದೆಯಿಂದಲೂ, ಶಾಂತವಾಗಿಯೂ, ಸಮಾಧಾನವಾಗಿಯೂ, ಕಾಲಕ್ಷೇಪ ಮಾಡುವ ಹಾಗೆ ಮಾಡ ಬೇಕೆಂದು ಬುದ್ಧಿ ಹೇಳುತ್ತೇನೆ." (೧ ತಿಮೊ. ೨, ೧. ೨.)
೨) "ತನ್ನ ತಂದೆ ತಾಯಿಗಳನ್ನು ಶಪಿಸುವವನ ದೀಪವು ಕಾರ್ಗತ್ತಲೆಯಲ್ಲಿ ಆರಿಹೋಗುವದು." (ಸಾಮತಿ. ೨೦, ೨೦.)

**೮೪.** ಹೆತ್ತವರೂ, ಬೋಧಕರೂ, ಯಜಮಾನರೂ, ದೇವರ ಪ್ರತ್ಯಾಮ್ನರಾಗಿ, ದೇವರ ಹೆಸರಿನಲ್ಲಿಯೂ ದೇವರ ಚಿತ್ತದ ಪ್ರಕಾರವೂ ಬೆಳಸಿ, ಬೋಧಿಸಿ, ಶಿಕ್ಷಿಸಿ, ಎಚ್ಚರಿಸಿ, ಆಳುವದರಲ್ಲಿಯೆ, ಅಂಥವರಿಗೆ ಮಾನ ಕೊಡ ಬೇಕೆಂಬ ಹಂಗು ಆಧಾರಗೊಂಡದೆ.

ಹಾಗಾದರೆ, ಈ ಐದನೆ ಕಟ್ಟಳೆಯಿಂದ ತಂದೆತಾಯಿಗಳೂ[೧], ಬೋಧಕರೂ[೨], ಯಜಮಾನರೂ[೩], ಈ ಕರಿಯುವಿಕೆಯನ್ನು ಪೂರ್ಣ ಮನಸ್ಸಿನಿಂದಲೂ ಆಸಕ್ತಿಯಿಂದಲೂ ಪ್ರೀತಿಯಿಂದಲೂ ಪೂರೈಸುವ ಹಂಗಿಗೆ ಒಳಗಾಗುತ್ತಾರೆ.

೧) ಎಫೆ. ೬, ೪. ಕೊಲೊ. ೩, ೨೧.
೨) ರೋಮಾ. ೧೨, ೭. ೮. ೧ ತಿಮೊ. ೫, ೧೭./೧೩. ೧೬. ತೀತ. ೨, ೭. ೮.
೩) ಎಫೆ. ೬, ೯. ಕೊಲೊ. ೪, ೧.

# ಎರಡನೆ ಹಲಿಗೆ.

## ನೆರೆಯುವನ ಕಡೆಯ ಹಂಗು.

**೮೫.** ಈಗ ಬರುವಂಥಾ (ಆರನೆ) ಕಟ್ಟಳೆಯಿಂದ ನೆರೆಯವನ ಕಡೆಯ ಹಂಗುಗಳು ಆರಂಭವಾಗುತ್ತವೆ. ಹೆತ್ತವರೂ, ಬೋಧಕರೂ ಯಜಮಾನರೂ ನಮ್ಮ ಹಾಗೆಯೆ ಮನುಷ್ಯರು ಎಂಬದು ಸರಿ, ಆದರೆ ಐದನೆ ಕಟ್ಟಳೆಯಲ್ಲಿ ಅವರು ಅಂಥವರಾಗಿ ಅಲ್ಲಾ, ದೇವರ ಪ್ರತ್ಯಾಪ್ನರಾಗಿ ಕಾಣ ಬರುತ್ತಾರೆ; ಆದಕಾರಣ, ಅವರು ದೇವರ ಪ್ರತ್ಯಾಪ್ನರಾಗಿರುವಷ್ಟಕ್ಕೂ, ದಿವ್ಯ ಅಧಿಕಾರ ಮಾನಗಳ ಪ್ರತಿಕಾಂತಿಯನ್ನು ಹೊಂದಿ ಇರುವಷ್ಟಕ್ಕೂ, ಅವರನ್ನು ದೇವರ ಹಾಗೆಯೆ ನಾವು ಸನ್ಮಾನಿಸ ಬೇಕೆಂದು ಆ ಕಟ್ಟಳೆಯಲ್ಲಿ ಬೋಧಿಸಿ ಅದೆ. ಆದರೆ ಈಗ ಬರುವ ಕಟ್ಟಳೆಗಳಲ್ಲಿ ನಮ್ಮ ನೆರೆಯವರನ್ನು, ಅವರು ನಮ್ಮ ಸಂಗಡ ಅದೆ ಮೂಲವನ್ನೂ, ಅದೆ ಉದ್ಯೋಗವನ್ನೂ, ಸ್ಥಾನವನ್ನೂ, ಅಧಿಕಾರವನ್ನೂ ಹೊಂದಿರುವ ಕಾರಣ, ನಮ್ಮ ಹಾಗೆಯೆ[೧] ಪ್ರೀತಿ ಮಾಡ ಬೇಕೆಂದು ಬೋಧಿಸಿ ಅದೆ.

೧) "ನಿನ್ನ ದೇವರಾದ ಕರ್ತನನ್ನು ನಿನ್ನ ಪೂರ್ಣ ಹೃದಯದಿಂದಲೂ, ನಿನ್ನ ಪೂರ್ಣ ಪ್ರಾಣದಿಂದಲೂ, ನಿನ್ನ ಪೂರ್ಣ ಬುದ್ಧಿಯಿಂದಲೂ, ಪ್ರೀತಿ ಮಾಡು.... ನಿನ್ನ ನೆರೆಯವನನ್ನು ನಿನ್ನ ಹಾಗೆಯೇ ಪ್ರೀತಿ ಮಾಡು." (ಮತ್ತಾ. ೨೨, ೩೭—೪೦.) (**೧೯.**)

**೮೬.** ಆದರೆ ಈ ಕಟ್ಟಳೆಗಳಿಂದ ನೆರೆಯವನ ಕಡೆಗೆ ನಾವು ಹ್ಯಾಗೆ ಇರ ಬೇಕೆಂದು ಮಾಡಿಟ್ಟ ಹಂಗು ಯಾವದುಂಟೊ, ಅದೆಲ್ಲಾದರಲ್ಲಿ ನಾವು ನಮ್ಮ ಸ್ವಂತ ಕಡೆಗೆ ಸಹಾ ಹಂಗಿನವರಾಗಿದ್ದೇವೆಂಬದು ಸಹಾ ಸಹಜವಾಗಿರುತ್ತದೆ.

**೮೭.** ನೆರೆಯವನ ಕಡೆಯ ಪ್ರೀತಿಯಿಂದಲೂ, ಅದಕ್ಕೆ ಸಮಾನವಾಗಿರುವ ನಮ್ಮ ಸ್ವಂತ ಕಡೆಯ ಪ್ರೀತಿಯಿಂದಲೂ ದೇವರ ಕಡೆಯ ಪ್ರೀತಿ ಕಡಿಮೆ ಆಗ ಬಾರದು ಮಾತ್ರವಲ್ಲಾ ಆ ಪ್ರೀತಿಯು ದೇವರ ಕಡೆಯ ಪ್ರೀತಿಯಲ್ಲಿ ಬೇರೂರಿ ಅದರಿಂದ ಬೆಳದು ಬರ ಬೇಕು. ನೆರೆಯವನಲ್ಲಿ ಸಹಾ, ಮತ್ತು ಅವನಲ್ಲಿ ಹ್ಯಾಗೊ ಹಾಗೆಯೆ ನಮ್ಮಲ್ಲಿಯೂ ದೇವರ ಸ್ವರೂಪವನ್ನು (**೧೭೯.**) ಸನ್ಮಾನಿಸಿ[೧], ಈ ಪ್ರಕಾರ ನೆರೆಯವನ ಕಡೆಗೂ ನಮ್ಮ ಸ್ವಂತ ಕಡೆಗೂ ಇರುವ ಹಂಗು ಹ್ಯಾಗೂ ಮೂಲವಾಗಿ ದೇವರ ಕಡೆಯ ಹಂಗು ಆಗಿ ಇರ ತಕ್ಕದ್ದು[೨].

೧) ಉತ್ಪತ್ತಿ. ೯, ೬. (**೮೦, ೨.**) ಯಾಕೊ. ೩, ೯. (**೪೩.**)
೨) "ಎರಡನೆದು ಅದಕ್ಕೆ ಸಮಾನವಾಗಿದೆ; ಏನಂದರೆ, ನಿನ್ನ ನೆರೆಯವನನ್ನು ನಿನ್ನ ಹಾಗೆಯೇ ಪ್ರೀತಿ ಮಾಡು." (ಮತ್ತಾ. ೨೨, ೩೯.)

## ಆರನೆ ಕಟ್ಟಳೆ.

### ಕೊಲ್ಲ ಬಾರದು.

ಹಾಗಂದರೇನು?

ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ನಮ್ಮ ನೆರೆಯವನಿಗೆ ಒಂದಾದರೂ ಕೇಡು ಮಾಡದೆಯೂ, ಏನೂ ದುಃಖ ಕೊಡದೆಯೂ, ಸಹಾಯ ಮಾಡಿ ಸಕಲ ಕಷ್ಟಗಳಲ್ಲಿ ಕೈ ಕೊಡ ಬೇಕು.

**೮೮.** ಆರನೆ ಕಟ್ಟಳೆಯಲ್ಲಿ ನೆರೆಯವನ ಜೀವದ ಕಡೆಯ ಹಂಗಿನ ಪ್ರಸ್ತಾಪ. ಈ ಜೀವವು ಶರೀರ ಪ್ರಾಣಾತ್ಮಗಳ ಐಕ್ಯ ಸಂಬಂಧಗಳಿಂದ ಉಂಟಾಗಿ ಇರುತ್ತದೆ. (**೧೭೯.**) ಈ ಐಕ್ಯಕ್ಕೆ ಏನು ಅಡ್ಡಿ ಮಾಡುತ್ತದೊ, ಅದೆಲ್ಲಾ ಮನುಷ್ಯನಿಗೆ, ಅವನ ಭೂಸಂಬಂಧವಾದ ಕರಿಯುವಿಕೆ ಪ್ರಯೋಜನಗಳನ್ನು ತಕ್ಕ ಪ್ರಕಾರ ಪೂರಯಿಸುವದು ಸಾಧ್ಯವಾಗ ಬಿಡುವದಿಲ್ಲ. ಕೊಲೆಯು ಕಠಿಣವಾದ ದ್ರೋಹವಾಗಿ ಕಾಣುವದಕ್ಕೆ ಇದು ಒಂದು ಸಂಗತಿ; ಎರಡನೆದು ಯಾವದೆಂದರೆ, ಮನುಷ್ಯರೆಲ್ಲರೂ ತಮ್ಮೊಳಗೆ ಸಂಬಂಧಿಕರಾಗಿರುತ್ತಾರೆಂಬದು[೧], ಮೂರನೆದೂ ಪ್ರಾಮುಖ್ಯವಾದದ್ದೂ ಯಾವದೆಂದರೆ, ಪ್ರತಿ ಮನುಷ್ಯನು

ದೇವರ ಸ್ವರೂಪವನ್ನು ತನ್ನಲ್ಲಿ ಧರಿಸುತ್ತಾನೆ, ಹೀಗಾಗಿ ಪ್ರತಿ ಕೊಲೆಯಿಂದ ದೇವರ ಸ್ವಾಮಿತ್ವದ ಮೇಲೆ ಅಪರಾಧವಾದ ಹಾಗಾಯಿತು ಎಂಬದು ೨).

೧) "ಮನುಷ್ಯನ ಪ್ರಾಣವನ್ನು ಮನುಷ್ಯನ ಬಳಿಯಿಂದಲೂ, ಅವನವನ ಸಹೋದರನ ಬಳಿಯಿಂದಲೂ ವಿಚಾರಿಸುವೆನು." (ಉತ್ಪ. ೯, ೫.)

೨) "ಮನುಷ್ಯನ ರಕ್ತವನ್ನು ಚೆಲ್ಲುವವನ್ಯಾವನೋ, ಅವನ ರಕ್ತವು ಮನುಷ್ಯನಿಂದ ಚೆಲ್ಲಲ್ಪಡುವದು. ಯಾಕಂದರೆ ತನ್ನ ಸ್ವರೂಪದಲ್ಲಿ ದೇವರು ಮನುಷ್ಯನನ್ನು ಉಂಟು ಮಾಡಿದನು." (ಉತ್ಪ. ೯, ೬.)

**೮೯.** ಎಲ್ಲಾ ಜೀವವು ದೇವರ ದಾನವಾಗಿರುತ್ತದೆ. ಆತನು ಒಬ್ಬನೆ ಜೀವ ಮರಣಗಳಿಗೆ ಕರ್ತನಾಗಿ ಸಹಾ ಇರುತ್ತಾನೆ. ಸಂಸ್ಥಾನ ಮಾತ್ರವೆ ದೇವರ ಪ್ರತ್ಯಾಮ್ನವಾಗಿರುವದರಿಂದ, ಅಕ್ರಮಗಾರರಿಗೆ ಜೀವಘಾತದ ಶಿಕ್ಷೆ ಕೊಡಲಿಕ್ಕೆ ದಿವ್ಯ ಸ್ವತಂತ್ರವುಳ್ಳದ್ದಾಗಿರುತ್ತದೆ.

"ಯಾಕಂದರೆ ನಿನಗೆ ಮೇಲಿಗಾಗಿ ದೇವರ ಸೇವಕನಾಗಿದ್ದಾನೆ. ಆದರೆ ಕೆಟ್ಟದ್ದನ್ನು ಮಾಡಿದರೆ, ಭಯ ಪಡು; ಯಾಕಂದರೆ ಸುಮ್ಮನೆ ಕತ್ತಿಯನ್ನು ಧರಿಸಿ ಕೊಳ್ಳುವದಿಲ್ಲ; ಕೆಟ್ಟದ್ದನ್ನು ನಡಿಸುವವನಿಗೆ ಕೋಪಕ್ಕಾಗಿ ತೀರ್ಪು ಮಾಡುವ ದೇವರ ಸೇವಕನಾಗಿದ್ದಾನೆ." (ರೋಮಾ. ೧೩, ೪.) (ಉತ್ಪ. ೯, ೬.) (**೮೮**, ೨.)

**೯೦.** ಆರನೆ ಕಟ್ಟಳೆಯಲ್ಲಿ ಸ್ಥೂಲ ಕೃತ್ಯವಾದ ಕೊಲೆ ಮಾತ್ರವೆ ಅಲ್ಲಾ, ಅದಕ್ಕೆ ಕಾರಣವಾಗ ಬಹುದಾದಂಥಾದ್ದು ಏನು ಉಂಟೊ ಅದೆಲ್ಲಾ, ಹಾಗಾದರೆ ಹೃದಯದ ಪ್ರೀತಿಹೀನತ್ವವೂ (ಕೋಪ, ದ್ವೇಷ, ಮತ್ಸರ ಇತ್ಯಾದಿ)[೧], ಅದರಿಂದ ವಾಕ್ಯ[೨] ಕ್ರಿಯೆಗಳ ಮೂಲವಾಗಿ ಹೊರಡುವಂಥಾದ್ದೆಲ್ಲವೂ, ನೆರೆಯವನ ಜೀವ ಕ್ಷೇಮಗಳಿಗೆ ಯಾವ ಹಾನಿಯಾದರೂ, ಗಂಡಾಂತರವನ್ನಾದರೂ ಉಂಟು ಮಾಡುವಂಥಾದ್ದೇನುಂಟೊ, ಅದೆಲ್ಲವೂ ಸಹಾ ನಿಷೇಧಿಸಿ ಅದೆ.

೧) "ತನ್ನ ಸಹೋದರನನ್ನು ಹಗೆ ಮಾಡುವ ಪ್ರತಿ ಮನುಷ್ಯನು ಕೊಲೆಗಾರನಾಗಿದ್ದಾನೆ. ಮತ್ತು ಕೊಲೆಗಾರನಾದ ಯಾವನಿಗೂ ಅವನಲ್ಲಿ ನೆಲೆಯಾಗಿರುವ ನಿತ್ಯ ಜೀವವಿಲ್ಲವೆಂದು ಬಲ್ಲಿರಿ." (೧ ಯೋಹ. ३, ೧೫.) (ಎಫೆ. ೪, ३೧. ३೨.)

೨) "ಕೊಲ್ಲ ಬೇಡ; ಕೊಲ್ಲುವವನು ನ್ಯಾಯತೀರ್ವಿಕೆಗೆ ಗುರಿಯಾಗಿರುವನಂತ, ಹಿರಿಯರಿಗೆ ಹೇಳಲ್ಪಟ್ಟಿತೆಂದು ಕೇಳಿದ್ದೀರಿ." ಇತ್ಯಾದಿ. (ಮತ್ತಾ. ೫, ೨೧. ೨೨.) (ಕೀರ್ತ. ೫೭, ೫.)

ಪರಿಶಿ. ೧. ಸ್ವಂತ ಜೀವವನ್ನಾಗಲಿ, ಮತ್ತೊಬ್ಬನ ಜೀವವನ್ನಾಗಲಿ, ರಕ್ಷಿಸುವದ

ಕ್ಕೋಸ್ಕರ, ಬೇರೆ ಏನೂ ಉಪಾಯವಿಲ್ಲದೆ ಅತ್ಯಂತ ಅವಶ್ಯವಾದರೆ, ಕೊಲ್ಲ ಬರುವವನನ್ನು ಕೊಲ್ಲ ಬಹುದೆಂದು ಅನೇಕ ಭಕ್ತರು ನೆನಸುತ್ತಾರೆ. ಆದರೆ ಮರಣ ಭಯದಿಂದಲೂ ಕೋಪೋದ್ರೇಕವಾದ್ದರಿಂದಲೂ ಭ್ರಾಂತನಾಗಿದ್ದು, ಧೈರ್ಯದಿಂದಲೂ ಕುಶಲತ್ವದಿಂದಲೂ ಅಲ್ಪವಾದದ್ದನ್ನು ಕಳಕೊಳ್ಳುವದರಿಂದಲೂ ಸಮೀಪವಾಗಿದ್ದ ಮರಣ ಕಂಟಕಕ್ಕೆ ತಪ್ಪಿಸಿ ಕೊಳ್ಳಲಾಗ ಬಹುದಾದ ಸಮಯಗಳನ್ನು ಸಹಾ ಮತ್ತೊಬ್ಬನ ಜೀವ ತೆಗಿಯುವಷ್ಟು ಆಪತ್ತು ಕಾಲವೆಂದೆಣಿಸದ ಹಾಗೆ ಜಾಗ್ರತೆಯಾಗಿರ ಬೇಕು. ಯಾಕಂದರೆ ಕರ್ತನ ಅಪ್ಪಣೆಯನ್ನು (ಮತ್ತಾ. ೫, ३೮—೪೫.) ಇಲ್ಲಿ ಚನ್ನಾಗಿ ಮನಸ್ಸಿಗೆ ತಂದು ಕೊಳ್ಳ ಬೇಕು.

ಪರಿಶಿ. ೨. ಇದಕ್ಕೆ ಯುದ್ಧ ಸಹಾ ಶೇರಿಯದೆ. ಆದರೆ ಎಂಥಾ ಯುದ್ಧ? ಮತ್ತೊಬ್ಬರ ದೇಶ ಅಪಹರಿಸುವಂಥಾದ್ದಲ್ಲಾ, ಸ್ವದೇಶವನ್ನು ಪರರ ಮುಂದೆ ಕಾಪಾಡಲಿಕ್ಕೆ ಮಾಡುವಂಥಾದ್ದು ಮಾತ್ರವೆ. ಪಾರಂಪರ್ಯವಾಗಿ ಬಂದ ಅರಸನಿಗೋಸ್ಕರವೂ, ಜನ್ಮ ದೇಶದ ಕ್ಷೇಮಕ್ಕೋಸ್ಕರವೂ ಮಾಡುವ ಹೋರಾಟವು ಪರಿಶುದ್ಧವಾದಂಥಾ, ದೇವರಿಗೆ ಹಿತವಾದಂಥಾ ಹೋರಾಟವಾಗಿರುತ್ತದೆ. ಈ ವಿಷಯದಲ್ಲಿ ಆಯಾ ದೇಶಸ್ಥರು ಯಾರಾದರೂ, ನನಗೇನದು, ಅಂತಾ ಹೇಳಲಾಗದು.

**೯೧.** ಶರೀರ ಜೀವಕ್ಕಿಂತಾ ಆತ್ಮಿಕ ಜೀವವು ಎಷ್ಟಕ್ಕೆ ಉನ್ನತವಾಗಿರುತ್ತದೊ, ಮತ್ತು ಶರೀರದ ತಾತ್ಕಾಲಿಕ ಮರಣಕ್ಕಿಂತ ಆತ್ಮದ ನಿತ್ಯ ಮರಣವು ಎಷ್ಟಕ್ಕೆ ಭಯಂಕರವಾಗಿರುತ್ತದೊ[೧], ಅಷ್ಟಕ್ಕೆ ಹೆಚ್ಚಾಗಿ ಆತ್ಮಿಕ ಜೀವದ ಹತ್ಯವೂ ಅಭ್ಯಂತರವೂ ಶರೀರದ ಜೀವದ ಹತ್ಯಕ್ಕಿಂತಾ ಕಠಿಣವಾದ ಶಿಕ್ಷೆಗೂ ವಿನಾಶಕ್ಕೂ ಪಾತ್ರವಾಗಿರುವದು. ಪಾಪಕ್ಕಾಗಲಿ ಅವಿಶ್ವಾಸಕ್ಕಾಗಲಿ ಯಾರಾದರೂ ಪ್ರೇರೇಪಿಸಿ, ಮನ ಕೆಡಿಸುವದರಿಂದ, ಒಬ್ಬ ಪ್ರಾಣಿಯು ಎಲ್ಲಿ ನಿತ್ಯ ನಾಶಕ್ಕೆ ಕೈವಶವಾಗುತ್ತಾನೊ, ಅಲ್ಲಿ ಆ ಕೆಲಸ ಆತ್ಮದ ಹತ್ಯವಾಗಿರುತ್ತದೆ[೨].

೧) "ಒಬ್ಬ ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿ ಕೊಂಡರೂ, ತನ್ನ ಪ್ರಾಣದ ನಷ್ಟ ಪಟ್ಟರೆ, ಅವನಿಗೆ ಪ್ರಯೋಜನವೇನು? ಇಲ್ಲವೆ ತನ್ನ ಪ್ರಾಣಕ್ಕೆಬದಲಾಗಿ ಮನುಷ್ಯನು ಕೊಡ ತಕ್ಕದ್ದೇನು?" (ಮತ್ತಾ. ೧೬, ೨೬.)

೨) "ಆದರೆ ನನ್ನನ್ನು ವಿಶ್ವಾಸಿಸುವ ಈ ಚಿಕ್ಕವರಲ್ಲಿ ಒಬ್ಬನನ್ನು ಆಟಂಕ ಪಡಿಸುವವನ್ಯಾವನೋ, ಅವನ ಕೊರಳಿಗೆ ಬೀಸುವ ಕಲ್ಲು ತೂಗ ಹಾಕಲ್ಪಟ್ಟು, ಸಮುದ್ರದ ಅಗಾಧದಲ್ಲಿ ಮುಣುಗಿಸಲ್ಪಡುವದು ಅವನಿಗೆ ವಾಸಿ." (ಮತ್ತಾ. ೧೮, ೬.)

**೯೨.** ನೆರೆಯವನ ಮೇಲೆ, ಅವನು ಸ್ನೇಹಿತನಾಗಲಿ ದ್ವೇಷಿಕನಾಗಿರಲಿ[೧], ಪರಿಚಿತಿ ಸಂಬಂಧ ಇರುವವನಾಗಿರಲಿ ಇರದವನಾಗಿರಲಿ ಹ್ಯಾಗೂ ಪ್ರೀತಿ ಇಡ ಬೇಕೆಂದು ಆರನೆ ಕಟ್ಟಳೆಯಲ್ಲಿ ವಿಧಿಸಿ ಅದೆ. ಎಂಥಾ ಪ್ರೀತಿ? ಒಂದು ಕಡೆಯಲ್ಲಿ ಅದು ನೆರೆಯವನ

ಶರೀರಜೀವಕ್ಕಾಗಲಿ೨) ಆತ್ಮಜೀವಕ್ಕಾಗಲಿ೩) ಗಂಡಾಂತರ ತರುವಂಥಾದ್ದನ್ನೆಲ್ಲಾ ತನ್ನಿಂದ ಆಗುವಷ್ಟು ಅಭ್ಯಂತರಿಸಿ ತೆಗದು ಹಾಕುತ್ತದೆ; ಮತ್ತೊಂದು ಕಡೆಯಲ್ಲಿ ಅವನ ಶರೀರದ೨) ಮತ್ತು ಆತ್ಮದ೩) ಕ್ಷೇಮಲಾಭವನ್ನು ಭದ್ರ ಮಾಡುವದಕ್ಕೂ ಅಥವಾ ಹೆಚ್ಚಿಸುವದಕ್ಕೂ ಸಹಾಯ ಮಾಡ ಬೇಕೆಂದು ತನ್ನಿಂದ ಆಗುವಷ್ಟು ಪ್ರಯತ್ನ ಮಾಡುತ್ತದೆ; — ಶಿರಿಗಿ ಎಂಥಾ ಪ್ರೀತಿ ಎಂದು ಕೇಳಿದರೆ, ಅದು ಕಷ್ಟ ಪಡುವಂಥಾ ಒಬ್ಬೊಬ್ಬನಲ್ಲಿ ತನ್ನ ಸ್ವಂತ ಮಾಂಸವನ್ನೂ೪), ನಮಗೋಸ್ಕರ ಬಡತನ ತಕ್ಕೊಂಡ ತಾನೆ ಕರ್ತನನ್ನೂ೫), ಇದರ ಹೊರ್ತು ಪ್ರತಿ ಮನುಷ್ಯನಲ್ಲಿ ಸಹಾ ಯಾತ್ರಸ್ಥನನ್ನೂ ನಿತ್ಯ ಜೀವದ ಸಹಬಾಧ್ಯಸ್ಥನನ್ನೂ ನೋಡುತ್ತದೆ.

೧) "ನಾನು ನಿಮಗೆ ಹೇಳುತ್ತೇನೆ, ನಿಮ್ಮ ಶತ್ರುಗಳನ್ನು ಪ್ರೀತಿ ಮಾಡಿರಿ; ನಿಮ್ಮನ್ನು ಶಪಿಸುವವರನ್ನು ಆಶೀರ್ವದಿಸಿರಿ. ನಿಮ್ಮನ್ನು ಹಗೆ ಮಾಡುವವರಿಗೆ ಒಳ್ಳೇದನ್ನು ಮಾಡಿರಿ. ಮತ್ತು ನಿಮ್ಮನ್ನು ನಿಂದಿಸುವವರಿಗೋಸ್ಕರವಾಗಿಯೂ, ಹಿಂಸಿಸುವವರಿಗೋಸ್ಕರವಾಗಿಯೂ, ಪ್ರಾರ್ಥನೆ ಮಾಡಿರಿ. ಹೀಗೆ ನೀವು ಪರಲೋಕದಲ್ಲಿರುವ ನಿಮ್ಮ ತಂದೆಯ ಮಕ್ಕಳಾಗಿರುವಿರಿ." ಇತ್ಯಾದಿ. (ಮತ್ತಾ. ೫, ೪೪ — ೪೭.) "ನಿನ್ನ ಶತ್ರುವಿಗೆ ಹಶಿವೆಯಾದರೆ, ಅವನಿಗೆ ಉಣ್ಣ ಕೊಡು; ದಾಹವಾದರೆ, ಅವನಿಗೆ ಕುಡಿಯ ಕೊಡು. ಯಾಕಂದರೆ ಇದನ್ನು ಮಾಡಿದರೆ, ಅವನ ತಲೆಯ ಮೇಲೆ ಉರಿಕೆಂಡಗಳನ್ನು ಕುಪ್ಪೆ ಹಾಕುವಿ." (ರೋಮಾ. ೧೨, ೨೦.)

೨) ೧ ಪೇತ್ರ. ೩, ೮. ೯. ೧ ಥೆಸ್ಸ. ೫, ೧೪. ೧೫. ಯಾಕೊ. ೨, ೧೫. ೧೬. ಇಬ್ರಿ. ೧೩, ೧೬.

೩) "ಸಹೋದರರೇ ನಿಮ್ಮಲ್ಲಿ ಒಬ್ಬನು ಸತ್ಯ ಬಿಟ್ಟು ತಪ್ಪಿ ಹೋಗಲಾಗಿ, ಮತ್ತೊಬ್ಬನು ಅವನನ್ನು ತಿರುಗಿಸಿದರೆ, ಪಾಪಿಷ್ಟನನ್ನು ಅವನ ತಪ್ಪಾದ ಮಾರ್ಗದಿಂದ ತಿರುಗಿಸಿದವನು ಅವನ ಪ್ರಾಣವನ್ನು ಮರಣದಿಂದ ರಕ್ಷಿಸಿ, ಪಾಪಗಳ ಸಮೂಹವನ್ನು ಅಡಗಿಸುವನೆಂದು ತಿಳಿದಿರಲಿ." (ಯಾಕೊ. ೫, ೧೯. ೨೦.)

೪) "ನಾನು ಆದು ಕೊಳ್ಳುವ ಉಪವಾಸವು ಇದೆ ಅಲ್ಲವೊ— . . . ಹಶಿದವನಿಗೆ ನಿನ್ನ ರೊಟ್ಟಿ ಮುರಿಯುವದೂ, ಹಿಂಸೆ ಪಡುವ ಬಡವರನ್ನು ನಿನ್ನ ಮನೆಗೆ ಕರಕೊಂಡು ಬರುವದೂ, ನೀನು ಬೆತ್ತಲೆಯಾದವನನ್ನು ನೋಡುವಾಗ, ಅವನಿಗೆ ಹೊದ್ದಿಸುವದೂ, ಸ್ವಂತ ಮಾಂಸಕ್ಕೆ ನಿನ್ನನ್ನು ಮರೆ ಮಾಡದೆ ಇರುವದೂ?" (ಯೆಶಾ. ೫೮, ೬. ೭.)

೫) "ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ನೀವು ಈ ನನ್ನ ಸಹೋದರರಲ್ಲಿ ಎಲ್ಲರಿಗೂ ಚಿಕ್ಕವನಾದ ಒಬ್ಬನಿಗೆ ಮಾಡಿದದರಿಂದ, ನನಗೆ ಮಾಡಿದಿರೆಂದು, ಹೇಳುವನು." (ಮತ್ತಾ. ೨೫, ೪೦.) (ಶ್ಲೋ. ३೪ — ३೯.)

**೯೩.** ನೆರೆಯುವನ (ಶರೀರದ ಮತ್ತು ಆತ್ಮದ) ಜೀವದ ವಿಷಯದಲ್ಲಿ ನಿಧಾನವೂ ಜಾಗ್ರತೆಯೂ ಇರುವವರಾಗಿರಲಿಕ್ಕೆ ಯಾವ ಹಂಗಿನಲ್ಲಿರುತ್ತೇವೊ, ಅದೇ ಹಂಗು ನಮ್ಮ ಸ್ವಂತ ಜೀವದ ವಿಷಯದಲ್ಲಿ ಉಂಟು. ಶರೀರದ ಸ್ವಘಾತದಲ್ಲಿ ಎಲ್ಲಾ ದೈವಹೀನತ್ವ, ನಿರ್ದಯೆ ಬಲಹೀನತ್ವಗಳು ಒಟ್ಟಿಗೆ ಒಂದಾಗುತ್ತವೆ. ಆದರೆ ಯಾರಾದರೂ ಪೋಕರಿತನದಿಂದಲಾಗಲಿ, ವಿಪರೀತ ಬುದ್ಧಿಯಿಂದಲಾಗಲಿ, ವಿಟಗಾರಿಕೆಯಿಂದಲಾಗಲಿ, ಅಮಿತಸ್ತಿಕೆಯಿಂದಲಾಗಲಿ, ಕೋಪದಿಂದಲಾಗಲಿ, ಆತುರತ್ವದಿಂದಲಾಗಲಿ, ತನ್ನ ಕ್ಷೇಮವನ್ನು ಕೆಡಿಸಿ ಬಿಡುವದು ಸಹಾ ಸ್ವಘಾತವಾಗಿರುತ್ತದೆ. ಅದೆ ಪ್ರಕಾರ ತನ್ನ ಪ್ರಾಣರಕ್ಷಣೆಯ ಯೋಜನೆ ಮಾಡದೆ, ನಿತ್ಯ ನಾಶನದ ಮಾರ್ಗದಲ್ಲಿ ನಡಿಯುವವನು ಆತ್ಮಿಕ ಜೀವದ ಸ್ವಘಾತಕಿಯಾಗಿರುತ್ತಾನೆ.

"ಕೇಡು ಮಾಡುವದಕ್ಕೆ ಯೋಚಿಸುವವನನ್ನು ಕುಯುಕ್ತಿವಂತನೆಂದು ಕರೆಯುತ್ತಾರೆ." (ಸಾಮು. ೨೪, ೮.) "ನಮ್ಮಲ್ಲಿ ಯಾವನಾದರೂ ತನಗೆ ಬದುಕುವದಿಲ್ಲ; ಮತ್ತು ಯಾವನಾದರೂ ತನಗೆ ಸಾಯುವದಿಲ್ಲ. ಹ್ಯಾಗಂದರೆ ಬದುಕಿದರೆ, ಕರ್ತನಿಗೆ ಬದುಕುತ್ತೇವೆ; ಸತ್ತರೆ, ಕರ್ತನಿಗೆ ಸಾಯುತ್ತೇವೆ. ಹಾಗಾದರೆ, ಬದುಕಿದರೂ, ಸತ್ತರೂ, ಕರ್ತನವರಾಗಿದ್ದೇವೆ." (ರೋಮಾ. ೧೪, ೭. ೮.) (೧ಕೊರಿ. ೬, ೧೯. ೨೦.)

**೯೪.** ಆದರೆ ಮರಣಭಯದಿಂದಾಗಲಿ ಮರಣಕಂಟಕದಿಂದಾಗಲಿ ನಮ್ಮ ಕರಿಯುವಿಕೆಯನ್ನು ಮನಃಪೂರ್ವಕವಾಗಿಯೂ ನಂಬಿಕೆಯಾಗಿಯೂ ಪೂರೈಸುವದರಲ್ಲಿ ಅಡ್ಡಿ ಮಾಡಿಸಿಕೊಳ್ಳದೆ[೧], ನಮ್ಮ ವಿಶ್ವಾಸದ ಅರಿಕೆಗೋಸ್ಕರವೂ, ನಮ್ಮ ಕೋರಿಕೆಗೋಸ್ಕರವೂ[೨], ಸತ್ಯನೀತಿಗಳಿಗೋಸ್ಕರವೂ, ರಾಜಾಸ್ವದೇಶಗಳಿಗೋಸ್ಕರವೂ, ಅದೆ ಪ್ರಕಾರ, ಸಹೋದರರ ಶರೀರಾತ್ಮಗಳ ಕ್ಷೇಮಕ್ಕೋಸ್ಕರವೂ, ಸ್ವಂತ ಶರೀರ ಪ್ರಾಣಗಳನ್ನೂ ಆಸ್ತಿ ರಕ್ತಗಳನ್ನೂ ಕಂಟಕದಲ್ಲಿ ತರಲಿಕ್ಕೂ, ಅವಶ್ಯವಿದ್ದರೆ ಅವುಗಳನ್ನು ಅರ್ಪಿಸಲಿಕ್ಕೂ, ಸಂತೋಷದಿಂದ ಸಿದ್ಧವಾಗಿರ ಬೇಕು; ಯಾಕಂದರೆ ಇದು ಕ್ರಿಸ್ತನ ಮಾದ್ರಿಯಿಂದಲೂ ಕಟ್ಟಳೆಯಿಂದಲೂ[೩] ನಮಗೆ ನೇಮಿಸಿ ಅದೆ.

೧) ಅಪೊ. ಕ್ರಿ. ೨೦, ೨೨—೨೪.

೨) "ಕರ್ತನಾದ ಯೇಸುವಿನ ಹೆಸರಿನ ನಿಮಿತ್ತ ಬಂಧಿಸಲ್ಪಡುವದಕ್ಕೆ ಮಾತ್ರವಲ್ಲ, ಸಾಯುವದಕ್ಕೂ ಸಿದ್ಧವಾಗಿದ್ದೇನೆ." (ಅಪೊ. ಕ್ರಿ. ೨೧, ೧೩.) (ರೋಮಾ. ೮, ೩೫. ೩೬.)

೩) "ನಾನು ನಿಮ್ಮನ್ನು ಪ್ರೀತಿ ಮಾಡಿದ ಮೇರೆಗೆ ನೀವು ಒಬ್ಬರನ್ನೊಬ್ಬರು ಪ್ರೀತಿ ಮಾಡ ಬೇಕೆಂಬುವದೇ ನನ್ನ ಆಜ್ಞೆಯಾಗಿದೆ. ಒಬ್ಬನು ತನ್ನ ಸ್ನೇಹಿತನಿಗೋಸ್ಕರ ತನ್ನ ಪ್ರಾಣವನ್ನು ಕೊಡುವದಕ್ಕಿಂತ ದೊಡ್ಡ ಪ್ರೀತಿಯು ಯಾವನಿಗೂ ಇಲ್ಲ." (ಯೋ

ಹಾ. ೧೫, ೧೨. ೧೩.) "ಅವನು ನಮಗೋಸ್ಕರ ತನ್ನ ಪ್ರಾಣವನ್ನು ಕೊಟ್ಟದ್ದರಿಂದಲೇ ಪ್ರೀತಿಯನ್ನು ತಿಳುಕೊಂಡಿದ್ದೇವೆ. ಮತ್ತು ನಾವು ಸಹೋದರರಿಗೋಸ್ಕರ ನಮ್ಮ ಪ್ರಾಣಗಳನ್ನು ಕೊಡುವ ಹಂಗಿನಲ್ಲಿದ್ದೇವೆ." (೧ ಯೋಹಾ. ೩, ೧೬.)

**೯೫.** ದೇವರು ಮನುಷ್ಯನನ್ನು ಪ್ರಕೃತಿಯ ಮೇಲೆ ಕರ್ತನಾಗಿಟ್ಟು (ಉತ್ಪ. ೧, ೨೮ ೯, ೨.) ಅವನಿಗೆ ಸಸ್ಯಾದಿಗಳನ್ನೂ ಪಶುಗಳನ್ನೂ ಆಹಾರಕ್ಕೆ ಕೊಟ್ಟಿದ್ದಾನೆ. (ಉತ್ಪ. ೧, ೨೯. ೯, ೩.) ಹಾಗಾದರೆ, ಅವನು ಅವುಗಳನ್ನು ತನ್ನ ಸೇವೆಗೆ ಬಲಾತ್ಕರಿಸಿ, ತನ್ನ ಜೀವದ ಅವಸರಕ್ಕೆ ಪ್ರಯೋಗಿಸ ಬಹುದು; ಆದರೆ ಈ ಅಧಿಕಾರವನ್ನು ದೇವರ ಹೆಸರಿನಲ್ಲಿ, ಹಾಗಾದರೆ, ದೇವರ ಚಿತ್ತಯೋಜನೆಗಳ ಪ್ರಕಾರವೂ, ದೇವರ ಮಾದರಿಯ ಪ್ರಕಾರವೂ, ನಡಿಸುವ ಹಂಗಿನಲ್ಲಿರುತ್ತಾನೆ. ಆದಕಾರಣ ಪ್ರಕೃತಿಯ ಜೀವವನ್ನು ಉನ್ಮತ್ತನಾಗಿಯೂ ಅನವಶ್ಯವಾಗಿಯೂ ಕೆಡಿಸುವದೂ, ಅಥವಾ ನಿರ್ಮೂಲ ಮಾಡುವದೂ, ಅಂದರೆ ಮರಗಳನ್ನು ಅರೂಪ ಮಾಡುವದೂ, ಪಶುಗಳನ್ನು ಪೀಡಿಸುವದೂ೧) ಇತ್ಯಾದಿ, ಎಲ್ಲಾ ಜೀವದ ನಿರ್ಮಾಣಿಕನ ಮುಂದೆ ಅಸಹ್ಯಕರವಾದ ದ್ರೋಹವಾಗಿರುತ್ತದೆ.

೧) "ನೀತಿವಂತನು ತನ್ನ ಪಶುವಿನ ಪ್ರಾಣವನ್ನು ಪರಾಮರಿಸುತ್ತಾನೆ; ಆದರೆ ದುಷ್ಟರ ಅಂತಃಕರಣಗಳು ಕ್ರೂರವಾಗಿವೆ." (ಸಾಮ. ೧೨, ೧೦.)

ಪರಿಶಿ. ನಿರ್ಮಾಣವು ನಮ್ಮ ಪಾಪದ ಶಾಪದಿಂದ ಕೂಡ ನರಳಿ, ನಮ್ಮ ಸಂಗಡ ಶಾಪದಿಂದ ರಕ್ಷಣೆಯನ್ನು ಎದುರು ನೋಡುತ್ತದೆ, ಎಂಬದನ್ನೂ (ಉತ್ಪ. ೩, ೧೭. ೧೮. ರೋಮಾ. ೮, ೧೯—೨೨. ಸಮ ನೋಡು **೨೦೩. ೨೦೪.**) ಅದೇ ಕಾರಣದಿಂದ ನಿರ್ಮಾಣದ ಶ್ರಮಗಳಿಗಾಗಿಯೂ ನಿರ್ಮಾಣದ ಆಪತ್ತಿಗಾಗಿಯೂ ನಾವು ಕರುಣೆಯ ಹೃದಯವುಳ್ಳವರಾಗಿರ ಬೇಕೆಂಬದನ್ನೂ ಮರಿಯ ಬಾರದು.

---

## ಏಳನೆ ಕಟ್ಟಳೆ.

### ವ್ಯಭಿಚಾರ ಮಾಡ ಬಾರದು.

ಹಾಗಂದರೇನು?

ದೇವರ ಮೇಲೆ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ಮಾತು ಕೆಲಸಗಳಲ್ಲಿ ಸಂಯತರಾಗಿಯೂ, ಲಜ್ಜಾಭರಿತರಾಗಿಯೂ ಇದ್ದು, ಗಂಡ ಹೆಂಡರು ಒಬ್ಬರನ್ನೊಬ್ಬರು ಪ್ರೀತಿ ಮಾಡಿ ಸನ್ಮಾನಿಸಲಿ.

**೯೬.** ಆರನೆ ಕಟ್ಟಳೆಯಲ್ಲಿ, ನೆರೆಯವರ ಜೀವವನ್ನೂ ಮೂರ್ತಿಯನ್ನೂ ಹ್ಯಾಗೊ, ಹಾಗೆಯೆ ಏಳನೆಯಲ್ಲಿ ಅವರ ವಿವಾಹವನ್ನೂ ಹೆಂಡತಿಯನ್ನೂ (ಗಂಡನನ್ನೂ) ಪರಿಶುದ್ಧವೆಂದೆಣಿಸ ಬೇಕೆಂದು ನಿಶ್ಚಯಿಸಿ ಅದೆ. ಹ್ಯಾಗೆ ಜೀವವು ಶರೀರ ಪ್ರಾಣಗಳ ಅತ್ಯಂತ ಸಂಬಂಧವಾಗಿ ಒಬ್ಬ ಮನುಷ್ಯನಲ್ಲಿಯೊ, ಹಾಗೆಯೆ ವಿವಾಹವು ಶರೀರದ ಪ್ರಕಾರವಾಗಿಯೂ ಪ್ರಾಣದ ಪ್ರಕಾರವಾಗಿಯೂ ಸಹಾ ಲಿಂಗಭೇದವುಳ್ಳ ಇಬ್ಬರ ಅತ್ಯಂತ ಸಂಬಂಧವಾಗಿರುತ್ತದೆ[೧]. ಕೊಲೆಯೂ ವ್ಯಭಿಚಾರವೂ, ದೇವರು ಸ್ಥಾಪಿಸಿದಂಥಾ ಮನುಷ್ಯ ಸ್ವಭಾವದ ಪ್ರಾಮುಖ್ಯ ಅಹಂಭಾವದಲ್ಲಿ ಬೇರುಗೊಂಡ ಸಂಬಂಧವನ್ನು[೨] ನಿರ್ಮೂಲ ಮಾಡುವದರಲ್ಲಿ ಒಂದೆ ಪ್ರಕಾರವಾಗಿರುತ್ತವೆ; ಆದಕಾರಣ ದಿವ್ಯ ನಿಯಮವು ಎರಡನ್ನೂ ಮರಣಯೋಗ್ಯ ದ್ರೋಹಗಳಾಗಿ ತಿಳಿಸುತ್ತದೆ[೩].

೧) "ಇದಕ್ಕೋಸ್ಕರ ಮನುಷ್ಯನು ತಂದೆ ತಾಯಿಗಳನ್ನು ಬಿಟ್ಟು, ತನ್ನ ಹೆಂಡತಿಯನ್ನು ಕೂಡಿ ಕೊಳ್ಳುವನು; ಅವರಿಬ್ಬರು ಒಂದೇ ಮಾಂಸವಾಗಿರುವರು." (ಮತ್ತಾ. ೧೯, ೫.) (ಉತ್ಪತ್ತಿ. ೨, ೨೪.) "ಸ್ವಂತ ಶರೀರಗಳ ಹಾಗೆಯೇ ಗಂಡಸರು ತಮ್ಮ ಹೆಂಡತಿಯರನ್ನು ಪ್ರೀತಿ ಮಾಡ ತಕ್ಕದ್ದು. ತನ್ನ ಹೆಂಡತಿಯನ್ನು ಪ್ರೀತಿ ಮಾಡುವವನು ತನ್ನನ್ನು ಪ್ರೀತಿ ಮಾಡುತ್ತಾನೆ. ಯಾಕಂದರೆ ಯಾವನಾದರೂ ತನ್ನ ಮಾಂಸವನ್ನು ಎಂದೂ ಹಗೆ ಮಾಡಿದ್ದು ಇಲ್ಲ." (ಎಫೆ. ೫, ೨೮. ೨೯.) (೧ ಕೊರಿ. ೭, ೪. ಸಾಮ. ೨೫, ೮.) (**೯೭.**)

೨) "ಆದದರಿಂದ ಇನ್ನು ಇಬ್ಬರಲ್ಲ, ಒಂದೇ ಮಾಂಸವಾಗಿದ್ದಾರೆ. ಹಾಗಾದರೆ ದೇವರು ಕೂಡಿಸಿದ್ದನ್ನು ಮನುಷ್ಯನು ಅಗಲಿಸದೆ ಇರಲಿ." (ಮತ್ತಾ. ೧೯, ೬.)

೩) ಉತ್ಪ. ೯, ೬. (ಸಮ ನೋಡು **೮೨**, ೨.) ಲೇವಿ. ೨೦, ೧೦.

**೯೭.** ವಿವಾಹವನ್ನು ದೇವರು ಚಿತ್ತಯಿಸಿ, ಒಬ್ಬರಿಗೊಬ್ಬರು ಜೀವದ ಸಮಸ್ತ ಕಾರ್ಯಗಳಲ್ಲಿ ಸಹಾಯ ಮಾಡುವ ಹಾಗೆಯೂ, ಕೈಗೂಡಿಸುವ ಹಾಗೆಯೂ[೧], ಮನುಷ್ಯ ಸಂತತಿಯನ್ನು ಪ್ರವರ್ತಿಸಿ, ಕಾಪಾಡಿಡುವ ಹಾಗೆಯೂ[೨], ದೇವರು ದಂಪತಿಗಳಿಗೆ ದಯಪಾಲಿಸಿದ[೩] ಮಕ್ಕಳನ್ನು ಬೆಳಿಸುವ ಹಾಗೆಯೂ, ನೇಮಕ ಮಾಡಿದ್ದಾನೆ.

೧) "ದೇವರಾದ ಯೆಹೋವನು, ಮನುಷ್ಯನು ಒಂಟಿಯಾಗಿರುವದು ಒಳ್ಳೇದಲ್ಲ; ಅವನಿಗೆ ತಕ್ಕ ಸಹಾಯವನ್ನು ಉಂಟು ಮಾಡುವೆನು, ಅಂದನು." (ಉತ್ಪ. ೨, ೧೮.) (ಪ್ರಸಂಗಿ. ೪, ೧೦. ೧ ಕೊರಿ. ೭, ೧೪. ೧೬.)

೨) "ದೇವರು ಅವರನ್ನು ಆಶೀರ್ವದಿಸಿದನು. ಅವರಿಗೆ ದೇವರು ಹೇಳಿದ್ದೇನಂದರೆ— ಅಭಿವೃದ್ಧಿಯಾಗಿ, ಹೆಚ್ಚಿರಿ; ಭೂಮಿಯನ್ನು ತುಂಬಿ, ವಶ ಮಾಡಿ ಕೊಳ್ಳಿರಿ." ಇತ್ಯಾದಿ. (ಉತ್ಪ. ೧, ೨೮.) "ಅವನು ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳ

ನ್ನು ಉಂಟು ಮಾಡಿ, ಮುನ್ನೇಮಿಸಿದ ಕಾಲಗಳನ್ನೂ, ಅವರ ನಿವಾಸದ ಮೇರೆಗಳನ್ನೂ ಗೊತ್ತು ಮಾಡಿ, ಅವರು ತಡವಿ, ಕರ್ತನನ್ನು ಕಂಡು ಕೊಂಡಾರೇನೋ ಎಂದು, ಅವನನ್ನು ಹುಡುಕುವ ಹಾಗೆ, ಭೂಮಿಯ ಮೇಲ್ಭಾಗದಲ್ಲೆಲ್ಲಾ ನಿವಾಸವಾಗಿರ ಮಾಡಿದ್ಧಾನೆ.” (ಅಪೊ. ಕ್ರಿ. ೧೭, ೨೬. ೨೭.)

೩) “ತಂದೆಗಳೇ, ನಿಮ್ಮ ಮಕ್ಕಳಿಗೆ ಕೋಪವನ್ನೆಬ್ಬಿಸದೆ, ಅವರನ್ನು ಕರ್ತನ ಶಿಕ್ಷೆಯಲ್ಲಿಯೂ ಉಪದೇಶದಲ್ಲಿಯೂ ಬೆಳಿಸಿರಿ.” (ಎಫೆ. ೬, ೪.)

ಪರಿಶಿ. ಈ ಪ್ರಯೋಜನವನ್ನು ಪಡಕೊಳ್ಳಲಿಕ್ಕೆ ಗಂಡನದು ಹ್ಯಾಗೊ, ಹಾಗೆಯೆ ಹೆಂಡತಿಯ ಸ್ವತಂತ್ರವುಳ್ಳ ಸಹಪ್ರಯತ್ನ ಸಹಾ ಅವಶ್ಯವಾಗಿರುತ್ತದೆ; ಆದರೆ ಉಭಯ ಕಡೆಯ ಸಹಪ್ರಯತ್ನವು ಗಂಡು ಹೆಣ್ಣುಗಳ ಸ್ವಭಾವ ಗುಣ ಸ್ಥಾನಗಳ ಭೇದದಿಂದ ವಿಂಗಡ ತರದ್ದಾಗಿದ್ದು, ಒಬ್ಬರೊಬ್ಬರ ಸಹಾಯಕರಾಗಿ ಪರಸ್ಪರ ಕೊರತೆಗಳನ್ನು ನಿವಾರಿಸುತ್ತದೆ.

**೪೮.** ಹೆಂಡತಿಯು ಗಂಡನ ಸಂಗಡ ಅದೆ ಸ್ವತಂತ್ರವುಳ್ಳವಳೆಂಬದು ವಿವಾಹದ ಸ್ವಭಾವದಿಂದಲೆ ಆಗುತ್ತದೆ, ಆದರೆ ಹೆಂಡತಿಗೆ ಈ ಘನವೂ ಸ್ಥಾನವೂ ಕ್ರೈಸ್ತ ಧರ್ಮದಿಂದ ಮಾತ್ರವೆ ಶಿರಿಗಿ ಪೂರ್ಣ ಯೋಗ್ಯವೆಂದಾಯಿತು[೧]. ಕ್ರಿಸ್ತನು ಸಭೆಗೆ ಯಾವ ತಾರತಮ್ಯ ಸಂಬಂಧದಲ್ಲಿ ಇರುತ್ತಾನೊ, ಆ ಸಂಬಂಧದ ತದ್ರೂಪವನ್ನು ಮುಂದಿಡುವದರಲ್ಲಿಯೆ ಕ್ರೈಸ್ತ ವಿವಾಹದ ಅತಿ ಶ್ರೇಷ್ಠ ಘನವೂ, ಮಾನವೂ, ಸಂಪೂರ್ಣತೆಯೂ ಉಂಟು[೨]. ಹೆಂಡತಿಯು ಗಂಡನ ಅಧಿಕಾರಿಚಿತ್ತಕ್ಕೆ ಒಳಗಾಗಿ ಇರುವದೆಂಬದು[೩], ಪಾಪದ ದೆಶೆಯಿಂದಲೆ ನಿಯಮವಾದಾಗ್ಯೂ ದಿವ್ಯ ಕ್ರಮದ ಪ್ರಕಾರವಾಗಿಯೂ, ಕ್ಷೇಮಕರವಾದ ಬುದ್ಧಿ ಶಿಕ್ಷೆಗಾಗಿಯೂ, ಈ ಲೋಕದ ಬೇರೆಲ್ಲಾ ಗುರು ಲಘು ಎಂಬದರ ಹಾಗೆಯೆ ಕ್ರೈಸ್ತ ವಿವಾಹದಲ್ಲಿ ಸಹಾ ಇನ್ನೂ ಇರ ಬೇಕು.

೧) “ಯೆಹೂದ್ಯನೂ ಇಲ್ಲ, ಗ್ರೇಕನೂ ಇಲ್ಲ, ದಾಸನೂ ಇಲ್ಲ, ಸ್ವತಂತ್ರನೂ ಇಲ್ಲ, ಗಂಡೂ ಇಲ್ಲ, ಹೆಣ್ಣೂ ಇಲ್ಲ; ಯಾಕಂದರೆ ನೀವೆಲ್ಲರು ಕ್ರಿಸ್ತ ಯೇಸುವಿನಲ್ಲಿ ಒಬ್ಬನೇ ಆಗಿದ್ಧೀರಿ.” (ಗಲಾ. ೩, ೨೮.) (೧ ಕೊರಿ. ೧೧, ೧೧. ೧೨.)

೨) “ಗಂಡನು ಹೆಂಡತಿಯ ತಲೆಯಾಗಿದ್ಧಾನೆ— ಕ್ರಿಸ್ತನು ಸಭೆಯ ತಲೆಯಾಗಿರುವ ಪ್ರಕಾರವೇ; ಮತ್ತು ಅವನೇ ಶರೀರದ ರಕ್ಷಕನು. ಆದರೆ ಸಭೆಯು ಕ್ರಿಸ್ತನಿಗೆ ಹ್ಯಾಗೋ, ಹಾಗೆಯೇ ಹೆಂಡತಿಯರು ಸ್ವಂತ ಗಂಡಂದಿರಿಗೆ ಎಲ್ಲಾದರಲ್ಲಿ ವಿಧೇಯರಾಗಿರಲಿ. ಪುರುಷರೇ, ನಿಮ್ಮ ಹೆಂಡತಿಯರನ್ನು ಪ್ರೀತಿ ಮಾಡಿರಿ—ಕ್ರಿಸ್ತನು ಸಭೆಯನ್ನು ಪ್ರೀತಿ ಮಾಡಿ,... ಅದಕ್ಕೋಸ್ಕರ ತನ್ನನ್ನು ಕೊಟ್ಟ ಹಾಗೆಯೇ.” (ಎಫೆ. ೫, ೨೩—೨೫. ೨೭.) (ಶ್ಲೋ. ೨೨—೩೩.)

೩) "ಅವನು ನಿನ್ನನ್ನು ಆಳುವನು." (ಉತ್ಪ. ೩, ೧೬.) (೧ ಪೇತ್ರ. ೩, ೬. ೧ ತಿ ಮೊ. ೨, ೧೨. ಎಫೆ. ೫, ೨೨.)

ಪರಿಶಿ. ಏಕ ಪತ್ನಿತ್ವವು ದಿವ್ಯ ಸ್ಥಾಪನೆಗೂ ವಿವಾಹದ ಪ್ರಯೋಜನಕ್ಕೂ ಅನುಸಾರ ವಾಗಿರುವದರಿಂದ, ಅದು ಮಾತ್ರವೆ ವಿವಾಹದ ನ್ಯಾಯ ಪ್ರಕಾರದ ರೀತಿಯಾಗಿರ ತಕ್ಕದ್ದು. ಬಹುಪತ್ನಿತ್ವವನ್ನು ವಿನಾಶಪೂರ್ಣವಾದ ಕಾಯಿನ ಸಂತಾನದ ಲೇಮೆಖನು ಆರಂಭಿಸಿದವನು. (ಉತ್ಪ. ೪, ೧೯.) ಬಹುಪತ್ನಿತ್ವವು ಪ್ರತ್ಯೇಕವಾಗಿ ದಿವ್ಯ ವಾಕ್ಯದಲ್ಲಿ ನಿಷೇಧಿಸಿ ಇಲ್ಲದೆ ಇದ್ದರೂ, ಕ್ರೈಸ್ತತ್ವದ ಆತ್ಮದಿಂದ ಹೊರಗಾಯಿತು.

**೯೯.** ಅ. ವಿವಾಹದ ತಾತ್ಪರ್ಯದಿಂದಲೆ ಅದು ದೇವರು ಕೂಡಿಸಿದಂಥಾ[೧] ಮರಣ ಮಾತ್ರವೆ ಬಿಡಿಸ ಬಹುದಾದಂಥಾ[೨] ಜೀವಾಂತ ಪರ್ಯಂತದ ಬಿಚ್ಚ ಕೂಡದ ಸಂಬಂಧವಾಗಿರುತ್ತದೆ, ಎಂದಾಗುತ್ತದೆ. ಸ್ವಬುದ್ಧಿಯ ಪ್ರಕಾರದ ವಿವಾಹ ವಿಸರ್ಜನೆಯಿಂದ ಗಂಡ ಹೆಂಡರಿಬ್ಬರೂ, ಹ್ಯಾಗಾದರೂ ಇಬ್ಬರಲ್ಲಿ ಒಬ್ಬರು, ವ್ಯಭಿಚಾರದ ದ್ರೋಹವನ್ನೂ ಅಪರಾಧವನ್ನೂ ಹೊತ್ತು ಕೊಳ್ಳುತ್ತಾರೆ[೩].

೧) ಮತ್ತಾ. ೧೯, ೬. (ಸಮನೋಡು **೯೬**, ೨.)

೨) ರೋಮಾ. ೭, ೨. ೩.

೩) ಮತ್ತಾ. ೫, ೩೨. ೧೯, ೯.

ಪರಿಶಿ. ಮೋಶೆಯು ವಿವಾಹ ವಿಸರ್ಜನೆಗೆ ಮನುಷ್ಯರ "ಹೃದಯದ ಕಾಠಿಣ್ಯಕ್ಕೋಸ್ಕರ" ಅನುಜ್ಞೆ ಕೊಟ್ಟಿದ್ದನು; ಆದರೆ ಆದಿಯಿಂದ ಹಾಗೆ ಇರಲಿಲ್ಲ. (ಮತ್ತಾ. ೧೯, ೮.) ಹೊಸ ಒಡಂಬಡಿಕೆಯು ಸ್ಥೂಲವಾದ ವ್ಯಭಿಚಾರ ಮಾತ್ರವೆ ವಿವಾಹ ವಿಸರ್ಜನೆಗೆ ಸಾಕಾದ ಆಧಾರವೆಂದು ಹೇಳುತ್ತದೆ. (ಮತ್ತಾ. ೫, ೩೨.) ಯಾಕಂದರೆ ವಿವಾಹವು ಅದರ ಸ್ವಭಾವದಲ್ಲಿಯೆ ಹಾಳಾಗಿ ಹೋಗುತ್ತದೆ. ಮಿಕ್ಕಾದ್ದೆಲ್ಲಾದರಲ್ಲಿ ತಪ್ಪೊಳಗೆ ಸಮಾಧಾನವೂ ಪುನರೈಕ್ಯವೂ ಸಾಧ್ಯವಾಗಿರುವ ಕಾರಣ, ಮನೆಯಿಂದಲೂ ಊಟದಿಂದಲೂ ತಾತ್ಕಾಲಿಕವಾಗಿ ವಿಂಗಡವಾಗಿರಲಿಕ್ಕೆ ಮಾತ್ರವೆ ಅಪ್ಪಣೆ ಉಂಟು. (ಕೊರಿ. ೭, ೧೧.) ಕೋಪದಿಂದ ಬಿಟ್ಟು ಹೋದರೆ ಸಹಾ (೧ ಕೊರಿ. ೭, ೧೫ನೆ ಪ್ರಕಾರ) ವಿವಾಹ ವಿಸರ್ಜನೆಗೂ ಪುನರ್ವಿವಾಹಕ್ಕೂ ಸ್ವತಂತ್ರ ಉಂಟಾಗುತ್ತದೊ ಎಂಬ ವಿಷಯದಲ್ಲಿ ಸಂಶಯ ಉಂಟು.

**೯೯.** ಇ. ವಿವಾಹವು ಜೀವನ ಕಾಲವೆಲ್ಲಾದಕ್ಕೆ ಅಮಿತ ವಿಶೇಷತ್ವವುಳ್ಳದ್ದಾಗಿರುವ ಕಾರಣ, ಅದರಲ್ಲಿ ಸೇರುವಾಗ್ಯೆ ಆಲೋಚನೆ ಜಾಗ್ರತೆ ಮಾಡಿದಷ್ಟಕ್ಕೆ ಸಾಲದು. ಸಮಯಕ್ಕೆ ಮುಂಚೆಯೆ ಮಾಡುವಂಥಾ ಮತ್ತು ನ್ಯಾಯವಲ್ಲದ ಒಂದೊಂದು ವಿವಾಹವಾಗ್ದತ್ತವೂ, ಲಘು ಮನಸ್ಸಿನಿಂದಲೂ ಆಲೋಚನೆ ಇಲ್ಲದೆಯೂ ಮಾಡಿ ಕೊಳ್ಳುವ ಒಂದೊಂದು ವಿವಾ

ಹವೂ, ವಿವಾಹದ ಪರಿಶುದ್ಧತ್ವದ ತುಚ್ಛೀಕರಣವಾಗಿರುತ್ತದೆ; ಮತ್ತು ಆ ಪ್ರಕಾರ ನಡಕೊಂಡರೆ, ವಿಶೇಷವಾಗಿ ಬಹಳ ಬೇಗ, ಮತ್ತು ಅನೇಕ ಸರ್ತಿ ಭಯಂಕರವಾಗಿ ಅದರ ಫಲ ತಿನ್ನ ಬೇಕಾಗುತ್ತದೆ. ಪುರುಷನು ಹೆಂಡತಿಯನ್ನೂ, ಸ್ತ್ರೀಯು ಗಂಡನನ್ನೂ ಆರಿಸಿ ತಕ್ಕೊಳ್ಳುವಾಗ್ಯೆ, ಆ ವಿವಾಹವು ಕರ್ತನಲ್ಲಿ ಉಂಟಾಗುತ್ತದೊ, ಕರ್ತನು ಆ ಒಡಂಬಡಿಕೆಯಲ್ಲಿ ಮೂರನೆಯವನಾಗಿರಲಿಕ್ಕೆ ಆಗುತ್ತದೊ ಎಂಬದೊಂದೇ ನೋಡಿ ಕೊಳ್ಳ ಬೇಕು. ಇದಕ್ಕೋಸ್ಕರ ಮೊದಲಾಗಿ ತನ್ನನ್ನೂ ಆರಿಸಲ್ಪಡುವಂಥಾದ್ದನ್ನೂ ಬಹು ಜಾಗ್ರತೆಯಿಂದಲೂ ಯಥಾರ್ಥ ಹೃದಯದಿಂದಲೂ ಶೋಧಿಸುವದೂ, ದೇವರು ನಡಿಸಿ, ಸಹಾಯ ಮಾಡಿ ಆಶೀರ್ವದಿಸ ಬೇಕೆಂದು ಯಥಾರ್ಥ ಮನಸ್ಸಿನಿಂದಲೂ ಹೃದಯ ಪೂರ್ವಕವಾಗಿಯೂ ಪ್ರಾರ್ಥನೆ ಮಾಡುವದೂ ಅತ್ಯವಶ್ಯ. ಆದರೆ ಯಾರು ಭಕ್ತಿ ಜೀವನದ ಸಮರ್ಥತನಗಳ ಬದಲಿಗೆ, ಪೂರ್ಣವಾಗಿ ಅಥವಾ ಮುಖ್ಯವಾಗಿ ಸೌಂದರ್ಯ ಯೌವನಗಳ ಮೇಲೆಯೂ, ದ್ರವ್ಯ ಆಸ್ತಿಗಳ ಮೇಲೆಯೂ, ಸ್ಥಾನ ಸಂಬಂಧಗಳ ಮೇಲೆಯೂ ಇತ್ಯಾದಿ ದೃಷ್ಟಿ ಇಡುತ್ತಾನೊ, ಯಾರು ದೇವಭೀತಿ, ದೇವಪ್ರೀತಿ, ದೇವಭರ್ವಸಗಳಿಂದಲ್ಲದೆ, ಇಂದ್ರಿಯ ಮೋಹದಿಂದಲೂ, ಅಶುದ್ಧವಾದ ಕುಶಲತ್ವ ವಿಚಾರಗಳಿಂದಲೂ ನಡಿಸಿ ಕೊಳ್ಳುತ್ತಾನೊ, ಅಂಥವನು ತಾನೆ ದ್ರೋಹವಾಗಿ ದೇವರ ಶಿಕ್ಷೆ ದಂಡಣೆಗಳ ನ್ಯಾಯತೀರ್ಪು ತನ್ನ ಮೇಲೆಯೂ ತನ್ನ ವಿವಾಹದ ಮೇಲೆಯೂ ಅಪೇಕ್ಷಿಸಿದ ಹಾಗಾಯಿತು. (ಕೀರ್ತ. ೧೧೯, ೧೭.)

ಪರಿಶಿ. ದೇವರಿಗೆ ಹಿತವಾಗುವ ವಿವಾಹವನ್ನು ಮಾಡಿ ಕೊಳ್ಳ ಬೇಕಾದರೆ, ತಂದೆ ತಾಯಿಗಳ ಅನುಮತಿಯೂ ಆಶೀರ್ವಾದವೂ ವಿಶೇಷವಾಗಿಯೂ ಅವಶ್ಯವಾಗಿಯೂ ಇರುವಷ್ಟು ಜೀವದ ಬೇರೆ ಯಾವ ಕಾರ್ಯದಲ್ಲಿಯೂ ಇರುವದಿಲ್ಲಾ. ಆದರೆ ತಂದೆ ತಾಯಿಗಳು ಸಹಾ ವಿನಾಕಾರಣವಾಗಿ ಆಗ ಬಿಡದೆ, ತಮಗಿದ್ದ ಸ್ವತಂತ್ರವನ್ನು ಈ ಪ್ರಕಾರ ಹಟದಿಂದಲೂ ಕಾಠಿಣ್ಯದಿಂದಲೂ ಅಪಯೋಗಿಸ ಬಾರದು. ಈಗ ಹೇಳಿದ ಸಂಗತಿಗಳ ವಿಷಯಕ್ಕೆ ಎಲಿಯೇಜರನು ಮಾಡಿದ ರೆಬೆಕ್ಕಳ ವಿವಾಹ ನಿಶ್ಚಯವು ಅಮೂಲ್ಯವಾದಂಥಾ ಮನೋಹರವಾದ ಮುಂಗುರ್ತಾಗಿರುತ್ತದೆ. (ಸಮು ನೋಡು ಉತ್ಪ. ೨೪. ೧೨. ೩೩. ೫೭. ೫೮.)

**೧೦೦.** ವಿವಾಹದ ಪರಿಶುದ್ಧ ಪ್ರಯೋಜನಗಳೂ, ಗಂಡ ಹೆಂಡರ ತಾರತಮ್ಯಸ್ಥಾನಗಳೂ, ಅವರ ಪರಸ್ಪರ ಸ್ವತಂತ್ರಗಳೂ, ಹಂಗುಗಳೂ, ಬೇರೆ ಎಲ್ಲಾ ಜೀವದ ಕಾರ್ಯಗಳಿಗಿಂತ ಹೆಚ್ಚಾಗಿ ಪಾಪದಿಂದ ಅದೈವಿಕ ಅಸ್ವಾಭಾವಿಕ ದ್ರೋಹಕರ ರೀತಿಯಾಗಿ ಅಪಯೋಗಕ್ಕೆ ಒಳಗಾಗಿ, ಸೊಟ್ಟಗಾಗಿ ಹೋಗಿಯವೆ. ಕ್ರಿಸ್ತ ವಿವಾಹದಲ್ಲಿ ಅದಕ್ಕೆ ಆದಿಯಲ್ಲಿದ್ದ ಪರಿಶುದ್ಧತ್ವವೂ ಶಾಶ್ವತತ್ವವೂ ಪುನಃಸ್ಥಾಪಿತವಾಗಿ ನವೀಕರಿಸಲ್ಪಡುವದು. ಆದಕಾರಣ ಸಭೆಯು ವಿವಾಹಬಂಧವನ್ನು ಆಶೀರ್ವದಿಸಿ ಪರಿಶುದ್ಧ ಮಾಡುತ್ತದೆ.

**೧೦೧.** ವ್ಯಭಿಚಾರವಂದರೆ, ಸೂಕ್ಷ್ಮಾರ್ಥದಲ್ಲಿ ಸ್ವಂತ ಅಥವಾ ಪರರ, ಈಗಿನ ಅಥವಾ ಮುಂದಿನ ವಿವಾಹವನ್ನು ಅದರ ಭಾವದಲ್ಲಿಯಾಗಲಿ ಸಂಕಲ್ಪದಲ್ಲಿಯಾಗಲಿ ಯಾವ ತರದಿಂದಲೂ ಕೆಡಿಸುವದೂ, ಕಳಂಕ ಮಾಡುವದೂ, ಅಥವಾ ಕಂಟಕವಶ ಮಾಡುವದೂ ಇದೆಲ್ಲಾ.

**೧೦೨.** ಏಳನೆ ಕಟ್ಟಳೆಯಲ್ಲಿ, ಈಗ ಇರುವ ವಿವಾಹವನ್ನು ಕೆಡಿಸುವಂಥಾ ಸ್ಥೂಲ ವ್ಯಭಿಚಾರವೆಂಬ ಮರಣಯೋಗ್ಯವಾದ (ಲೇವಿ. ೨೦, ೧೦.) ಅಪರಾಧ ಮಾತ್ರವಲ್ಲಾ, ಮದಿವೆ ಆಗುವಷ್ಟರೊಳಗೆ, ಮುಂದಿನ ವಿವಾಹದ ಮೇಲೆ ಭಯ ಭೀತಿ ಇಡದೆ, ದ್ರೋಹ ಮಾಡಿ, ವಿವಾಹದ ಹೊರ್ತು ನಡಿಸುವ ಸಮಸ್ತ ಕಾಮತೃಪ್ತಿ ಸಹಾ ನಿಷೇಧಿಸಿ ಅದೆ. (ಇಬ್ರಿ. ೧೩, ೪.)

**೧೦೩.** ಎಲ್ಲಾ ಪಾಪಗಳ ಹ್ಯಾಗೋ ಹಾಗೆಯೇ ಈ ಪಾಪದ ಮೂಲ ಸಹಾ ಹೃದಯದ ಕೆಟ್ಟ ಅಭಿಲಾಷೆಯೆ. ಹೃದಯದಲ್ಲಿ ಪಾಪದ ನಿಜವಾದ ಸ್ಥಳ ಉಂಟು, ಮತ್ತು ಇಲ್ಲಿಂದ ಮಲಿನವಾದ ಮಾತುಗಳಿಗೂ (ಮತ್ತಾ. ೧೨, ೩೪. ೩೫.) ನಾಚಿಕೆ ಇಲ್ಲದ ಕೆಲಸಗಳಿಗೂ (ಮತ್ತಾ. ೧೫, ೧೯. ೨೦.) ದೂರವಲ್ಲಾ. ಆದ್ದರಿಂದ ಈ ನಿಷೇಧವು ಅದೆ ಪ್ರಕಾರ ಮಾತ್ರವಲ್ಲಾ, ಅದಕ್ಕಿಂತ ಮೊದಲಾಗಿಯೂ ಮುಖ್ಯವಾಗಿಯೂ ಎಲ್ಲಾ ಅಶುದ್ಧ ಆಲೋಚನೆಗಳಿಗೂ ಅಭಿಲಾಷೆಗಳಿಗೂ[೧], ಮತ್ತು ಏನೂ ಹೆಚ್ಚು ಕಡಿಮೆ ಇಲ್ಲದೆ ಎಲ್ಲಾ ದ್ವಯಾರ್ಥದ ಕೊಳಕು ಭಂಡು ಮಾತುಗಳಿಗೂ ಕುಚೋದ್ಯಗಳಿಗೂ[೨], ಪ್ರತಿಯಾಗಿ ನಿಲ್ಲುತ್ತದೆ.

೧) "ವ್ಯಭಿಚಾರ ಮಾಡ ಬೇಡಂತ, ಹಿರಿಯರಿಗೆ ಹೇಳಲ್ಪಟ್ಟಿತೆಂದು ಕೇಳಿದ್ದೀರಿ. ಆದರೆ ನಾನು ನಿಮಗೆ ಹೇಳುತ್ತೇನೆ, ಸ್ತ್ರೀಯ ಮೇಲೆ, ಅವಳನ್ನು ಆಶಿಸುವದಕ್ಕೆ, ಕಣ್ಣಿಡುವ ಪ್ರತಿ ಮನುಷ್ಯನು ಆಗಲೇ ತನ್ನ ಹೃದಯದಲ್ಲಿ ಅವಳ ಸಂಗಡ ವ್ಯಭಿಚಾರ ಮಾಡಿದ್ದಾನೆ." (ಮತ್ತಾ. ೫, ೨೭. ೨೮.)

೨) "ನೀಚತನವೂ, ಹುಚ್ಚು ಮಾತೂ, ಕುಚೋದ್ಯವೂ, ಈ ಅಯೋಗ್ಯವಾದವುಗಳನ್ನು ಬಿಟ್ಟು, ಸ್ತೋತ್ರವನ್ನೇ ಮಾಡಿರಿ." (ಎಫೆ. ೫, ೪.)

**೧೦೪.** ಇದಾದ ಮೇಲೆ, ಹೃದಯವನ್ನೂ ಕಲ್ಪನೆಗಳನ್ನೂ ಕೆಡಿಸಿ, ಕೆಟ್ಟ ಅಭಿಲಾಷೆಯನ್ನು ಎಬ್ಬಿಸಿ, ಉದ್ರೇಕ ಮಾಡಿ ಪೋಷಿಸುವಂಥಾದ್ದೆಲ್ಲಾ, ಮುಖ್ಯವಾಗಿ ಸೋಮಾರಿತನವೂ, ಅಮಿತತ್ವವೂ (ರೋಮಾ. ೧೩, ೧೩. ೧೪. ಎಫೆ. ೫, ೧೮.) ಪೋಕರಿ ಜನರ ಸಹವಾಸವೂ (ಸಾಮ. ೧, ೧೦.) ಲಜ್ಜೆ ಇಲ್ಲದ ವಸ್ತ್ರ ಭೂಷಣವೂ; ಹಾಗೆಯೆ

ಮರ್ಯಾದೆ ಇಲ್ಲದಂಥಾ ಪುಸ್ತಕಗಳೂ ಆಟಗಳೂ ಪದಗಳೂ ಚಿತ್ರಗಳೂ ಇತ್ಯಾದಿ ಸಹಾ ನಿಷೇಧಿಸಿದ ಹಾಗಾಯಿತು.

**೧೦೫.** ಏಳನೆ ಕಟ್ಟಳೆಗೆ ಪ್ರತೀಕಾರವಾಗಿರುವ ಪಾಪಗಳು ಎಲ್ಲಾದಕ್ಕಿಂತ ಅಸಹ್ಯವಾದವುಗಳು (೧ ಕೊರಿ. ೬, ೧೩ — ೨೦.); ಯಾಕಂದರೆ ಅವುಗಳಿಂದ ಮನುಷ್ಯನು ಅತಿ ಹೀನವಾಗಿ ತನ್ನನ್ನು ತಾನೆ ವ್ಯರ್ಥ ಮಾಡಿ, ತನಗೆ ದಿವ್ಯ ಸ್ವರೂಪದಿಂದ ಇರುವ ಹುಟ್ಟು ಮಹಿಮೆಯನ್ನೂ ತನ್ನ ಮಹಾ ಕ್ರೈಸ್ತ ಪ್ರಯೋಜನವನ್ನೂ ಅತಿ ಲಜ್ಜಾಹೀನವಾಗಿ ಅವಮಾನಿಸುತ್ತಾನೆ (೧ಕೊರಿ. ೬, ೧೫. ೧೬.); ಈ ಪಾಪಗಳು ಅತಿ ಕಂಟಕವುಳ್ಳವುಗಳಾಗಿಯೂ ಭಯಂಕರವಾಗಿಯೂ ಇರುತ್ತವೆ; ಹ್ಯಾಗಂದರೆ ಅವು ಒಂದೇ ಸಾರಿ ಶರೀರ ಪ್ರಾಣಗಳನ್ನೂ, ಈ ದೃಶ್ಯವಾದ ಭೂಸಂಬಂಧದ ಕೊಳೆಯುವ ಶರೀರವನ್ನು ಮಾತ್ರವಲ್ಲಾ, ಮುಂದಿನ ಉತ್ಥಾನಶರೀರದ ಅದೃಶ್ಯ ವೊಳಿಕೆಯನ್ನು ಸಹಾ ಕೆಡಿಸಿ ಹಾಳು ಮಾಡುತ್ತವೆ. (೧ಕೊರಿ. ೬, ೧೮ — ೨೦. ಸಮ ನೋಡು ಶ್ಲೋ. ೧೩. ೧೪.) ಆದಕಾರಣ ದೇವರ ವಾಕ್ಯ ಸಹಾ ಅಂಥಾ ಪಾಪಗಳಲ್ಲಿ ಬದುಕುವವರನ್ನು ದೇವರ ಪ್ರತ್ಯೇಕವಾದ ತಪ್ಪದ ತೀರ್ಪಿನಿಂದ (ಇಬ್ರಿ. ೧೩, ೪.) ಬೆದರಿಸುತ್ತದೆ; ಮತ್ತು ಅವರಿಗೆ ದೇವರ ರಾಜ್ಯದಲ್ಲಿ ಸರ್ವಥಾ ಪಾಲು ಶಿಕ್ಕದು ಎಂದು ಸಾರುತ್ತದೆ. (೧ ಕೊರಿ. ೬, ೯. ೧೦. ಗಲಾ. ೫, ೨೦. ೨೧. ಎಫೆ. ೫, ೫. ಪ್ರಕ. ೨೧, ೮. ೨೨, ೧೫.)

**೧೦೬.** ಕಡೆಯಲ್ಲಿ, ಯಾವದರಿಂದ ಗಂಡ ಹೆಂಡರ ಪರಸ್ಪರ ಸ್ಥಾನವು ತಬ್ಬಿಬ್ಬು ಆಗುತ್ತದೊ, ಪರಸ್ಪರ ಭರ್ವಸವು ಕುಂದಿ ಹೋಗುತ್ತದೊ, ಮನಸ್ಸಿನಲ್ಲಿ ಒಬ್ಬರೊಬ್ಬರು ಪರರ ಹಾಗೆ ಆಗುತ್ತಾರೊ, ಅಲಕ್ಷ್ಯ ಅಭರ್ವಸ ಭೇದ ಏಕತ್ವ ಹಾನಿ ಅವರೊಳಗೆ ಬರುತ್ತದೊ, ಅದೆಲ್ಲಾ ಸಹಾ ಈ ಕಟ್ಟಳೆಯಿಂದ ನಿಷೇಧಿಸಿ ಅದೆ. ಯಾಕಂದರೆ ಇಂಥಾದರಿಂದ ವಿವಾಹದ ಪರಿಶುದ್ಧ ಪ್ರಯೋಜನವು ಅದೆ ಪ್ರಕಾರ ಕೆಟ್ಟು ನಿರರ್ಥಕವಾಗಿ ಹೋಗುತ್ತದೆ.

**೧೦೭.** ಏಳನೆ ಕಟ್ಟಳೆಯು ಎಲ್ಲಾ ಮನುಷ್ಯರಿಗೆ "ಹೃದಯದ ಶುದ್ಧತ್ವವನ್ನೂ[1], ಮಾತುಗಳಲ್ಲಿ ಲಜ್ಜೆಯನ್ನೂ ಸುಶಿಕ್ಷೆಯನ್ನೂ, ಕೆಲಸಗಳಲ್ಲಿ ನಿರ್ಮಲತ್ವವನ್ನೂ ಮರ್ಯಾದೆಯನ್ನೂ," ಆದರೆ ಮುಖ್ಯವಾಗಿ ಮದಿವೆಯಾದವರಿಗೆ ತಮ್ಮೊಳಗೆ ಪ್ರೀತಿಯಲ್ಲಿಯೂ ಏಕ ಮನಸ್ಸಿನಲ್ಲಿಯೂ ಬದುಕ ಬೇಕೆಂಬದನ್ನೂ, ಪರಸ್ಪರ ತಾಳ್ಮೆಯನ್ನೂ ಸೈರಣೆಯನ್ನೂ ತೋರಿಸ ಬೇಕೆಂಬದನ್ನೂ, ಜೀವದ ಸಂಬಂಧವಾದ ಶರೀರಾತ್ಮಗಳ ಸಕಲ ವಿಷಯಗಳಲ್ಲಿ ಪರಸ್ಪರ ಅಭಿವೃದ್ಧಿ ಪಡಿಸ ಬೇಕೆಂಬದನ್ನೂ[2], ವಿಧಿಸುತ್ತದೆ.

೧) "ಶುದ್ಧ ಹೃದಯವುಳ್ಳವರು ಭಾಗ್ಯವಂತರು; ಯಾಕಂದರೆ ಅವರು ದೇವರನ್ನು ನೋಡುವರು." (ಮತ್ತಾ. ೫, ೮.)

೨) ೧ಪೇತ್ರ. ೩, ೧—೭. (ಕೊಲ್ಲೊ. ೩. ೪. ೭.) ೧ತಿಮೊ. ೨, ೯—೧೫. ಎಫೆ. ೫, ೨೨—೨೬.

**೧೦೮.** ಪರಿಶುದ್ಧ ದೇವರು ಸರ್ವತ್ರನಾಗಿರುತ್ತಾನೆಂಬದನ್ನು ಯಾವಾಗಲೂ ಚುರುಕಾದ ಅನುಭವದಲ್ಲಿ ಇಟ್ಟು ಕೊಳ್ಳುವದರಿಂದಲೂ[೧], ಕೃಪಾಕರಣಗಳನ್ನೂ ಮುಖ್ಯವಾಗಿ ಪ್ರಾರ್ಥನೆಯನ್ನೂ ಜಾಗ್ರತೆಯಾಗಿ ಪ್ರಯೋಗಿಸುವದರಿಂದಲೂ[೨], ದೇವರ ಸಹಾಯದ ಭರ್ವಸದಲ್ಲಿ ಬೇರೂರಿ[೩], ಪಾಪಕ್ಕೆ ಎಡೆ ಆದೀತೆಂಬ ಭಯ ಇರುವಲ್ಲಿ ಅನುಜ್ಞೆ ಇರುವಂಥಾದ್ದನ್ನು ಸಹಾ ಸ್ವೀಕರಿಸದಂಥಾ[೪] ಖಂಡಿತವಾದ ಚಿತ್ತದಿಂದಲೂ ಪೌರುಷವುಳ್ಳ ಸ್ಥಿರತ್ವದಿಂದಲೂ ಕ್ರಿಸ್ತನು ಮನೋಭಾವದ ಶುದ್ಧತ್ವವನ್ನೂ ಹೃದಯದ ನಿರ್ಮಲತ್ವವನ್ನೂ ಪಡ ಕೊಂಡು ಕಾಪಾಡ ತಕ್ಕದ್ದು.

೧) "ಅವನು (ದೇವರು) ಹೃದಯದ ಮರ್ಮಗಳನ್ನು ತಿಳಿದಿದ್ದಾನೆ." (ಕೀರ್ತ. ೪೪, ೨೧.)

೨) "ಶುದ್ಧ ಹೃದಯವನ್ನು ನನ್ನಲ್ಲಿ ಸೃಷ್ಟಿಸು, ದೇವರೇ; ದೃಢವಾದ ಆತ್ಮವನ್ನು ನನ್ನ ಅಂತರಂಗದಲ್ಲಿ ನೂತನ ಪಡಿಸು." (ಕೀರ್ತ. ೫೧, ೧೦.)

೩) "ಎಚ್ಚರಿಕೆಯಾಗಿರ್ರಿ; ವಿಶ್ವಾಸದಲ್ಲಿ ನಿಲ್ಲಿರಿ; ಪೌರುಷವಾಗಿರ್ರಿ." (೧ ಕೊರಿ. ೧೬, ೧೩.) "ನನ್ನ ಕಣ್ಣುಗಳಿಗೆ ಒಡಂಬಡಿಕೆ ಮಾಡಿದೆನು; ಕನ್ನಿಕೆಯ ಮೇಲೆ ಲಕ್ಷ್ಯ ಇಡುವದು ಹ್ಯಾಗೆ?" (ಯೋಬ. ೩೧, ೧.) "ಆತ್ಮದಲ್ಲಿ ನಡೆದು ಕೊಳ್ಳಿರಿ, ಆಗ ಮಾಂಸದ ಆಶೆಯನ್ನು ತೀರಿಸದೆ ಇರುವಿರಿ." (ಗಲಾ. ೫, ೧೬.)

೪) "ಇದಲ್ಲದೆ ನಿನ್ನ ಬಲಗಣ್ಣು ನಿನ್ನನ್ನು ಆಟಂಕಿಸಿದರೆ, ಅದನ್ನು ಕಿತ್ತು, ನಿನ್ನ ಬಳಿಯಿಂದ ಬಿಸಾಡು. ಯಾಕಂದರೆ ನಿನ್ನ ಅಂಗಗಳಲ್ಲಿ ಒಂದು ನಾಶವಾಗಿ ನಿನ್ನ ಶರೀರವೆಲ್ಲಾ ನರಕದಲ್ಲಿ ಹಾಕಲ್ಪಡದೆ ಇರುವದು ನಿನಗೆ ಪ್ರಯೋಜನವಾಗಿದೆ. ಮತ್ತು ನಿನ್ನ ಬಲಗೈ ನಿನ್ನನ್ನು ಆಟಂಕಿಸಿದರೆ," ಇತ್ಯಾದಿ. (ಮತ್ತಾ. ೫, ೨೯. ೩೦.)



## ಎಂಟನೆ ಕಟ್ಟಳೆ.

### ಕದ್ದುಕೊಳ್ಳಬಾರದು.

ಹಾಗಂದರೇನು?

ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ನಮ್ಮ ನೆರೆಯವನ ಹೊನ್ನು ಹಣಗಳನ್ನು ಕಸಕೊಳ್ಳದೆಯೂ ವ್ಯಾಪಾರದಲ್ಲಿ ಮೋಸದಿಂದ ಅಪಹರಿಸದೆಯೂ, ಅವನ ಸುಖಕ್ಷೇಮಗಳಿಗೆ ನೋಡಿ, ಅವನಿಗೆ ಸಹಾಯ ಮಾಡ ಬೇಕು.

**೧೦೯.** ಎಂಟನೆ ಕಟ್ಟಳೆಯಿಂದ ನೆರೆಯವನಿಗೆ ಅವನ ಆಸ್ತಿಯು, ಅಂದರೆ ದೇವರು ಅವನಿಗೆ ಲೌಕಿಕ ವಸ್ತುಗಳ ಮೇಲೆ ಕೊಟ್ಟ ಸ್ವತಂತ್ರವು ಭದ್ರವಾಗುತ್ತದೆ.

**೧೧೦.** "ಭೂಮಿಯು ಕರ್ತನ ಕೃಪೆಯಿಂದ ತುಂಬಿಯದೆ" (ಕೀರ್ತ. ೩೩, ೫.) ಮತ್ತು ಮನುಷ್ಯನು ಎಲ್ಲಾ ಭೂಸಂಬಂಧವಾದ ವಸ್ತುಗಳಿಗೆ ಬಾಧ್ಯಸ್ಥನಾಗಿಯೂ ಸ್ವತಂತ್ರಿಯಾಗಿಯೂ ಸ್ಥಾಪಿಸಲ್ಪಟ್ಟಿರುತ್ತಾನೆ. ಅವನು ಕರ್ತನ ಎಲ್ಲಾ ಕೃಪೆ ಸ್ನೇಹಗಳನ್ನು ಅನುಭವಿಸುತ್ತಾನೆ ಹ್ಯಾಗೊ, ಹಾಗೆಯೆ ಅವನು ಭೂಸಂಬಂಧವಾದ ವಸ್ತುಗಳನ್ನು ಸಹಾ ತುಚ್ಛೀಕರಿಸಿ ಅಲ್ಪವೆಂದೆಣಿಸದೆ (೧ ಕೊರಿ. ೧೦, ೨೬.) ಎಲ್ಲಾ ಒಳ್ಳೇ ವರಗಳ ದಾತನ ಕಡೆಗೆ (ಯಾಕೊ. ೧, ೧೭.) ಸಂತೋಷದಲ್ಲಿ ಕೃತಜ್ಞತೆಯಿಂದ ಅವುಗಳನ್ನು ಸ್ವಂತ ಜೀವದ ಅವಸರಕ್ಕೂ ಪೋಷಣೆಗೂ, ನೆರೆಯವನ ಸಹಾಯಕ್ಕೂ ಅಭಿವೃದ್ಧಿಗೂ, ದೇವರ ಸ್ತೋತ್ರಕ್ಕೂ ಮಹಿಮೆಗೂ ಪ್ರಯೋಗಿಸ ತಕ್ಕದ್ದು. ಆದರೆ ಅವುಗಳನ್ನು ತಕ್ಕ ಪ್ರಕಾರಕ್ಕಿಂತ ಹೆಚ್ಚೆಂದು ಎಣಿಸುವದರಿಂದ, ಹೃದಯವನ್ನು ಅವುಗಳಲ್ಲಿ ನಿಮಗ್ನ ಸಹಾ ಮಾಡದೆ (ಯೋಬ್. ೩೧, ೨೪.) ತನಗೆ ಭೋಗಾರ್ಥವಾಗಿಯೂ ಆಳಿಕೆಗಾಗಿಯೂ ಕೊಟ್ಟು, ಒಪ್ಪಿಸಿ ಇರುವ ದೇವರ ಆಸ್ತಿ ಎಂದೆಣಿಸಿ, ಅದೇ ಕಾರಣದಿಂದ ಮುಂದೆ ಲೆಖ್ಖ ಒಪ್ಪಿಸ ಬೇಕೆಂಬದನ್ನು ನೆನಪಿನಲ್ಲಿ ಇಟ್ಟು ಕೊಂಡು, ಮುಖ್ಯವಾಗಿ ಪ್ರಾಣಕ್ಕೆ ಶಿಕ್ಕ ತಕ್ಕ ಪರಲೋಕವಸ್ತುಗಳು ಅಮಿತ ಮಹಿಮೆಯುಳ್ಳವುಗಳೂ ಅಮೂಲ್ಯವಾದವುಗಳೂ ಆಗಿರುತ್ತವೆ ಎಂಬದನ್ನು ಮರಿಯಲಾಗದು[೧].

೧) "ಭೂಮಿಯ ಮೇಲೆ ನಿಮಗೆ ದ್ರವ್ಯಗಳನ್ನು ಇಟ್ಟು ಕೊಳ್ಳ ಬೇಡಿರಿ; ಅಲ್ಲಿ ನುಸಿಯೂ ಕಿಲುಬೂ ಕೆಡಿಸುತ್ತವೆ. ಅಲ್ಲಿ ಕಳ್ಳರು ಕನ್ನ ಕೊರೆದು, ಕದಿಯುತ್ತಾರೆ. ಆದರೆ ಪರಲೋಕದಲ್ಲಿ ನಿಮಗೆ ದ್ರವ್ಯಗಳನ್ನು ಇಟ್ಟು ಕೊಳ್ಳಿರಿ; ಅಲ್ಲಿ ನುಸಿಯಾದರೂ ಕಿಲುಬಾದರೂ ಕೆಡಿಸದು; ಅಲ್ಲಿ ಕಳ್ಳರು ಕನ್ನ ಕೊರೆದು, ಕದಿಯರು. ಯಾಕಂದರೆ ನಿಮ್ಮ ದ್ರವ್ಯ

ವು ಎಲ್ಲಿಯೋ, ಅಲ್ಲಿ ನಿಮ್ಮ ಹೃದಯವೂ ಇರುವದು." (ಮತ್ತಾ. ೬, ೧೯—೨೧.) "ನೀವು ಮೊದಲು ದೇವರ ರಾಜ್ಯವನ್ನೂ, ಅವನ ನೀತಿಯನ್ನೂ ಹುಡುಕಿರಿ. ಆಗ ಇವುಗಳೆಲ್ಲಾ ನಿಮಗೆ ಕೂಡ ಕೊಡಲ್ಪಡುವವು." (ಮತ್ತಾ. ೬, ೩೩.) "ಒಬ್ಬ ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿ ಕೊಂಡರೂ, ತನ್ನ ಪ್ರಾಣದ ನಷ್ಟ ಪಟ್ಟರೆ, ಅವನಿಗೆ ಪ್ರಯೋಜನವೇನು?" ಇತ್ಯಾದಿ. (ಮತ್ತಾ. ೧೬, ೨೬.) (ಸಮ ನೋಡು ೯೧, ೨.)

**೧೧೧.** ದೇವರು ತನ್ನ ಜ್ಞಾನದ ಪರಿಮಾಣದ ಪ್ರಕಾರ ಋಸಂಬಂಧವಾದ ವಸ್ತುಗಳನ್ನು ಹೆಚ್ಚು ಕಡಿಮೆಯಾಗಿ ಹಂಚಿದ್ದಾನೆ. ಅಂದರೆ ಒಬ್ಬನಿಗೆ ಐಶ್ವರ್ಯವನ್ನೂ ಸಮೃದ್ಧಿಯನ್ನೂ, ಮತ್ತೊಬ್ಬನಿಗೆ ಬಡತನವನ್ನೂ ದಾರಿದ್ರವನ್ನೂ ಕೊಟ್ಟಿದ್ದಾನೆ. ಆತನು ತನ್ನದರಿಂದ ಕೊಡುತ್ತಾನೆ, ಮತ್ತು ಆತನು ಕೊಡುತ್ತಾನೆಂಬದರಿಂದ, ಅದು ನ್ಯಾಯವೂ ಸಾಲವೂ ಅಲ್ಲಾ, ಕೃಪೆಯೂ ಕರುಣೆಯೂ ಆಗಿರುತ್ತದೆ[೧]. ಆದಕಾರಣ ಐಶ್ವರ್ಯವಂತನು ಸಮೃದ್ಧಿಯನ್ನೂ ಬಡವನು ಅಲ್ಪವಾದದ್ದನ್ನೂ ಯೋಗ್ಯತೆ ಇಲ್ಲದೆ ಶಿಕ್ಕಿದಂಥಾ ದಾನವೆಂದು ಕೃತಜ್ಞತೆಯಲ್ಲಿ ತಕ್ಕೊಳ್ಳ ಬೇಕು, ಮತ್ತು ಎಲ್ಲರೂ ಯಾರ್ಯಾರಿಗೆ ಏನೇನು ಒಳ್ಳೇದೆಂಬದನ್ನೂ ಒಬ್ಬನೆ ಚನ್ನಾಗಿ ತಿಳಿದಿರುವ ದೇವರ ಜ್ಞಾನವನ್ನು ಸಂತೋಷದಿಂದ ಕೊಂಡಾಡ ತಕ್ಕದ್ದು.

೧) "ನನ್ನವುಗಳಿಂದ ನಾನು ಮನಸ್ಸು ಬಂದ ಹಾಗೆ ಮಾಡ ಬಾರದೋ? ನಾನು ಒಳ್ಳೆಯವನಾದದರಿಂದ, ನಿನ್ನ ಕಣ್ಣು ಕೆಟ್ಟದ್ದಾಗಿದೆಯೋ?" (ಮತ್ತಾ. ೨೦, ೧೫.)

**೧೧೨.** ಋಸಂಬಂಧವಾದ ವಸ್ತುಗಳಲ್ಲಿ ಸಂಪೂರ್ಣವಾದ ಸಮಾನತ್ವವೂ ಅನ್ಯೋನ್ಯತ್ವವೂ ಬಹು ಮಹಿಮೆಯುಳ್ಳ ಛಂದವಾದ ಸಂಗತಿಯಾಗಿರುವದು ಸರಿ; ಯಾಕಂದರೆ "ನಿನ್ನ ನೆರೆಯವನನ್ನು ನಿನ್ನ ಹಾಗೆಯೆ ಪ್ರೀತಿ ಮಾಡ ಬೇಕು" ಎಂಬ ಕಟ್ಟಳೆಯು ಅದರಿಂದ ಸಂಪೂರ್ಣವಾಗಿಯೂ ಸರ್ವಸಾಧಾರಣವಾಗಿಯೂ ಪ್ರತ್ಯಕ್ಷವಾದ ಹಾಗಾದೀತು. ಆದರೆ ಮೊದಲಿನದು ಫಲವೂ, ಪ್ರೀತಿಯು ಮೂಲವೂ ಆಗಿರುತ್ತದೆಂಬದನ್ನು ಮರಿಯ ಬಾರದು. ಮನುಷ್ಯಸಭೆಯ ಎಲ್ಲಾ ಅಂಗಗಳನ್ನು ಸಂಪೂರ್ಣವಾದ ಪ್ರೀತಿಯು ವ್ಯಾಪಿಸುವಲ್ಲಿ ಮಾತ್ರವೆ ಆಸ್ತಿಯ ಅನ್ಯೋನ್ಯತ್ವವು ಸತ್ಯವಾಗಿಯೂ ಆಶೀರ್ವಾದವುಳ್ಳದ್ದಾಗಿಯೂ ಇರುವದು ಸಾಧ್ಯ. ಆದರೆ, ಇನ್ನೂ ಸ್ವಾರ್ಥವೂ, ಕಾಮಚಾಂತಿಯೂ, ಆಲಸ್ಯವೂ, ಜಂಬವೂ, ಅನೀತಿಯೂ ಇತ್ಯಾದಿಗಳು ಆಳಿ ಕೊಂಡಿರುವಂಥಾ ಈ ಲೋಕದಲ್ಲಿ ಸಮವಾದ ಆಸ್ತಿಯ ಅನ್ಯೋನ್ಯತ್ವವು ಬಹುಕಾಲಕ್ಕೆ ಅಸಾಧ್ಯವಾಗಿರುತ್ತದೆ.

ಪರಿಶಿ. ಯೆರೂಸಲೇಮಿನಲ್ಲಿದ್ದ ಮೊದಲನೆ ಕ್ರೈಸ್ತ ಸಭೆಯ ಆಸ್ತಿಯ ಅನ್ಯೋನ್ಯತ್ವವು ಸಮವಾದ ಮೂಲದಿಂದ ಹುಟ್ಟಿತ್ತು. (ಅ. ಕ್ರಿ. ೪, ೩೨. ಇತ್ಯಾದಿ.) ಅದನ್ನು ಆಲೋಚಿಸಿದರೆ, ಅದು ಮುಂದಿನ ಸಂಪೂರ್ಣತೆಯ ಮುಂಗುರ್ತಾಗಿತ್ತು. ಆದರೂ ಅಲ್ಲಿ ಸಹಾ ಅದು ನಿರಾತಂಕವಾಗಿರಲಿಲ್ಲ. (ಅ. ಕ್ರಿ. ೫, ೧. ಇತ್ಯಾದಿ.) ಅದರ ಹೊರ್ತು ಸಭೆಯು ದೊಡ್ಡದಾದ ಮೇಲೆ, ಅದನ್ನು ಬಿಡ ಬೇಕಾಯಿತು. ಆದರೆ ಸದ್ಯಕ್ಕೆ ಇರುವ ಕ್ರಮವನ್ನು ಬಲಾತ್ಕಾರವಾಗಿ ಕವಚಿ ಹಾಕುವದರಿಂದ ಆಸ್ತಿಯ ಅನ್ಯೋನ್ಯತ್ವವನ್ನು ಉಂಟು ಮಾಡುವದಾದರೆ, ಅಂಥಾದ್ದು ಮಾನುಷ ಮತ್ತು ದೈವಿಕ ನ್ಯಾಯಕ್ಕೆ ದ್ರೋಹವಾಗಿಯೂ, ನರಕದ ಫಲಗಳನ್ನು ಮಾತ್ರವೆ ಫಲಿಸುವಂಥಾ ನರಕದ ಮರವಾಗಿಯೂ ಇರುತ್ತದೆ. ಅಂಥಾದ್ದು ಎಷ್ಟು ಸತ್ಯವನ್ನು ಪರಿಶುದ್ಧವಾದದರಿಂದ ಕದ್ದು ಕೊಂಡು ಸೈತಾನ ರೀತಿಯಾಗಿ ಬದಲಾಯಿಸುತ್ತದೊ, ಅಷ್ಟಕ್ಕೆ ಕಂಟಕವುಳ್ಳ ಸುಳ್ಳು ಆಗಿರುತ್ತದೆ.

**೧೧೩.** ಋಸಂಬಂಧವಾದ ವಸ್ತುಗಳು ಒಬ್ಬರಿಗೆ ಹೆಚ್ಚು ಒಬ್ಬರಿಗೆ ಕಡಿಮೆ ಇರುವದರಿಂದ, ಮನುಷ್ಯ ಸಭೆಯು ಪರಸ್ಪರ ಸಂಬಂಧವುಳ್ಳ ಕ್ರಮದಲ್ಲಿ ನಡಿಯುತ್ತದೆ. ಹೀಗಿರಲಾಗಿ ಪ್ರೀತಿಯಿಂದಲ್ಲವಾದರೂ ಅನುಪತ್ಯದಿಂದಲೂ, ಅವಸರದಿಂದಲೂ, ಲಾಭದ ದೃಷ್ಟಿಯಿಂದಲೂ ಪ್ರೇರೇಪಿಸಲ್ಪಟ್ಟು, ಒಬ್ಬನು ಮತ್ತೊಬ್ಬನಿಗೆ ಸೇವೆ ಮಾಡುತ್ತಾನೆ೧). ಅದರ ಹೊರ್ತು, ದೇವರು ಮನುಷ್ಯರನ್ನು ಸಾಕಿ ನಡಿಸುವದಕ್ಕೆ ಅದೊಂದು ಕರಣವಾಗಿಯೂ, ದೊಡ್ಡವರಿಗೂ ಬಡವರಿಗೂ ವರಕಲ್ಲಾಗಿಯೂ ಇರುತ್ತದೆ; ಯಾಕಂದರೆ ದೊಡ್ಡಸ್ತಿಕೆಗೂ ಬಡತನಕ್ಕೂ ಒಂದೊಂದಕ್ಕೆ ಪ್ರತ್ಯೇಕವಾದ ಶೋಧನೆಗಳೂ, ಕಂಟಕಗಳೂ ೨), ಕಷ್ಟಗಳೂ, ಹಂಗುಗಳೂ, ವಿಶೇಷತ್ವಗಳೂ ಉಂಟು. — ಮತ್ತು ಕಡೆಯಲ್ಲಿ, ಯಾರು ಕೊಡಲಿಕ್ಕೂ ತಕ್ಕೊಳ್ಳಲಿಕ್ಕೂ ಶಕ್ತನೊ, ಯಾರ ಆಶೀರ್ವಾದಕ್ಕೆ ಎಲ್ಲಾ ಒಳಗಾಗಿರುತ್ತದೊ, ಆ ಸಮಸ್ತ ಒಳ್ಳೇ ದಾನಗಳ ದಾತನ ಕಡೆಗೆ ದೃಷ್ಟಿ ಇಡಲಿಕ್ಕೆ ಕಾರಣವಾಗುತ್ತದೆ೩).

೧) "ಐಶ್ವರ್ಯವಂತನೂ ಬಡವನೂ ಸಂಧಿಸಿ ಕೊಳ್ಳುತ್ತಾರೆ; ಅವರೆಲ್ಲರನ್ನು ನಿರ್ಮಿಸಿದವನು ಯೆಹೋವನೇ." (ಸಾಮ. ೨೨, ೨.)

೨) "ಬಡತನವನ್ನಾದರೂ ಐಶ್ವರ್ಯವನ್ನಾದರೂ ನನಗೆ ಕೊಡ ಬೇಡ; ಮಿತಿಯಾದ ಆಹಾರವನ್ನು ನನಗೆ ಉಣ್ಣಿಸು. ಇಲ್ಲದಿದ್ದರೆ, ನಾನು ತೃಪ್ತಿಯಾಗಿದ್ದು, ಅಲ್ಲಗಳದು, ಯೆಹೋವನು ಯಾರೆಂದು ಹೇಳೇನು; ಇಲ್ಲವೆ ಬಡವನಾಗಿ ಕಳ್ಳತನ ಮಾಡಿ, ನನ್ನ ದೇವರ ಹೆಸರನ್ನು ಅಪವಿತ್ರ ಮಾಡೇನು." (ಸಾಮ. ೩೦, ೮. ೯.) (ಮತ್ತಾ. ೧೩, ೨೨.)

೩) "ಯೆಹೋವನು ಮನೆಯನ್ನು ಕಟ್ಟದೆ ಇದ್ದರೆ, ಅದನ್ನು ಕಟ್ಟುವವರು ವ್ಯರ್ಥವಾಗಿ ಕಷ್ಟ ಪಡುತ್ತಾರೆ; ಯೆಹೋವನು ಪಟ್ಟಣವನ್ನು ಕಾಪಾಡದೆ ಇದ್ದರೆ, ಕಾಪಾಡುವವನು ವ್ಯರ್ಥ

ವಾಗಿ ಎಚ್ಚರವಾಗಿದ್ದಾನೆ." (ಕೀರ್ತ. ೧೨೭, ೧.) "ಯೆಹೋವನೇ! ಇಕ್ಕಟ್ಟಿನಲ್ಲಿ ನಿನ್ನನ್ನು ಹುಡುಕಿದರು; ನಿನ್ನ ಶಿಕ್ಷೆ ಅವರಿಗಿರುವಾಗ, ಪ್ರಾರ್ಥನೆ ಹೊಯಿದರು." (ಯೆಶಾ. ೨೬, ೧೬.)

**೧೧೪.** ಎಂಟನೆ ಕಟ್ಟಳೆಯು, ಪ್ರತ್ಯಕ್ಷವಾದ ಸ್ಥೂಲ ಕಳ್ಳತನವನ್ನು ಮಾತ್ರವೆ ಅಲ್ಲ, ನೆರೆಯವನಿಗೆ ಇರುವಂಥಾದ್ದು ಅವನಿಗಿರಲಿ ಎಂದು ನೆನಸದೆ, ಅಥವಾ ಅವನಿಗೆ ಶಿಕ್ಕ ತಕ್ಕದ್ದನ್ನು ತೆಗದು ಅಥವಾ ಶಿಕ್ಕಗೊಡಿಸದೆ ಹೃದಯದಲ್ಲಿಯೂ ಕ್ರಿಯೆಯಲ್ಲಿಯೂ ಮಾಡುವ ಸೂಕ್ಷ್ಮವಾದ ಕಳ್ಳತನವನ್ನು ಸಹಾ ನಿಷೇಧಿಸುತ್ತದೆ.

ಪರಿಶಿ. ಸೂಕ್ಷ್ಮವಾದ ಕಳ್ಳತನವು ಸಹಸ್ರರೂಪವಾಗಿ, ಅಂದರೆ, ಕುಶಲತ್ವ, ಪ್ರಯತ್ನ, ನ್ಯಾಯ ಇತ್ಯಾದಿಗಳಾಗಿ ಕಾಣ ಬರುತ್ತದೆ. ತಾವೆ ಫರಿಸಾಯರ ಸದ್ಗುಣ ಭ್ರಾಂತಿಯಲ್ಲಿದ್ದಾಗ್ಯೂ (ಲೂಕ. ೧೮, ೧೧.) ಸ್ಥೂಲ ಕಳ್ಳತನವನ್ನು ತುಚ್ಛೀಕರಿಸುತ್ತಾರೆ ಸರಿ; ಆದರೆ ಇವರನ್ನು ತುಚ್ಛೀಕರಿಸುವಂಥಾ, ಇವರ ಸಂಗಡ ದೇವರ ಮುಂದೆ ಅದೆ ನ್ಯಾಯ ತೀರ್ಪಿಗೆ ಒಳಗಾಗಿರುವಂಥಾ ಸೂಕ್ಷ್ಮ ಕಳ್ಳರಿಂದ ಲೋಕವು ತುಂಬಿಯದೆ. ಸೂಕ್ಷ್ಮ ಕಳ್ಳತನವು ಸಾಧಾರಣವಾಗಿಯೂ ಪ್ರಾಮುಖ್ಯವಾಗಿಯೂ ಕಂಡು ಬರುವದು ಹ್ಯಾಗಂದರೆ: ವ್ಯವಹಾರ ವ್ಯಾಪಾರಗಳಲ್ಲಿ ಮತ್ತೊಬ್ಬರ ಮೇಲೆ ಲಾಭ ಹೊಂದುವದರಿಂದ (೧ ಥೆಸ್ಸ. ೪, ೬. ಸಾಮ. ೧೧, ೧.), ಒಪ್ಪಿಸಿದ ವಸ್ತು, ಉದ್ಯೋಗ ಕೆಲಸ ಇತ್ಯಾದಿಗಳಲ್ಲಿ ವಂಚಿಸುವದರಿಂದ, ಅಥವಾ ಕೆಡಿಸುವದರಿಂದ, ಆಲಸ್ಯ ಮಾಡುವದರಿಂದ (ತೀತ. ೨, ೧೦. ೧೦. ರೋಮಾ. ೧೨, ೭. ೮.), ಶಿಕ್ಕಿದ ವಸ್ತುಗಳನ್ನು ತನ್ನದಾಗ ಮಾಡಿ ಕೊಳ್ಳುವದರಿಂದ, ಚಾಕ್ರಿ ಮಾಡಿಸಿ ಕೊಂಡು ಕೂಲಿ ಕೊಡದೆ, ಅಥವಾ ಪೂರ್ಣ ಕೊಡದೆ ಇರುವದರಿಂದ (ಯೆರೆ. ೨೨, ೩೩. ಯಾಕೊ. ೫, ೪.), ಲಘು ಮನಸ್ಸಿನಲ್ಲಿ ಸಾಲ ಮಾಡುವದರಿಂದ (ಕೀರ್ತ. ೩೭, ೨೧.), ವಿಪರೀತ ಬಡ್ಡಿ ತಕ್ಕೊಳ್ಳುವದರಿಂದ (ಹೊರ. ೨೨, ೨೫.), ಬಹಳವಾಗಿ ವ್ಯವಹಾರ ಪ್ರಿಯನಾಗುವದರಿಂದ (ಯಾಕೊ. ೨, ೬. ೧ ಕೊರಿ. ೬, ೫—೭.), ಲಂಚ ತಕ್ಕೊಳ್ಳುವದರಿಂದ (ಆಮೊ. ೨, ೬. ಮಿಕ. ೩, ೧೧.), ಕಂದಾಯಕ್ಕೆ ತಪ್ಪಿಸಿ ಕೊಳ್ಳುವದರಿಂದ, ಸರ್ಕಾರ ಆಸ್ತಿಯನ್ನು ಮೋಸ ಮಾಡುವದರಿಂದ, ಸುಂಕಕ್ಕೆ ತಪ್ಪಿಸಿ ಕೊಳ್ಳುವದರಿಂದ, ಇತ್ಯಾದಿ (ರೋಮಾ. ೧೩, ೭. ಮತ್ತಾ. ೧೭, ೨೪. ೨೨, ೧೭. ಇತ್ಯಾದಿ.)

**೧೧೫.** ಕಳ್ಳತನದ ಸಂಗಡಲೇ, ಅದಕ್ಕೆ ಎಳಕೊಂಡು ಹೋಗುವಂಥಾದ್ದೆಲ್ಲಾ ಸಹಾ, ಮುಖ್ಯವಾಗಿ ಕೃಪಣತ್ವವೂ, ಲೋಭವೂ[1], ಮತ್ತೆ ಸೋಮಾರಿತನವೂ, ದುಂದುತನವೂ, ಹೊಟ್ಟೆಕಿಚ್ಚೂ ವಕ್ರತ್ವ ಇತ್ಯಾದಿ ಎಲ್ಲಾ ನಿಷೇಧಿಸಿದ ಹಾಗಾಯಿತು.

೧) "ಆದರೆ ಐಶ್ವರ್ಯವಂತರಾಗ ಇಚ್ಛೈಸುವವರು ಶೋಧನೆಯಲ್ಲಿಯೂ, ಉರುಲಿನಲ್ಲಿಯೂ, ಬುದ್ಧಿಯಿಲ್ಲದ ನಷ್ಟವುಳ್ಳ ಅನೇಕ ಆಶೆಗಳಲ್ಲಿಯೂ ಬೀಳುತ್ತಾರೆ; ಅವು

ಮನುಷ್ಯರನ್ನು ನಾಶನದಲ್ಲಿಯೂ ಲಯದಲ್ಲಿಯೂ ಮುಣುಗಿಸುತ್ತವೆ. ಯಾಕಂದರೆ ದ್ರವ್ಯಾಶೆಯು ಸಕಲ ಕೇಡುಗಳ ಬೇರಾಗಿದೆ." (೧ ತಿಮೊ. ೬, ೯. ೧೦.)

**೧೧೬.** ಎಂಟನೆ ಕಟ್ಟಳೆಯಲ್ಲಿ, ನಾವು, ನೆರೆಯವನು ಸ್ನೇಹಿತನಾಗಿರಲಿ ಹಗೆಗಾರನಾಗಿರಲಿ ೧), ಅವನ ಆಸ್ತಿ ಬದುಕಿಗಾಗಿ ಸಹಾ ಸಂತೋಷ ಪಟ್ಟು, ಅವನು ಅದನ್ನು ಹೆಚ್ಚಿಸುವ ಹಾಗೆಯೂ ಕಾಪಾಡುವ ಹಾಗೆಯೂ ಅವನಿಗೆ ಸಹಾಯ ಮಾಡ ಬೇಕೆಂದೂ ೨), ಆದರೆ ನಮ್ಮದನ್ನು ನ್ಯಾಯ ಪ್ರಕಾರ ಸಂಪಾದಿಸಿ ಕೊಂಡು ೩), ಎಲ್ಲಾದರಲ್ಲಿ ಮಿತಿ ಇಟ್ಟು, ದೇವರು ಕೊಟ್ಟದರಲ್ಲಿ ಸಂತೃಪ್ತಿಯಾಗಿರ ಬೇಕೆಂದೂ ೪) ವಿಧಿಸಿ ಅದೆ.

೧) "ನಿನ್ನ ಶತ್ರುವಿನ ಎತ್ತಾದರೂ ಕತ್ತೆಯಾದರೂ ತಪ್ಪಿ ಹೋಗುವದಾಗಿ ಶಿಕ್ಕಿದರೆ, ಅದನ್ನು ಹಿಂದಕ್ಕೆ ಹೊಡ ಕೊಂಡು ಬರ ಬೇಕು. ನಿನ್ನ ಹಗೆಯವನ ಕತ್ತೆ ಹೊರೆಯ ಕೆಳಗೆ ಬಿದ್ದಿರುವದನ್ನು ಕಂಡಾಗ, ಅವನಿಗೆ ಸಹಾಯ ಮಾಡದೆ ಹಿಂದೆಗೆಯುತ್ತಿದ್ದರೆ, ಹ್ಯಾಗಾದರೂ ಅವನಿಗೆ ಸಹಾಯ ಮಾಡ ಬೇಕು." (ಹೊರ. ೨೩, ೪. ೫.)

೨) "ಯಾವನಾದರೂ ತನ್ನದನ್ನಲ್ಲ, ಒಬ್ಬೊಬ್ಬನು ಬೇರೊಬ್ಬನದನ್ನು ಹುಡುಕಲಿ." (೧ ಕೊರಿ. ೧೦, ೨೪.) "ಹೀಗಿರುವದರಿಂದ ಮನುಷ್ಯರು ನಿಮಗೆ ಮಾಡ ಬೇಕೆಂದು ನೀವು ಇಚ್ಛೈಸುವವುಗಳನ್ನೆಲ್ಲಾ ನೀವು ಸಹಾ ಅವರಿಗೆ ಹಾಗೆಯೇ ಮಾಡಿರಿ." (ಮತ್ತಾ. ೭, ೧೨.)

೩) "ಕೆಲವರು ಕ್ರಮವಿಲ್ಲದೆ ನಿಮ್ಮಲ್ಲಿ ನಡೆದು, ಕೆಲಸ ಮಾಡದೆ, ತಿರುಗಾಡುತ್ತಾರೆಂದು ಕೇಳುತ್ತೇವೆ. ಅಂಥವರಿಗೆ, ಸಮಾಧಾನದಿಂದ ಕೆಲಸ ಮಾಡಿ, ಸ್ವಂತ ರೊಟ್ಟಿಯನ್ನು ತಿನ್ನ ಬೇಕೆಂದು, ನಮ್ಮ ಕರ್ತನಾದ ಯೇಸು ಕ್ರಿಸ್ತನಿಂದ ಬುದ್ಧಿ ಹೇಳಿ, ಆಜ್ಞಾಪಿಸುತ್ತೇವೆ." (೨ ಥೆಸ್ಸ. ೩, ೧೧. ೧೨.) "ಶಾಂತವಾಗಿರ ಪ್ರಯಾಸ ಪಟ್ಟು, ಸ್ವಂತ ಕೆಲಸಗಳನ್ನು ನೋಡಿಕೊಂಡು, ನಿಮ್ಮ ಸ್ವಂತ ಕೈಗಳಿಂದ ಕಷ್ಟ ಮಾಡ ಬೇಕೆಂದೂ, ನಿಮಗೆ ಬುದ್ಧಿ ಹೇಳುತ್ತೇವೆ." (೧ ಥೆಸ್ಸ. ೪, ೧೨.) (**೩೭.**) "ಬಡವನು ಮಾತ್ರ ನಿನ್ನ ಮಧ್ಯದಲ್ಲಿ ಇರ ಬಾರದು." (ದ್ವಿತಿ. ೧೫, ೪.)

೪) "ತುಷ್ಟಿಯ ಸಹಿತವಾದ ಭಕ್ತಿಯು ದೊಡ್ಡ ಲಾಭವಾಗಿದೆ. ಯಾಕಂದರೆ ನಾವು ಲೋಕದಲ್ಲಿ ಏನೂ ತಕ್ಕೊಂಡು ಬರಲಿಲ್ಲ; ಏನೂ ತಕ್ಕೊಂಡು ಹೋಗಲಾರನೆಂಬುವದು ಪ್ರಕಟವಾಗಿದೆ. ಆದದರಿಂದ ನಮಗೆ ಅನ್ನ ವಸ್ತ್ರವಿದ್ದರೆ, ಅದು ಸಾಕೆಂದೆಣಿಸುವ." (೧ ತಿಮೊ. ೬, ೬—೮.) (ಸಾಮ. ೩೦, ೮. ಫಿಲಿ. ೪, ೧೧—೧೩.)

## ಒಂಭತ್ತನೆ ಕಟ್ಟಳೆ.

### ನಿನ್ನ ನೆರೆಯವನ ಮೇಲೆ ಅಬದ್ಧ ಸಾಕ್ಷಿ ನುಡಿಯ ಬಾರದು.

ಹಾಗಂದರೇನು?

ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು, ನಮ್ಮ ನೆರೆಯವನಿಗೆ ಸುಳ್ಳು ಮಾತುಗಳಿಂದ ಸಂಕಟ ನಷ್ಟ ಮೋಸ ಅಪಕೀರ್ತಿ ಮಾಡದೆಯೂ ಚಾಡಿ ಹೇಳದೆಯೂ, ಅವನ ತಪ್ಪುಗಳನ್ನು ಸುದಾರಿಸಿ, ಅವನ ವಿಷಯದಲ್ಲಿ ಒಳ್ಳೇದನ್ನೇ ಮಾತಾಡಿ, ಎಲ್ಲಾ ಒಳ್ಳೇದಕ್ಕೆ ಬರ ಮಾಡ ಬೇಕು.

**೧೧೭.** ಒಂಭತ್ತನೆ ಕಟ್ಟಳೆಯಿಂದ ನೆರೆಯವನ ಮಾನವೂ ಒಳ್ಳೇ ಹೆಸರೂ ಭದ್ರವಾಗುತ್ತದೆ. ಎಂಟನೆ ಕಟ್ಟಳೆಯಲ್ಲಿ ನೆರೆಯವನ ಕಡೆಯ ಪ್ರೀತಿಯು ಹ್ಯಾಗೆ ನೀತಿ ಎಂಬದಾಗಿಯೊ, ಹಾಗೆಯೆ ಇಲ್ಲಿ ಅದು ಸತ್ಯವೆಂಬದಾಗಿ ಪ್ರತ್ಯಕ್ಷವಾಗುತ್ತದೆ. ಹಾಗಾದರೆ, (ಎರಡನೆ ಮೂರನೆ ಕಟ್ಟಳೆಯು ದೇವರ ವಿಷಯವಾಗಿ ಹ್ಯಾಗೊ, ಹಾಗೆಯೆ) ಒಂಭತ್ತನೆ ಕಟ್ಟಳೆಯು ನೆರೆಯವನ ವಿಷಯವಾಗಿ ಒಟ್ಟಾರೆ ಎಲ್ಲಾ ನಾಲಿಗೇ ಪಾಪಗಳಿಗೆ ಎದುರಾಗಿರುತ್ತದೆ.

**೧೧೮.** ಭಾಷೆಯು ಮನುಷ್ಯಸಂತತಿಯ ಮುದ್ರೇ ಕೋಲು (ಉತ್ಪ. ೨, ೧೯. ೨೦.) ಅದು ಎಲ್ಲಾ ಭೂಜೀವಿಗಳಲ್ಲಿ ಭೂಮಿಯ ಅರಸನಿಗೆಂದು, ಮನುಷ್ಯನಿಗೆ ಮಾತ್ರವೆ ಕೊಟ್ಟದೆ. ಈ ಮನುಷ್ಯನ ವಿಶೇಷತ್ವವು ಎಷ್ಟಕ್ಕೆ ಉತ್ತಮವೆಂದೆಣಿಸ ತಕ್ಕದ್ದೊ, ಅದರ ಅಪಯೋಗವು ಅಷ್ಟಕ್ಕೆ ದ್ರೋಹಕರವಾಗಿರುತ್ತದೆ, ಮತ್ತು ಒಳ್ಳೇ ವಾಕ್ಯದ ಆಶೀರ್ವಾದವು ಎಷ್ಟಕ್ಕೆ ದೊಡ್ಡದಾಗಿರುತ್ತದೊ [೧], ಕೆಟ್ಟ ವಾಕ್ಯದ ಶಾಪವು ಅಷ್ಟಕ್ಕೆ ದೊಡ್ಡದಾಗಿರುತ್ತದೆ [೨]. ವಾಕ್ಯವು ಗಾಳಿಯಲ್ಲಿ ನಿಶ್ಶಬ್ದವಾಗಿ ಹೋಗುವ ಬರೇ ಶ್ವಾಸವಲ್ಲಾ, ಅದರಲ್ಲಿ ಆತ್ಮಿಕವಾದ ಬಲ ಉಂಟು, ಮತ್ತು ವಾಕ್ಯದಿಂದ ಉಂಟಾಗುವಂಥಾದ್ದನ್ನು ಪಾರಂಗತವಾಗಿ ತಿಳಕೊಳ್ಳ ಕೂಡದೆ ಹೋದರೂ, ಅದು ಅಭಿವೃದ್ಧಿಸುವಂಥಾದ್ದಾಗಿಯಾಗಲಿ ನಿರ್ಮೂಲ ಮಾಡುವಂಥಾದ್ದಾಗಿಯಾಗಲಿ ಒಬ್ಬೊಬ್ಬ ಮನುಷ್ಯನ ಮತ್ತು ಪೂರ್ಣ ಸಭೆಗಳ, ಬಹಳ ಸರ್ತಿ ಪೂರ್ಣ ಜನಾಂಗಗಳ ಮತ್ತು ಕಾಲಗಳ ಶರೀರ ಸಂಬಂಧವಾದ ಅಥವಾ ಆತ್ಮದ ಜೀವ ಕ್ಷೇಮಗಳಲ್ಲಿ ತನ್ನ ಬಲ ತೋರಿಸುತ್ತದೆ. ನಿಶ್ಚಯವಾಗಿ, ಮಾತಾಡಿದ ವಾಕ್ಯವು ಸರ್ವಥಾ ನಿಶ್ಶಬ್ದವಾಗುವ ಶ್ವಾಸವಲ್ಲಾ, ಅದು ಎಷ್ಟು ಅಲ್ಪವೆಂದು ತೋರಿದರೂ, ನಿತ್ಯ ಇದ್ದು, ಕಡೆ ನ್ಯಾಯತೀರ್ಪಿಗೆ ವಿಶೇಷವಾದ ಆಧಾರವಾಗುತ್ತದೆ [೩].

೧) "ತಕ್ಕ ಕಾಲದಲ್ಲಿ ಹೇಳಿದ ಮಾತು ಬೆಳ್ಳಿಯ ಚಿತ್ರ ತಟ್ಟೆಗಳಲ್ಲಿರುವ ಭಂಗಾರದ ಕಾಯಿಗಳ ಹಾಗಿದೆ." (ಸಾಮ. ೨೫, ೧೧.)

೨) "ಅದೇ ಪ್ರಕಾರ ನಾಲಿಗೆ ಸಣ್ಣ ಅಂಗವಾಗಿದೆ; ಆದರೆ ತನ್ನನ್ನು ಬಹಳವಾಗಿ ಹೆಚ್ಚಿಸಿ ಕೊಳ್ಳುತ್ತದೆ. ಇಗೋ, ಸ್ವಲ್ಪ ಬೆಂಕಿಯು ಎಷ್ಟು ದೊಡ್ಡ ಅಡವಿಯನ್ನು ಹೊತ್ತಿಸುತ್ತದೆ. ನಾಲಿಗೆಯು ಸಹಾ ಬೆಂಕಿಯೂ ಅನ್ಯಾಯದ ಲೋಕವೂ ಆಗಿದೆ. ಹೀಗೆ ನಾಲಿಗೆಯು ಶರೀರವನ್ನೆಲ್ಲಾ ಕಳಂಕ ಮಾಡುವಂಥಾದ್ದಾಗಿಯೂ, ಜನ್ಮಚಕ್ರವನ್ನು ದಹಿಸುವಂಥಾದ್ದಾಗಿಯೂ, ನರಕದಿಂದ ದಹಿಸಲ್ಪಡುವಂಥಾದ್ದಾಗಿಯೂ, ನಮ್ಮ ಅಂಗಗಳೊಳಗೆ ಇರುತ್ತದೆ. . . . ಆದರೆ ನಾಲಿಗೆಯನ್ನು ಮನುಷ್ಯರಲ್ಲಿ ಯಾವನೂ ಸಾಧು ಮಾಡಲಾರನು; ಅದು ಸ್ವಾಧೀನವಾಗದ ಕೇಡು; ಮರಣಕರವಾದ ವಿಷದಿಂದ ತುಂಬಿ ಅದೆ." (ಯಾಕೊ. ೩, ೫. ೬. ೮.)

೩) "ಆದರೆ ನಿಮಗೆ ಹೇಳುತ್ತೇನೆ, ಮನುಷ್ಯರು ಆಡುವ ಸಕಲ ವ್ಯರ್ಥ ಮಾತುಗಳಿಗೋಸ್ಕರ ನ್ಯಾಯತೀರ್ವಿಕೆಯ ದಿನದಲ್ಲಿ ಲೆಖ್ಖ ಒಪ್ಪಿಸುವರು. ಯಾಕಂದರೆ ನಿನ್ನ ಮಾತುಗಳಿಂದ ನೀತಿನಿರ್ಣಯ ಪಡುವಿ; ಮತ್ತು ನಿನ್ನ ಮಾತುಗಳಿಂದ ಆಜ್ಞೆನಿರ್ಣಯ ಪಡುವಿ." (ಮತ್ತಾ. ೧೨, ೩೬. ೩೭.)

**೧೧೯.** ಸತ್ಯವು ದೈವೀಕವು, ಯಾಕಂದರೆ ದೇವರು ಕೇವಲ ನಿತ್ಯ ಸತ್ಯವೂ, ಆತನ ಹೊರ್ತಾಗಿರುವ ಸಕಲ ಸತ್ಯದ ಬುಗ್ಗೆಯೂ ಆಗಿರುತ್ತಾನೆ. (ಯೋಹಾ. ೧೪, ೬.) ಆದರೆ ಸುಳ್ಳು ಪಿಶಾಚೀಯ, ಯಾಕಂದರೆ ಪಿಶಾಚನು ಸತ್ಯದಲ್ಲಿ ನೆಲೆಯಾಗಿರಲಿಲ್ಲಾ, ಮತ್ತು ಅವನಿಂದಲೆ ಸುಳ್ಳು ಲೋಕಕ್ಕೆ ಬಂತು. ಆದ್ದರಿಂದ ಸುಳ್ಳಾಡುವವನು ಪಿಶಾಚನ ಮಗುವಾಗಿ, ತನ್ನ ತಂದೆಯ ಅಪೇಕ್ಷೆಗೂ ಮನಸ್ಸಿಗೂ ಅನುಸಾರವಾಗಿ ನಡಕೊಳ್ಳುತ್ತಾನೆ. (ಯೋಹಾ. ೮, ೪೪.) ಆದರೆ ಪಾಪದಿಂದ ಸುಳ್ಳು ಸರ್ವರಲ್ಲಿಯೂ ಬಂದು, ಮನುಷ್ಯನ ಅತ್ಯಂತ ಸ್ವಭಾವದೊಳಗೆ ಹೊಕ್ಕಿರಲಾಗಿ, ಬರಹವು, ಮನುಷ್ಯರೆಲ್ಲರೂ ಹುಸಿಗರು (ಕೀರ್ತ. ೧೧೬, ೧೧. ರೋಮಾ. ೩, ೪.) ಎಂದು, ಸಾಕ್ಷಿ ಕೊಡ ಬೇಕಾಯಿತು. (ಸಮ ನೋಡು ಯೋಹಾ. ೧೮, ೩೫.)

**೧೨೦.** ನೆರೆಯವನ ಕಡೆಗೆ ನಾವು ಸತ್ಯವಾಡ ಬೇಕೆಂದು ಹ್ಯಾಗೊ, ಹಾಗೆಯೆ ಅವನ ವಿಷಯದಲ್ಲಿ ಸಹಾ ಸತ್ಯವಾಡ ಬೇಕೆಂದೂ ಮುಖ್ಯವಾಗಿ ಅವನ ಮಾನವನ್ನೂ ಅವನ ಒಳ್ಳೇ ಹೆಸರನ್ನೂ ಪರಿಶುದ್ಧವಾದಂಥಾ ಮುಟ್ಟಲಾಗದಂಥಾ ವಸ್ತುವೆಂದೆಣಿಸ ಬೇಕೆಂದೂ ಪ್ರೀತಿಯ ನಿಬಂಧನೆಯಾಗಿರುತ್ತದೆ. ಯಾಕಂದರೆ ಒಳ್ಳೇ ಹೆಸರು ಅಮೂಲ್ಯ ವಸ್ತು, ಐಶ್ವರ್ಯಕ್ಕಿಂತಾ ಅಮೂಲ್ಯವಾದದ್ದು[೧], ನಿಶ್ಚಯವಾಗಿ ಜೀವದಷ್ಟೇ[೨] ಅಮೂ

ಲ್ಯವಾದದ್ದು; ಯಾಕಂದರೆ ಅದರಿಂದ ನಮ್ಮ ಪ್ರಯತ್ನಕ್ಕೆ ಎಲ್ಲಾ ಕಡೆಯಲ್ಲಿಯೂ ಆಶೀರ್ವಾದವುಳ್ಳ ಸರಾಗ ಮಾರ್ಗವು ಉಂಟಾಗುತ್ತದೆ.

೧) "ಕೀರ್ತಿಯು ಬಹಳ ಐಶ್ವರ್ಯಕ್ಕಿಂತ ಹಿತವಾಗಿದೆ; ದಯವು ಬೆಳ್ಳಿ ಭಂಗಾರಕ್ಕಿಂತ ಒಳ್ಳೇದಾಗಿದೆ." (ಸಾಮು. ೨೨, ೧.)
೨) "ಯೊವನಾದರೂ ನನ್ನ ಹೆಚ್ಚಳವನ್ನು ಹೀನ ಮಾಡುವದಕ್ಕಿಂತ ಸಾಯುವದು ನನಗೆ ಬಹು ಒಳ್ಳೇದು." (೧ ಕೊರಿ. ೯, ೧೫.)

**೧೨೧.** ಆದಾಗ್ಯೂ ದೇವರ ಮುಂದೆ ಸಹಾ ನಡಿಯುವಂಥಾ ಹೆಸರು ಮಾತ್ರವೆ ಸಮವಾದ ಒಳ್ಳೇ ಹೆಸರು; ಆದರೆ ಎಲ್ಲಾ ವಿಷಯದಲ್ಲಿಯೂ ಮನುಷ್ಯರ ಮನಸ್ಸಿನ ಪ್ರಕಾರ ನಾವು ನಡಕೊಳ್ಳುವದರಿಂದ ಮನುಷ್ಯರೆಲ್ಲರೂ ನಮಗೆ ಒಳ್ಳೇ ಮಾತು ಹೇಳಿದರೆ ಅಂಥಾ ಹೆಸರಲ್ಲಾ. ಯಾರು ಎಲ್ಲಾ ವಿಷಯದಲ್ಲಿಯೂ ದೇವರನ್ನು ಮೆಚ್ಚಿಸ ಪ್ರಯತ್ನ ಮಾಡುತ್ತಾನೊ, ಅಂಥವನು ಲೋಕವನ್ನು ಬಹಳ ಸರ್ತಿ ಮೆಚ್ಚಿಸದೇ ಇರಬೇಕಾಗುತ್ತದೆ.

"ಮನುಷ್ಯರೆಲ್ಲರು ನಿಮಗೆ ಒಳ್ಳೇ ಮಾತು ಹೇಳಿದರೆ, ನಿಮಗೆ ಅಯ್ಯೋ!" (ಲೂಕ. ೬, ೨೬.) "ನನ್ನ ನಿಮಿತ್ತ ನಿಮ್ಮನ್ನು ನಿಂದಿಸಿ, ಹಿಂಸಿಸಿ, ಸುಳ್ಳಾಗಿ ನಿಮಗೆ ವಿರೋಧವಾಗಿ ಎಲ್ಲಾ ಕೆಟ್ಟ ಮಾತುಗಳನ್ನು ಹೇಳಿದರೆ, ನೀವು ಭಾಗ್ಯವಂತರಾಗಿದ್ಧೀರಿ." (ಮತ್ತಾ. ೫, ೧೧.) "ಲೋಕಕ್ಕೆ ಸ್ನೇಹಿತನಾಗ ಬೇಕೆಂಬುವವನು ದೇವರಿಗೆ ಶತ್ರುವಾಗಿದ್ಧಾನೆ." (ಯಾಕೊ. ೪, ೪.) (ಮತ್ತಾ. ೧೦, ೨೪. ೨೫.)

**೧೨೨.** ಒಂಭತ್ತನೆ ಕಟ್ಟಳೆಯಿಂದ, ಒಟ್ಟಾರೆ ಎಲ್ಲಾ ಹುಸಿಯೂ ಅಸತ್ಯವೂ[೧]; ಪ್ರತ್ಯೇಕವಾಗಿ ನೆರೆಯವನ ಮೇಲೆ ಯಾವ ಪ್ರಕಾರದ್ದಾದರೂ ಸುಳ್ಳು ಸಾಕ್ಷಿ ಹೇಳುವದೂ, ಅಂದರೆ, ಮತ್ತೊಬ್ಬರ ಮೇಲೆ ಆಲೋಚನೆ ನಿಶ್ಚಯಿಸುವದರಲ್ಲಿಯೂ, ಹಾಗೆಯೆ ನ್ಯಾಯಸ್ಥಾನದ ಮುಂದೆ ಮಾತ್ರವಲ್ಲಾ ಸಾಧಾರಣ ಸಂಭಾಷಣೆಯಲ್ಲಿ ಸಹಾ ಎಲ್ಲಾ ಅಸತ್ಯವೂ ನಿಷೇಧಿಸಿ ಅದೆ. ಇದಕ್ಕೆ ಶೇರಿದ್ದು ಏನಂದರೆ: ವಿನಾಕಾರಣವಾದ ಕೆಟ್ಟ ಸಂಶಯ[೨], ಮತ್ತೊಬ್ಬರ ಮೇಲೆ ಸಂಶಯ ಹುಟ್ಟಿಸೋಣ, ಸುಳ್ಳಾಗಿ ಅಥವಾ ಅವಶ್ಯವಿಲ್ಲದೆ ಹೇಳಿ ಕೊಡೋಣ, ಗುಟ್ಟು ಪ್ರಕಟ ಮಾಡೋಣ (ಸಾಮು. ೧೧, ೧೩.). ಎರಡು ನಾಲಿಗೆ, ಮುಖಸ್ತೌತ್ಯ, ಮಾತಿಗೆ ತಪ್ಪುವದು, ನಿಷ್ಕರುಣೆಯಾಗಿ ನ್ಯಾಯತೀರಿಸುವದು[೩], ಚಾಡೀ ಮಾತುಗಳಲ್ಲಿ ತಾನೆ ಶೇರುವದು ಅಥವಾ ಸಂತೋಷ ಪಡುವದು, ಬೇಕೆಂದು ಮತ್ತೊಬ್ಬರ ಮೇಲೆ ಅಪಕೀರ್ತಿ ತರುವದು ಇತ್ಯಾದಿ.

೧) "ಸುಳ್ಳನ್ನು ತಳ್ಳಿ ಬಿಟ್ಟು, ಒಬ್ಬೊಬ್ಬನು ತನ್ನ ನೆರೆಯವನ ಸಂಗಡ ಸತ್ಯವನ್ನೇ ಮಾತಾಡಿರಿ; ಯಾಕಂದರೆ ಒಬ್ಬರಿಗೊಬ್ಬರು ಅಂಗಗಳಾಗಿದ್ದೇವೆ." (ಎಫೆ. ೪, ೨೫.) (ಪ್ರ ಕ. ೨೧, ೧೮.)

೨) "ಯಾರೂ ತನ್ನ ಹೃದಯದಲ್ಲಿ ತನ್ನ ಸಹೋದರನ ಮೇಲೆ ಕೆಟ್ಟದ್ದನ್ನು ಕಲ್ಪಿಸದೆ ಇರಲಿ." (ಜೆಕ. ೭, ೧೦.)

೩) "ಮತ್ತೊಬ್ಬನ ಊಳಿಗದವನಿಗೆ ನ್ಯಾಯ ತೀರಿಸುವವನಾದ ನೀನ್ಯಾರು? ಸ್ವಂತ ಯಜಮಾನನಿಗೆ ನಿಲ್ಲುವನು, ಇಲ್ಲವೆ ಬೀಳುವನು." (ರೋಮಾ. ೧೪, ೪.) "ನಿಮಗೆ ನ್ಯಾಯತೀರ್ವಿಕೆ ಆಗದ ಹಾಗೆ, ನ್ಯಾಯ ತೀರಿಸ ಬೇಡಿರಿ; ಯಾಕಂದರೆ ನೀವು ನ್ಯಾಯತೀರಿಸುವ ಪ್ರಕಾರವೇ ನಿಮಗೆ ನ್ಯಾಯತೀರ್ವಿಕೆ ಆಗುವದು. ಮತ್ತು ನೀವು ಅಳೆಯುವ ಅಳತೆಯಿಂದಲೇ ನಿಮಗೆ ಬದಲು ಅಳೆಯಲ್ಪಡುವದು. ಇದಲ್ಲದೆ ನಿನ್ನ ಸಹೋದರನ ಕಣ್ಣಿನಲ್ಲಿರುವ ರವೆಯನ್ನು ನೋಡಿ, ನಿನ್ನ ಕಣ್ಣಿನಲ್ಲಿರುವ ತೊಲೆಯನ್ನು ಯೋಚಿಸದೆ ಇರುವದೇನು?" (ಮತ್ತಾ. ೭, ೧—೩.)

ಪರಿಶಿ. ಆಪತ್ತಿಗಾಗಿ ಸುಳ್ಳು ಹೇಳ ಬೇಕೆಂಬದು ಆಪತ್ತಿಗಾಗಿ ಪಾಪ ಮಾಡ ಬೇಕೆಂಬ ಹಾಗೆಯೆ ಭ್ರಾಂತಿಯಾಗಿರುತ್ತದೆ. ಲೋಕದಲ್ಲಿ ಏನೊಂದಾದರೂ ನನ್ನನ್ನು ಪಾಪ ಮಾಡ ಬಲಾತ್ಕರಿಸ ಕೂಡದು. (ರೋಮಾ. ೮, ೩೫—೩೯.) (**೭೪.**) ಪಾಪವು ಯಾವಾಗಲೂ ಎಲ್ಲಾ ಸ್ಥಿತಿಗಳಲ್ಲಿಯೂ ಪಾಪವೆ, ಮತ್ತು ತೋರಿಕೆಗೆ ಒಳ್ಳೇದಾಗಿ ಕಾಣುವ ಕಾರ್ಯದಿಂದಲೂ ನೀತಿಯಾಗದು, ಆಪತ್ತಿನಿಂದಲೂ ಕಂಟಕದಿಂದಲೂ ನೀತಿಯಾಗದು. "ಒಳ್ಳೆಯವುಗಳು ಬರುವ ಹಾಗೆ ಕೆಟ್ಟವುಗಳನ್ನು ಮಾಡುವಾ" (ರೋಮಾ. ೩, ೮.) ಎಂದು ಹೇಳುವದು ದೈವಹೀನವಾದ ದ್ರೋಹವಾಗಿರುತ್ತದೆ. ಮತ್ತು ಮುಖ್ಯವಾಗಿ ಆಪತ್ತಿನ ಸುಳ್ಳು (ಇದರೊಳಗೆ ಬರಿದಾಗಿರುವ ಸುಳ್ಳು ನೆವನಗಳೂ, ಉಪಾಯಗಳೂ ಇತ್ಯಾದಿ ಸಹಾ ಬರುತ್ತವೆ,) ಸ್ವಕಾರ್ಯಗಳ ವಿಷಯ ತಪ್ಪಾದ ಲಜ್ಜೆಯಲ್ಲಿ ಅಥವಾ ಮಾನಸಾಂತರ ಪಡದ ಮನಃಸ್ಥಿತಿಯಲ್ಲಿಯೂ, ಪರಕಾರ್ಯಗಳ ವಿಷಯ ಅಲ್ಪವಾದ ಬುದ್ಧಿ ತ್ರಾಣದೇವ ಭರ್ವಸಗಳಲ್ಲಿಯೂ ಆಧಾರಗೊಂಡದೆ. ನಿಜವಾಗಿ ಕಷ್ಟವಾದ ಕಾರ್ಯಗಳಲ್ಲಿ ಮೇಲಿನಿಂದ ಬೇಡಿ ಕೊಳ್ಳ ತಕ್ಕ ಬುದ್ಧಿಯು ಸಮವಾದ ಮಾರ್ಗವನ್ನು ತೋರಿಸದೆ ಇರದು. (ಯಾಕೊ. ೧, ೫.)

**೧೨೭.** ಒಂಭತ್ತನೆ ಕಟ್ಟಳೆಯಿಂದ ಎಲ್ಲಾ ಮಾತುಗಳಲ್ಲಿ ಸತ್ಯದ ಪ್ರೀತಿಯೂ, ಯಥಾರ್ಥತ್ವವೂ, ನಿಧಾನವೂ[೧], ಮುಖ್ಯವಾಗಿ ಸತ್ಯಕ್ಕೆ ಕೊರತೆ ಬಾರದೆ ಆಗುವಷ್ಟು[೨] ನೆರೆಯವನ ತಪ್ಪುಗಳನ್ನು ಸುದಾರಿಸಿ ಅವನ ವಿಷಯದಲ್ಲಿ ಒಳ್ಳೇದನ್ನೇ ಮಾತಾಡಿ, ಎಲ್ಲಾ ಒಳ್ಳೇದಕ್ಕೆ ಬೀಳ ಮಾಡ ಬೇಕು ಎಂಬದು ಸಹಾ ವಿಧಿಸಿ ಅದೆ. ಅದಕ್ಕೆ ಬೇಕಾದ ಮೇಲಿನ ಜ್ಞಾನವನ್ನು ದೇವರು ಬೇಡಿ ಕೊಳ್ಳುವವನಿಗೆ ಕೊಡುತ್ತಾನೆ. (ಯಾಕೊ. ೧, ೫.)

೧) "ಆದಕಾರಣ, ನನ್ನ ಪ್ರಿಯ ಸಹೋದರರೇ, ಪ್ರತಿ ಮನುಷ್ಯನು ಕೇಳುವದಕ್ಕೆ ಶೀಘ್ರವಾಗಿಯೂ, ಮಾತಾಡುವದಕ್ಕೆ ನಿಧಾನವಾಗಿಯೂ, ಕೋಪಕ್ಕೆ ನಿಧಾನವಾಗಿಯೂ, ಇರಲಿ." (ಯಾಕೋ. ೧, ೧೯.) "ಮಾತುಗಳ ಹೆಚ್ಚಿಗೆಯಲ್ಲಿ ದ್ರೋಹವು ಇಲ್ಲದೆ ಇರದು; ಆದರೆ ತನ್ನ ತುಟಿಗಳನ್ನು ಬಿಗಿಯುವವನು ಬುದ್ಧಿವಂತನಾಗಿದ್ದಾನೆ." (ಸಾಮ. ೧೦, ೧೯.) "ಸುಮ್ಮನಿರುವ ಕಾಲ (ಉಂಟು), ಮಾತಾಡುವ ಕಾಲ (ಉಂಟು)." (ಪ್ರಸ. ೩, ೭.)

೨) "ಕೇಡಿಗೆ ಮೇಲೆಂದೂ ಮೇಲಿಗೆ ಕೇಡೆಂದೂ ಹೇಳುವವರಿಗೂ, ಕತ್ತಲೆಯನ್ನು ಬೆಳಕೆಂದೂ ಬೆಳಕನ್ನು ಕತ್ತಲೆಂದೂ ಎಣಿಸುವವರಿಗೂ, ಕಹಿಯನ್ನು ಶೀಯೆಂದೂ ಶೀಯನ್ನು ಕಹಿಯೆಂದೂ ಎಣಿಸುವವರಿಗೂ ಅಯ್ಯೋ" (ಯೆಶಾ. ೫, ೨೦.)

೩) "ಮೂಕನಿಗೋಸ್ಕರವೂ, ದಿಕ್ಕಿಲ್ಲದ ಮಕ್ಕಳೆಲ್ಲರ ನ್ಯಾಯಕ್ಕೋಸ್ಕರವೂ ನಿನ್ನ ಬಾಯಿ ತೆರೆ." (ಸಾಮ. ೩೧, ೮.) "ಪ್ರೀತಿಯು ಅನ್ಯಾಯಕ್ಕೆ ಸಂತೋಷ ಪಡದು, ಆದರೆ ಸತ್ಯದಲ್ಲಿ ಸಂತೋಷ ಪಡುವದು; ಎಲ್ಲಾ ಮುಚ್ಚುವದು, ಎಲ್ಲಾ ವಿಶ್ವಾಸಿಸುವದು, ಎಲ್ಲಾ ನಿರೀಕ್ಷಿಸುವದು, ಎಲ್ಲಾ ಸಹಿಸುವದು." (೧ ಕೊರಿ. ೧೩, ೬. ೭.)

**೧೨೪.** ಯಾವ ಯಥಾರ್ಥತ್ವವೂ ಸತ್ಯದ ಪ್ರೀತಿಯೂ ಒಂಬತ್ತನೆ ಕಟ್ಟಳೆಯಿಂದ ನೆರೆಯವನ ವಿಷಯದಲ್ಲಿ ನಮಗೆ ವಿಧಿಸಿ ಅದೆಯೊ, ಅದೇ ನಮ್ಮ ಸ್ವಂತ ವಿಷಯದಲ್ಲಿ ಸಹಾ ವಿಧಿಸಿದ ಹಾಗಾಯಿತು. ನಮ್ಮ ಸ್ವಂತ ವಿಷಯದಲ್ಲಿಯೂ (ಹೃದಯದಲ್ಲಿ ಆಗಲಿ ಮತ್ತೊಬ್ಬರ ಮುಂದೆ ಆಗಲಿ) ಸುಳ್ಳು ಸಾಕ್ಷಿ ನುಡಿಯ ಬಾರದು. ಇದರೊಳಗೆ ಬರುವಂಥಾದ್ದು ಏನಂದರೆ: ಕಪಟ, ವೇಷ, ಹೆಚ್ಚಳ, ಸ್ವಸ್ತುತಿ, (ಸಾಮ. ೨೭, ೨. ೨ ಕೊರಿ. ೧೦, ೧೮.) ಬಡಿವಾರ, ನಮ್ಮ ಸಾಮರ್ಥ್ಯ ಪ್ರಯೋಜನಗಳನ್ನು ಅತಿರೇಕವೆಂದೆಣಿಸುವದು, (ರೋಮ. ೧೨, ೩. ೧೬.) ಇತ್ಯಾದಿ. ಅದೆ ಪ್ರಕಾರ ನಾವು ನಮ್ಮ ಸ್ವಂತ ಒಳ್ಳೇ ಹೆಸರನ್ನು ಪರಿಶುದ್ಧವಾಗಿಟ್ಟು, "ಕೇಡಿನ ತೋರಿಕೆಗೆಲ್ಲಾ ದೂರವಾಗಿದ್ದು" (೧ ಥೆಸ್ಸ. ೫, ೨೨.) ನಮ್ಮ ಒಳ್ಳೇ ನಡತೆಯಿಂದ ದೇವರ ಮಾನಕ್ಕೂ ಆತನ ರಾಜ್ಯದ ಅಭಿವೃದ್ಧಿಗೂ ನಮ್ಮಲ್ಲಿ ಬಲವಾಗಿರುವ ದೇವರ ಕೃಪೆಗೆ ಸಾಕ್ಷಿ ಕೊಡ ಬೇಕು. (ಮತ್ತಾ. ೫, ೧೬. ೧ ಪೇತ್ರ. ೨, ೧೨. ೩, ೧. ೨.)

---

## ಹತ್ತನೆ ಕಟ್ಟಳೆ.

ನಿನ್ನ ನೆರೆಯವನ ಮನೆಯನ್ನಾದರೂ ಹೆಂಡತಿಯನ್ನಾದರೂ ವಕ್ಕಲುದಕ್ಕಲನ್ನಾದರೂ, ದನಕರುವನ್ನಾದರೂ, ನಿನ್ನ ನೆರೆಯವನಿಗೆ ಉಂಟಾದದರಲ್ಲಿ ಏನಾದರೂ ಅಭಿಲಾಷಿಸ ಬಾರದು.

ಹಾಗಂದರೇನು?

ದೇವರಲ್ಲಿ ಭೀತಿಯನ್ನೂ ಪ್ರೀತಿಯನ್ನೂ ಇಟ್ಟು ಕೊಂಡು, ನಮ್ಮ ನೆರೆಯವನ ಹೊಲ ಮನೆ ಇತ್ಯಾದಿಗಳನ್ನಾದರೂ, ಹೆಂಡತಿಯನ್ನಾದರೂ, ಆಳು ಕಾಳುಗಳನ್ನಾದರೂ, ದನ ಕರುಗಳನ್ನಾದರೂ, ಲಂಚ ಸಂಚು ಬಲಾತ್ಕಾರಾದಿ ಮೋಸಗಳಿಂದ ತಕ್ಕೊಳ್ಳದೆ, ಯಜಮಾನನಿಗೆ ಸತ್ಯದಿಂದ ಸೇವೆ ಮಾಡುವ ಹಾಗೆ ಅವನ ಸೇವಕರನ್ನು ಪ್ರೇರೇಪಿಸ ಬೇಕು.

೧೨೫. ಹತ್ತನೆ ಕಟ್ಟಳೆಯಿಂದ ನೆರೆಯವನು, ದೈವೀಕ ಮತ್ತು ಮಾನುಷ ನ್ಯಾಯದ ಪ್ರಕಾರ ತನ್ನದೆಂದು ಹೇಳುವ ಸಕಲ ವಸ್ತುಗಳನ್ನು ತೊಂದರೆ ಕೊರತೆ ಇಲ್ಲದೆ, ಸ್ವತಂತ್ರಿಸಿ ಅನುಭವಿಸುವದರಲ್ಲಿ, ಕರ್ಕರೆ ಗಂಡಾಂತರ ಹುಟ್ಟಿಸಲಿಕ್ಕೆ ಕಾರಣವಾಗುವ ಎಲ್ಲಾ ಪರರ ಅಭಿಲಾಷೆಗೆ ಭದ್ರವಾಗುತ್ತಾನೆ. ಮೊದಲು ಬಂದ ಕಟ್ಟಳೆಗಳಲ್ಲಿ (ಮುಖ್ಯವಾಗಿ ಏಳನೆಯಲ್ಲಿಯೂ ಎಂಟನೆಯಲ್ಲಿಯೂ) ಅವುಗಳ ಅಂತರ್ಯದ ಪ್ರಕಾರ ಇವೆಲ್ಲಾ ಇದ್ದರೂ, ಆ ಕಟ್ಟಳೆಗಳನ್ನು ಬಹಿರಂಗದ ಕ್ರಿಯೆಗಳಿಂದ ಪೂರೈಸಿದ್ದೇನೆಂದು ನೆನಸಿ, ಆ ಐಶ್ವರ್ಯವಂತ ಯೌವನಸ್ಥನ ಹಾಗೆ (ಮತ್ತಾ. ೧೯, ೨೦.) "ನನಗೆ ಇನ್ನೂ ಏನು ಕಡಿಮೆ?" ಎಂದು ಕೇಳುವ ಆತ್ಮಿಕವಲ್ಲದ ಮನೋಭಾವವನ್ನು ದಿವ್ಯ ನಿಯಮದ ಪರಿಶುದ್ಧ ಅಗಾಧದಲ್ಲಿಯೂ ಸ್ವಂತ ಹೃದಯದ ಅಶುದ್ಧ ಅಗಾಧದಲ್ಲಿಯೂ ಇಳಿಸುವದಕ್ಕೋಸ್ಕರ ಕಟ್ಟಳೆಗಳ ಕಡೆಯಲ್ಲಿ ಅದು ತಿರಿಗೊಂದು ಸರ್ತಿ, ಮತ್ತಿಲ್ಲಿ ಬಹು ವ್ಯಕ್ತವಾಗಿ, ಸ್ಥಾಪಿಸಿ ಅದೆ.

೧೨೬. ಮೊದಲನೆ ಕಟ್ಟಳೆಯಿಂದ ಎಲ್ಲಾ ಸುಗುಣ ಸದ್ಧರ್ಮಗಳ ಬುಗ್ಗೆ, ಅಂದರೆ ದೇವರ ಕಡೆಯ ಪ್ರೀತಿ ಹ್ಯಾಗೆ ತಿಳಿಯ ಬರುತ್ತದೊ, ಹಾಗೆಯೆ ಕಡೇ ಕಟ್ಟಳೆಯಿಂದ ಎಲ್ಲಾ ಪಾಪದ ಮತ್ತು ಎಲ್ಲಾ ಅದೈವಿಕ ಭಾವದ ಬುಗ್ಗೆ, ಅಂದರೆ ಲೋಕದ ಮತ್ತು ಅದರ ಅಭಿಲಾಷೆಯ ಮೇಲಿನ ಅದೈವಿಕ ಪ್ರೀತಿಯೂ (೧ ಯೋಹಾ. ೨, ೧೫—೧೭.) (**೨೮.**) ಭೂಸಂಬಂಧವಾದ ಆಸ್ತಿಯ ಮೇಲೆಯೂ ಭೋಗದ ಮೇಲೆಯೂ ಇರುವ ಕಟ್ಟು ಇಲ್ಲದ ಅಭಿಲಾಷೆಯೂ, ತಾನು ಮಾತ್ರವೆ ಎಲ್ಲಾ ಉಂಟಾದವನಾಗಿ, ತಾನು ಮಾತ್ರವೆ ಎಲ್ಲಾ ಅನುಭವಿಸ ಬೇಕೆಂಬಂಥಾ, ಶಿಕ್ಷೆ ಇಲ್ಲದೆಯೂ ರಹಸ್ಯದಲ್ಲಿಯೂ ಆಗುವದಾದರೆ, ನೆರೆಯವನ ಬಾಧ್ಯತೆ ವಸ್ತು ಆಸ್ತಿಗಳನ್ನು ತನ್ನದಾಗ ಮಾಡಿ ಕೊಳ್ಳ ಅಪೇಕ್ಷಿಸುವಂಥಾ, ಸುಮ್ಮನಿರದ, ಎಂದೂ ತೃಪ್ತಿ ಪಡದ ಇಚ್ಛೆ ಅಭಿಲಾಷೆಗಳಿಂದ ದೇವರನ್ನೂ ಆತನ ಕಟ್ಟಳೆಯನ್ನೂ ಮರತು ಬಿಟ್ಟು, ಅಲಕ್ಷಿಸುವ ಪಾಪಕರ ಸ್ವಾರ್ಥವೂ ತಿಳಿಯ ಬರುತ್ತದೆ.

**೧೨೭.** ಹೃದಯದಲ್ಲಿ ಸ್ಥಾನ ಹೊಂದಿರುವ ಈ ಪ್ರಕಾರದ ಇಚ್ಛೆ ಅಭಿಲಾಷೆಯು ಎಲ್ಲಾ ಪಾಪ ಕ್ರಿಯೆಯ ಬುಗ್ಗೆಯಾಗಿರುತ್ತದೆ ಮಾತ್ರವಲ್ಲಾ, ಅದು ತಾನೆ ಪಾಪ. ಅಷ್ಟೇ ಅಲ್ಲಾ, ಕ್ರಿಯೆಯು ಪಾಪದ ಅಭಿಲಾಷೆಯಿಂದ ಹೊರಟು ಬಂದು, ಅದಕ್ಕೆ ಒಳಗಾಗಿರುವಷ್ಟಕ್ಕೆ ಮಾತ್ರವೆ ಪಾಪವಾಗಿರುತ್ತದೆ. ಆದಕಾರಣ, ದೇವರ ಮುಂದೆ ಕೆಟ್ಟ ಅಭಿಲಾಷೆಯು, ಕೆಟ್ಟ ಕ್ರಿಯೆಯ ಹಾಗೆಯೆ, ಶಾಪಕ್ಕೂ ವಿನಾಶಕ್ಕೂ ಯೋಗ್ಯವಾಗಿರುತ್ತದೆ. ಹೆಚ್ಚು ಕಡಿಮೆ ಇಷ್ಟೆ, ಕ್ರಿಯೆ ಆಗಿ ಹೋಗದ ಅಭಿಲಾಷೆಯು ಬಲವಾಗಿಯೂ ವಿಪರೀತವಾಗಿಯೂ ಕಾಣುವದಿಲ್ಲಾ, ಕ್ರಿಯೆ ಆಗಿ ಹೋದಂಥಾದ್ದು ಹಾಗೆ ಕಾಣುತ್ತದೆ. ಇದು ಸಹಾ ಸರಿ; ಕ್ರಿಯೆ ಆಗಿ ಹೋದ ಅಭಿಲಾಷೆಯು ನಡಿಯುವ ಸದ್ಧರ್ಮದ ಲೋಕ ಕ್ರಮವನ್ನು ಕ್ರಿಯಾರೂಪವಾಗಿ ಕೆಡಿಸಿ, ದೇವರಿಗೆ ವಿರೋಧವಾದ ದ್ರೋಹಕ್ಕೆ ನೆರೆಯವನ ಕಡೆಯ ದ್ರೋಹವನ್ನು ಸಹಾ ಕೂಡಿಸುವ ಕಾರಣ, ಇದರ ಮೇಲೆ ಹೆಚ್ಚು ಶಾಪವೂ ಹೊಣೆಗಾರಿಕೆಯೂ ನಿಲ್ಲುವದು.

"ಒಬ್ಬೊಬ್ಬನು ಸ್ವಂತ ಇಚ್ಛೆಯಿಂದ ಎಳೆಯಲ್ಪಟ್ಟು, ಮರುಳುಗೊಂಡು, ಶೋಧಿಸಲ್ಪಡುತ್ತಾನೆ. ಆ ಮೇಲೆ ಇಚ್ಛೆಯು ಗರ್ಭವನ್ನು ಧರಿಸಿ ಕೊಂಡು, ಪಾಪವನ್ನು ಹೆರುತ್ತದೆ; ಪಾಪವು ಸಂಪೂರ್ಣವಾದ ಮೇಲೆ ಮರಣವನ್ನು ಹಡಿಯುತ್ತದೆ." (ಯಾಕೊ. ೧, ೧೪. ೧೫.) (ಸಮ ನೋಡು ಉತ್ಪ. ೩, ೬.)

**೧೨೮.** ಈ ಪ್ರಕಾರ ಹತ್ತನೆ ಕಟ್ಟಳೆಯಿಂದ ಹೃದಯದ ಒಂದೊಂದು ಕೆಟ್ಟ ಅಭಿಲಾಷೆಯೆ, ಮತ್ತು ಮೊದಲಾಗಿ (ಅದು ಸಹಾ) ಅವರಿಂದ ನೆರೆಯವನ ಆಸ್ತಿ, ವಸ್ತು, ಬಾಧ್ಯತೆ ಯಾವ ಪ್ರಕಾರದಲ್ಲಿಯಾದರೂ ಕಡಿಮೆಯಾಗುತ್ತದೆ, ಅಥವಾ ಮೋಸಕ್ಕೂ ಗಂಡಾಂತರಕ್ಕೂ ಒಳಗಾಗುತ್ತದೆ, ಎಂಬಷ್ಟಕ್ಕೆ ನಿಷೇಧಿಸಿ ಅದೆ ಎಂದಾಯಿತು. ಅಂಥಾ ಪಾಪಕರ ಅಭಿಲಾಷೆಯು ಶಿಕ್ಷೆಯ ಮತ್ತು ಪ್ರಕಟವಾಗುವದೆಂಬದರ ಭಯದಿಂದಲೂ ಅಥವಾ ಬಹಿರಂಗದ ಮರ್ಯಾದೆಯಿಂದಲೂ, ಹೃದಯದ ಮರೆಯಾದ ಗುಂಡಿಯಲ್ಲಿರುವ ಲಜ್ಜೆಯಿಂದಲೂ ಹಿಂದುಳಿಯಲಾಗಿ, ನೆರೆಯವನನ್ನು ಅವನ ಸ್ವತಂತ್ರಗಳಲ್ಲಿ ಬಹಿರಂಗವಾಗಿ ಏನೂ ಕಡಿಮೆ ಮಾಡದೆ ನಷ್ಟ ಪಡಿಸದೆ ಇರುವಲ್ಲಿ ಸಹಾ, ಇವೆಲ್ಲಾ ವಿಧಿಸಿರುವ ನೆರೆಯವನ ಕಡೆಯ ಪ್ರೀತಿಯ ಮೇಲೆ ಭಾರವಾದ ದ್ರೋಹವಾಗಿರುತ್ತದೆ. ಈ ಪ್ರಕಾರ ಬೆಳಿಯ ತಕ್ಕ ಬಳವಳಿಕೆಗೆ ಅವಶ್ಯವಾದ ನಿರ್ಮಲತ್ವವೂ ಯಥಾರ್ಥತ್ವವೂ ನೆರೆಯವನ ಕಡೆಯ ನಮ್ಮ ಪರಸ್ಪರ ಸಂಬಂಧದಲ್ಲಿ ತಬ್ಬಿಬ್ಬು ಆಗಿ, ಸಮ ನಡಿಯದು. — ಇದಾದ ಮೇಲೆ, ಅದೇ ಕಟ್ಟಳೆಯಿಂದ ಹೃದಯದ ಎಲ್ಲಾ ಅದೈವಿಕ ಅಭಿಲಾಷೆಯೂ ಚಾ

ವವೂ ತಾನೆ, ಅದು ಕ್ರಿಯೆ ಆಗಿ ಹೋಗದಿದ್ದರೂ, ನೆರೆಯವನಿಗೆ ಅದರಿಂದ ಏನೊಂದೂ ನಷ್ಟ ಬಾರದಿದ್ದರೂ, ನಿಷೇಧಿಸಿ ಅದೆ.

**೧೨೯.** ಆವರೆ ಈ ಕಟ್ಟಳೆಯಿಂದ, ನೆರೆಯವನ ವಿಷಯದಲ್ಲಿ, ನಾವು ನಮ್ಮ ನೆರೆಯವನನ್ನು ಪೂರ್ಣ ಹೃದಯದಿಂದಲೂ, ಬಹಳ ಪ್ರೀತಿಯಿಂದಲೂ ಸಂತೋಷತೆಯಿಂದಲೂ ಎಲ್ಲಾ ಪ್ರಕಾರವಾಗಿ ಅವನ ಎಲ್ಲಾ ಸ್ವತಂತ್ರಗಳಲ್ಲಿ ಕಾಪಾಡಿ, ತನ್ನದನ್ನು ಸಮಾಧಾನವಾಗಿ ಅನುಭವಿಸುವಲ್ಲಿ ನಷ್ಟವೂ ಅಡ್ಡಿಯೂ ಆಗದ ಹಾಗೆ ಲಕ್ಷ್ಯ ಇಡ ಬೇಕೆಂಬದು ವಿಧಿಸಿ ಅದೆ. — ಆವರೆ ನಮ್ಮ ಸ್ವಂತ ವಿಷಯವಲ್ಲಿ, ಎಚ್ಚರವಾಗಿಯೂ ಪ್ರಾರ್ಥನೆಯಲ್ಲಿಯೂ ಯಾವಾಗಲೂ ಜಾಗ್ರತೆಯಾಗಿರ ಬೇಕೆಂದೂ (ಉತ್ಪ. ೪, ೭.) ಅಭಿಲಾಷೆ ಹುಟ್ಟಿಸುವ ಪ್ರತಿ ಸಮಯವನ್ನೂ ಕಾರಣವನ್ನೂ ಖಂಡಿತವಾಗಿಯೂ ಜಾಗ್ರತೆಯಾಗಿಯೂ ವರ್ಜಿಸ ಬೇಕೆಂದೂ (ಮತ್ತಾ. ೫, ೨೯. ೩೦.) (**೧೦೮,** ೪.) ನಮ್ಮ ಮಾಂಸವನ್ನು ಇಚ್ಛೆಗಳೂ ಅಭಿಲಾಷೆಗಳೂ ಸಹಿತವಾಗಿ ಶಿಲುಬೆಗೆ ಹಾಕ ಬೇಕೆಂದೂ (ಗಲಾ. ೫, ೨೪.), ಪೌರುಷದಿಂದಲೂ ಸ್ಥಿರ ಮನಸ್ಸಿನಿಂದಲೂ ಪರಿಶುದ್ಧಾತ್ಮದ ಸರ್ವಾಯುಧಗಳಿಂದ (ಎಫೆ. ೬, ೧೦. ೧೭.) (ಸಮ ನೋಡು **೨೫೭.** ೨.) ಎದ್ದು ಬರುವ ಪ್ರತಿ ಅಭಿಲಾಷೆಗೆದುರಾಗಿ ಹೋರಾಡ ಬೇಕೆಂದೂ ವಿಧಿಸಿ ಅದೆ.

**೧೩೦.** ಈ ಪ್ರಕಾರ ದಿವ್ಯ ನಿಯಮದ ಪರಿಮಾಣದಿಂದ ನಾವು ನಮ್ಮ ಹೃದಯಗಳನ್ನೂ ನಮ್ಮ ಜೀವನವನ್ನೂ ಯಥಾರ್ಥವಾಗಿ ಶೋಧಿಸಿ, ನಿಯಮ ಕರ್ತನೂ ನ್ಯಾಯಾಧಿಪತಿಯೂ ಆಗಿರುವ ದೇವರು ತನ್ನ ಕಟ್ಟಳೆಗಳನ್ನು ಹ್ಯಾಗೆ ಲಕ್ಷಿಸುತ್ತಾನೋ, ಮತ್ತು ನಾವು ಸಹಾ ಲಕ್ಷಿಸ ಬೇಕೆಂದು ಚಿತ್ತೈಸುತ್ತಾನೊ, ಆ ಪ್ರಕಾರ ಅವುಗಳನ್ನು ನೆಟ್ಟಗೆ ಲಕ್ಷಿಸಿದರೆ, — ಮತ್ತೆ ನಾವು ಯಾವ ದಿವ್ಯ ಕಟ್ಟಳೆಯನ್ನಾದರೂ, ಮುಖ್ಯವಾಗಿ ತನ್ನೊಳಗೆ ಸಂಗ್ರಹಿಸಿ ಕೊಂಡಿರುವಂಥಾ ಎಲ್ಲಾ ಕಟ್ಟಳೆಗಳ ಪ್ರಾಣದಂತೆ ಇರುವ ಮೊದಲನೆ ಕಟ್ಟಳೆಯನ್ನೂ ಸಂಪೂರ್ಣವಾಗಿ ಕೈಕೊಳ್ಳಲಿಲ್ಲವೆಂಬದೂ[1], ಕೈಕೊಳ್ಳ ಶಕ್ತರಾಗಿರುವದಿಲ್ಲವೆಂಬದೂ[2] ನಮಗೆ ಮರೆಯಾಗಿರ ಕೂಡದು. ಮತ್ತು ನಾವು ಅವುಗಳಲ್ಲಿ ಒಂದೇ ಒಂದು ಕಟ್ಟಳೆಯನ್ನು ಮೀರಿ ಇದ್ದರೂ, ಎಲ್ಲಾ ನಿಯಮಕ್ಕೆ ಅಪರಾಧಿಗಳಾದೆವು[3], ಯಾಕಂದರೆ ದೇವರನ್ನು ಪ್ರೀತಿ ಮಾಡ ಬೇಕೆಂಬ ಕಟ್ಟಳೆಯೆ ಸಕಲ ನಿಯಮವಾಗಿರುತ್ತದೆ. (**೧೯. ೪೧.**) ಆದಕಾರಣ ಪ್ರತಿ ಕಟ್ಟಳೆಯ ಅತಿಕ್ರಮಣವು ಎಲ್ಲಾ ನಿಯಮದ ಅತಿಕ್ರಮಣವಾಗಿರುತ್ತದೆ. ನಾವೆ ಎಲ್ಲಾ ನೋಡಿ ತಿಳಕೊಳ್ಳಲಿಕ್ಕೆ ಅಸಾಧ್ಯವಾಗಿರುವಷ್ಟು[4] ಅಸಂಖ್ಯಾತವಾಗಿರುವ ನ್ಯೂನತ್ವದ ಪಾಪಗಳು ಸಹಾ ದುಷ್ಕ್ರಿಯೆಗಳ ಪಾಪಗಳ ಹಾಗೆಯೆ ಶಿಕ್ಷೆಗೆ

ಒಳಗಾಗಿರುತ್ತವೆ೫). ಬಹಳ ಸರ್ತಿ ಬಲಹೀನತ್ವದಿಂದಲೂ, ಉದ್ವೇಗದಿಂದಲೂ, ತಪ್ಪಾಗಿಯೂ ಪಾಪ ಮಾಡುತ್ತೇವೆಂದು ಹೇಳುವದರಿಂದ ಪಾಪವು ಹೋಗುವದಿಲ್ಲಾ, ಯಾಕಂದರೆ ಬಲಹೀನತ್ವವೂ, ಉದ್ವೇಗವೂ, ತಪ್ಪೂ, ತಾನೆ ನಾಶಯೋಗ್ಯವಾದ ಪಾಪವಾಗಿರುತ್ತದೆ. (ಸಮ ನೋಡು ಲೇವಿ.೪, ೨. ಅಂಕೆ. ೧೫, ೨೭. ೨೮.)

೧) "ಯಾಕಂದರೆ ವ್ಯತ್ಯಾಸವಿಲ್ಲ. ಎಲ್ಲರು ಪಾಪ ಮಾಡಿ, ದೇವರ ಮಹಿಮೆಗೆ ತಪ್ಪಿ," ಹೋಗಿದ್ದಾರೆ. (ರೋಮಾ. ೩, ೨೩.) "ನೀನು ಅಕ್ರಮಗಳ ಮೇಲೆ ಕಣ್ಣಿಟ್ಟರೆ, ಯಾರು ನಿಲ್ಲುವರು, ಕರ್ತನೇ?" (ಕೀರ್ತ. ೧೩೦, ೩.) (ಕೀರ್ತ. ೧೪೩, ೨.)

೨) "ನ್ಯಾಯಪ್ರಮಾಣವು ಆತ್ಮಭಾವವಾಗಿದೆ ಎಂದು ಬಲ್ಲೆವು. ಆದರೆ ನಾನು ಪಾಪಕ್ಕೊಳಗಾಗಿ ಮಾರಲ್ಪಟ್ಟು, ಮಾಂಸ ಭಾವವಾಗಿದ್ದೇನೆ." (ರೋಮಾ. ೭, ೧೪.) "ಯಾಕಂದರೆ, ನನ್ನಲ್ಲಿ—ಅಂದರೆ, ನನ್ನ ಮಾಂಸದಲ್ಲಿ—ಒಳ್ಳೇದು ವಾಸವಾಗಿರುವದಿಲ್ಲವೆಂದು ಬಲ್ಲೆನು; ಹ್ಯಾಗಂದರೆ, ಇಚ್ಛೈಸುವದು ನನಗೆ ಸಿದ್ಧವಾಗಿದೆ; ಆದರೆ ಒಳ್ಳೇದನ್ನು ಮಾಡ ಕಾಣೆನು. ಯಾಕಂದರೆ, ಇಚ್ಛೈಸುವ ಒಳ್ಳೇದನ್ನು ಮಾಡದೆ, ಇಚ್ಛೈಸದ ಕೆಟ್ಟದ್ದನ್ನು ಮಾಡುತ್ತೇನೆ." (ರೋಮಾ. ೭, ೧೮. ೧೯.) "ಹ್ಯಾಗಂದರೆ, ಒಳ ಮನುಷ್ಯನ ಪ್ರಕಾರ ದೇವರ ನ್ಯಾಯಪ್ರಮಾಣದಲ್ಲಿ ಆನಂದ ಪಡುತ್ತೇನೆ. ಆದರೆ ನನ್ನ ಮನಸ್ಸಿನ ಪ್ರಮಾಣದ ಸಂಗಡ ಯುದ್ಧ ಮಾಡಿ, ನನ್ನ ಅಂಗಗಳಲ್ಲಿರುವ ಪಾಪದ ಪ್ರಮಾಣಕ್ಕೆ ನನ್ನನ್ನು ಸೆರೆ ಬೀಳ ಮಾಡುವ ಬೇರೆ ಪ್ರಮಾಣವನ್ನು ನನ್ನ ಅಂಗಗಳಲ್ಲಿ ನೋಡುತ್ತೇನೆ. ಅಯ್ಯೋ! ನಾನು ಸಂಕಟವುಳ್ಳ ಮನುಷ್ಯ! ಈ ಮರಣದ ಶರೀರದಿಂದ ನನ್ನನ್ನು ತಪ್ಪಿಸುವವನ್ಯಾರು?" (ರೋಮಾ. ೭, ೨೨. ೨೪.)

೩) "ಯಾವನಾದರೂ ಸಮಸ್ತ ನ್ಯಾಯಪ್ರಮಾಣವನ್ನು ಕೈಕೊಂಡು, ಒಂದರಲ್ಲಿ ತಪ್ಪಿದರೆ, ಸಮಸ್ತಕ್ಕೂ ಅಪರಾಧಿಯಾದನು." (ಯಾಕೊ. ೨, ೧೦.)

೪) "ತನ್ನ ತಪ್ಪುಗಳನ್ನು ತಿಳಿದು ಕೊಳ್ಳುವವನ್ಯಾರು? ಮರೆಯಾದವುಗಳಿಂದ ನನ್ನನ್ನು ನಿರ್ಮಲ ಮಾಡು." (ಕೀರ್ತ. ೧೯, ೧೨.)

೫) "ಒಳ್ಳೇದನ್ನು ಮಾಡ ತಿಳಿದು ಮಾಡದವನಿಗೆ ಪಾಪ ಉಂಟು." (ಯಾಕೊ. ೪, ೧೭.) (೨೧.) (ಲೂಕ. ೧೨, ೪೭.)

---

## ಕಟ್ಟಳೆಗಳ ಸಮಾಪ್ತಿ.

ದೇವರು ಈ ಸಕಲ ಕಟ್ಟಳೆಗಳ ವಿಷಯದಲ್ಲಿ ಏನು ಹೇಳುತ್ತಾನೆ?

ನಿನ್ನ ದೇವರಾದ ಯೆಹೋವನಾದ ನಾನು ರೋಷವುಳ್ಳ ದೇವರಾಗಿದ್ದೇನೆ. ನನ್ನನ್ನು ಹಗೆ ಮಾಡುವವರಲ್ಲಿ ತಂದೆಗಳ ಅಕ್ರಮವನ್ನು ಮಕ್ಕಳ ಮೇಲೆ, ಮೂರನೆ

ನಾಲ್ಕನೆ ತಲಾಂತರದ ವರೆಗೂ ವಿಚಾರಿಸುತ್ತೇನೆ. ಆದರೆ ನನ್ನನ್ನು ಪ್ರೀತಿ ಮಾಡಿ, ನನ್ನ ಆಜ್ಞೆಗಳನ್ನು ಕಾಪಾಡುವವರಿಗೆ ಸಾವಿರಗಳ ಪರ್ಯಂತ ಕೃಪೆಯನ್ನು ತೋರಿಸುತ್ತೇನೆ ಎಂದು ಹೇಳುತ್ತಾನೆ.

ಹಾಗಂದರೇನು?

ಕಟ್ಟಳೆಗಳನ್ನು ಮೀರುವವರನ್ನು ದೇವರು, ಶಿಕ್ಷಿಸುತ್ತೇನೆಂದು ಬೆದರಿಸುತ್ತಾನೆ. ಆದ್ದರಿಂದ ನಾವು ಆತನ ಕೋಪಕ್ಕೆ ಭಯಪಟ್ಟು, ಕಟ್ಟಳೆಗಳಿಗೆ ವಿಧೇಯರಾಗಿ ನಡಿಯಬೇಕು. ಕಟ್ಟಳೆಗಳನ್ನು ಕೈಕೊಳ್ಳುವವರಿಗೆ ದೇವರು ಕೃಪೆಯನ್ನೂ ಸಕಲ ಮೇಲುಗಳನ್ನೂ ವಾಗ್ದತ್ತ ಮಾಡುತ್ತಾನೆ. ಆದ್ದರಿಂದ ನಾವು ಆತನಲ್ಲಿ ಪ್ರೀತಿಯನ್ನೂ ಭರ್ವಸವನ್ನೂ ಇಟ್ಟು ಕೊಂಡು, ಆತನ ಕಟ್ಟಳೆಗಳ ಪ್ರಕಾರ ಮಾಡ ಬೇಕು.

ಪರಿಶಿ. ಬೆದರಿಕೆಯ ಮತ್ತು ವಾಗ್ದತ್ತದ ವಾಕ್ಯಗಳು ದೇವವಾಕ್ಯದಲ್ಲಿ ದೇವರ ವಿಷಯವಾದ ಕಟ್ಟಳೆಗಳ ಕೆಳಗೆಯೆ ಇರುತ್ತವೆ. ಆದರೂ ಆ ವಾಕ್ಯಗಳು ಹ್ಯಾಗೂ ಎಲ್ಲಾ ಕಟ್ಟಳೆಗಳಿಗೂ ಸೇರಿ ಅವೆ ನಿಶ್ಚಯ; ಯಾಕಂದರೆ ಮೊದಲನೆ ಎರಡು ಕಟ್ಟಳೆಗಳಲ್ಲಿ ಬೇರೆ ಎಲ್ಲಾ ಕಟ್ಟಳೆಗಳೂ ಬಂದವು; ಮತ್ತು ಮತ್ತೆ ಬರುವ ಕಟ್ಟಳೆಗಳಲ್ಲಿ ಯಾವದನ್ನು ಮೀರಿದರೂ, ಮೊದಲನೆ ಎರಡು ಕಟ್ಟಳೆಗಳನ್ನು ಮೀರಿದ ಹಾಗಾಯಿತು. (**೪೧.**) ಆದಕಾರಣ, ಲುಥರನು ಹೆಚ್ಚು ಭಾರ ಕೊಡುವದಕ್ಕೋಸ್ಕರ ಆ ವಾಕ್ಯಗಳನ್ನು ಎಲ್ಲಾ ಕಟ್ಟಳೆಗಳ ಸಮಾಪ್ತಿಯಲ್ಲಿ ಹಾಕಿದ್ದು ಪೂರ್ಣ ನ್ಯಾಯವಾಗಿರುತ್ತದೆ. ಮತ್ತು ಮುಖ್ಯವಾಗಿ ಯಾಕಂದರೆ, ಅವನು ಬೆದರಿಕೆಯ ವಾಕ್ಯಕ್ಕೂ ವಾಗ್ದತ್ತದ ವಾಕ್ಯಕ್ಕೂ ಮೊದಲನೆ ಕಟ್ಟಳೆಗಿರುವ ಸಂಬಂಧವನ್ನು ಅವುಗಳ ವಿವರದಲ್ಲಿ ಸ್ಪಷ್ಟವಾಗಿ ತೋರಿಸಿ ಕೊಟ್ಟಿದ್ದಾನಲ್ಲಾ?

**೧೩೧.** ನಿಯಮದ ಮೂಲಾಧಾರವು ದೇವರ ಪರಿಶುದ್ಧತ್ವವೆ. ದೇವರು ಪರಿಶುದ್ಧನಾಗಿರುವದರಿಂದಲೂ ಪರಿಶುದ್ಧನಾಗಿರುವ ಪ್ರಕಾರವೆಯೂ, ದೇವರ ಸ್ವರೂಪದಲ್ಲಿ ನಿರ್ಮಿಸಲ್ಪಟ್ಟ ಮನುಷ್ಯನು ಸಹಾ (**೧೮೦**) ಪರಿಶುದ್ಧನಾಗಿರ ಬೇಕು ೧).

೧) "ನೀವು ಪರಿಶುದ್ಧರಾಗಿರ ಬೇಕು; ಯಾಕಂದರೆ ನಿಮ್ಮ ದೇವರಾಗಿರುವ ಯೆಹೋವನಾದ ನಾನು ಪರಿಶುದ್ಧನೇ." (ಲೇವಿಕ. ೧೯, ೨.) "ಪರಲೋಕದಲ್ಲಿರುವ ನಿಮ್ಮ ತಂದೆಯು ಸಂಪೂರ್ಣನಾಗಿರುವ ಪ್ರಕಾರವೇ, ನೀವೂ ಸಂಪೂರ್ಣರಾಗಿರ್ರಿ." (ಮತ್ತಾ. ೫, ೪೮.) (೧ ಪೇತ್ರ. ೧, ೧೫ ೧೬.)

**೧೩೨.** ದೇವರು ನಿಯಮದಿಂದ ಕ್ರಮಿಸಿದಂಥಾ, ಆಶೀರ್ವಾದದಿಂದಲೂ ಶಿಕ್ಷೆಯಿಂದಲೂ ನಡಿಸುವಂಥಾ ಸದ್ಧರ್ಮದ ಲೋಕ ಕ್ರಮವು ನಿಯಮದ ಪ್ರತಿ ಅತಿಕ್ರಮಣದಿಂದ ತಬ್ಬಿಬ್ಬಾಗಿ ಕೆಡುತ್ತದೆ.

"ಅಯ್ಯೋ, ನೀನು ನನ್ನ ಆಜ್ಞೆಗಳಿಗೆ ಕಿವಿಗೊಟ್ಟಿದ್ದರೆ ಚನ್ನಾಗಿತ್ತು; ಆಗ ನಿನ್ನ ಸಮಾಧಾನವು ನದಿಯ ಹಾಗೆಯೂ, ನಿನ್ನ ನೀತಿಯು ಸಮುದ್ರದ ತೆರೆಗಳ ಹಾಗೆಯೂ, ಇರುತ್ತಿದ್ದವು." (ಯೆಶಾ. ೪೮, ೧೮.) "ಯಾಕಂದರೆ ದೇವರ ಕೋಪವು ಸತ್ಯವನ್ನು ಅನೀತಿಯಿಂದ ಹಿಡಿದು ಕೊಳ್ಳುವ ಮನುಷ್ಯರ ಸಕಲ ಭಕ್ತಿಹೀನತ್ವದ ಮೇಲೆಯೂ ಅನೀತಿಯ ಮೇಲೆಯೂ ಪರಲೋಕದಿಂದ ಪ್ರಕಟವಾಗುತ್ತಾ ಇದೆ." (ರೋಮಾ. ೧, ೧೮.) "ಕೋಪವೂ, ಉಗ್ರವೂ, ಕೆಟ್ಟದ್ದನ್ನು ಮಾಡುವ ಒಬ್ಬೊಬ್ಬ ಮನುಷ್ಯನ ಪ್ರಾಣದ ಮೇಲೆ . . . ಆದರೆ ಒಳ್ಳೇದನ್ನು ಮಾಡುವ ಒಬ್ಬೊಬ್ಬನಿಗೆ . . . ಮಹಿಮೆಯೂ, ಮಾನವೂ, ಸಮಾಧಾನವೂ." (ರೋಮಾ. ೨, ೯. ೧೦.)

**೧೩೩.** ಶಿಕ್ಷೆಯು ಯಾವ ವಿಷಯದಲ್ಲಿಯೂ ಮನಸೊಇಚ್ಛೆ ಅಲ್ಲಾ, ಶಿಕ್ಷೆಯೂ ಶಿಕ್ಷೆಯ ಪರಿಮಾಣವೂ ಆ ತರವಾಗಿರುವದಿಲ್ಲಾ, ಅದು ಎಲ್ಲಾ ವಿಷಯದಲ್ಲಿಯೂ ಅವಶ್ಯತ್ವ. ಯಾಕಂದರೆ ಪಾಪದಿಂದ ತಬ್ಬಿಬ್ಬಾಗುವ ಸದ್ಧರ್ಮದ ಲೋಕ ಕ್ರಮವು ಜಾಢ್ಯವಾಗಿಯೂ ಸತ್ತ ಹಾಗೆಯೂ ಇರುವದಿಲ್ಲಾ, ಅದು ದೇವರ ಪರಿಶುದ್ಧತ್ವದಿಂದ ಜರಿತವಾಗಿಯೂ ಆಧರಿಸಲ್ಪಟ್ಟದ್ದಾಗಿಯೂ ಇರುವದರಿಂದ, ಅತ್ಯಂತ ಸಜೀವವಾಗಿಯೂ ತ್ರಾಣವುಳ್ಳದ್ದಾಗಿಯೂ ಅದೆ. ಯಾಕಂದರೆ ದೇವರು ಪರಿಶುದ್ಧನಾಗಿ, ಅಂದರೆ ದೇವರಾಗಿ ಇರುವ ಮಟ್ಟಿಗೂ, ಆತನು ಸದ್ಧರ್ಮದ ಲೋಕ ಕ್ರಮವನ್ನು ನೆಟ್ಟಗೆ ನಡಿಸ ಬೇಕು, ಮತ್ತು ತಬ್ಬಿಬ್ಬು ಆದ್ದಲ್ಲಿ, ಅದನ್ನು ಪುನಃಸ್ಥಾಪಿಸ ಬೇಕು. ಆದರೆ ಪುನಃಸ್ಥಾಪನೆಯು, ಪಾಪಿಯು ಯಾವದರಿಂದ ಲೋಕ ಕ್ರಮವನ್ನು ತಬ್ಬಿಬ್ಬು ಮಾಡಿದನೊ, ಆ ಅತಿಕ್ರಮವು ಅವನ ಮೇಲೆಯೇ ತಿರಿಗಿ ಬೀಳುವದರಿಂದಲ್ಲದೆ ಆಗುವದಿಲ್ಲಾ; ಮತ್ತದೇ ಶಿಕ್ಷೆ.

"ತಪ್ಪಿ ಹೋಗ ಬೇಡಿರಿ; ದೇವರು ಹಾಸ್ಯ ಮಾಡಲ್ಪಡುವವನಲ್ಲ; ಯಾಕಂದರೆ ಮನುಷ್ಯನು ಯಾವದನ್ನು ಬಿತ್ತುವನೋ, ಅದನ್ನೇ ಕೊಯ್ಯುವನು. ಏನಂದರೆ ತನ್ನ ಮಾಂಸಕ್ಕೆ ಬಿತ್ತುವವನು ಮಾಂಸದಿಂದ ಕೊಳೆಯುವಿಕೆಯನ್ನು ಕೊಯ್ಯುವನು; ಆದರೆ ಆತ್ಮಕ್ಕೆ ಬಿತ್ತುವವನು ಆತ್ಮದಿಂದ ನಿತ್ಯ ಜೀವವನ್ನು ಕೊಯ್ಯುವನು." (ಗಲಾ. ೬, ೭. ೮.)

**೧೩೪.** ಎಲ್ಲಾ ದೈವಿಕ ಮತ್ತು ಮಾನುಷ ಶಿಕ್ಷಾನಿಯಮದ ಶ್ರೇಷ್ಠ ಸೂತ್ರವು ಪ್ರತಿಫಲ೧); ಹಾಗಂದರೆ, ಶಿಕ್ಷೆಯಿಂದ ಪಾಪಿಯ ಜೀವದಲ್ಲಿ ಆಗುವ ತಬ್ಬಿಬ್ಬು, ಪಾಪಿಯು ತನ್ನ ಪಾಪದಿಂದ ಸದ್ಧರ್ಮದ ಲೋಕ ಕ್ರಮದಲ್ಲಿ ಬರ ಮಾಡಿದ ತಬ್ಬಿಬ್ಬಿಗೆ ಸಮತೋಲವಾಗಿರ ಬೇಕು.

೧) "ಪ್ರಾಣಕ್ಕೆ ಪ್ರಾಣವನ್ನೂ, ಕಣ್ಣಿಗೆ ಕಣ್ಣನ್ನೂ, ಹಲ್ಲಿಗೆ ಹಲ್ಲನ್ನೂ, ಕೈಗೆ ಕೈಯ

ನ್ನೂ, ಕಾಲಿಗೆ ಕಾಲನ್ನೂ, ಸುಟ್ಟ ಘಾಯಕ್ಕೆ ಸುಟ್ಟ ಘಾಯವನ್ನೂ, ಕಡಿದ ಘಾಯಕ್ಕೆ ಕಡಿದ ಘಾಯವನ್ನೂ, ಹೊಡೆದ ಘಾಯಕ್ಕೆ ಹೊಡೆದ ಘಾಯವನ್ನೂ ಕೊಡ ಬೇಕು." (ಹೊರ. ೨೧, ೨೪. ೨೫.)

ಪರಿಶಿ. ಕರ್ತನು (ಮತ್ತಾ. ೫, ೩೮ ಇತ್ಯಾದಿ) ಎಲ್ಲಾ ನ್ಯಾಯದ ಹಾಗೆಯೆ, ಎಲ್ಲಾ ಅಂಕೆ ಕ್ರಮಗಳೆ ಅಸ್ತಿವಾರವಾಗಿರ ತಕ್ಕ ಪ್ರತಿಫಲ ನ್ಯಾಯವನ್ನು ಸರ್ವಥಾ ತೆಗದು ಹಾಕಲಿಲ್ಲಾ. ದೇವರ ಮತ್ತು ಸಂಸ್ಥಾನದ ಶಿಕ್ಷಾನ್ಯಾಯದಲ್ಲಿ ಅದು ಮೊದಲು ಹ್ಯಾಗೊ, ಹಾಗೆಯೆ ಮತ್ತೆ ಸಹಾ ಉಂಟು. ಕರ್ತನು ಕ್ರೈಸ್ತನಿಂದ ಮಾತ್ರವೆ, ಅವನು ಪಾಪಿಯಾದ ತನಗೆ ದೇವರಿಂದ ಪ್ರಾಪ್ತಿಯಾದಂಥಾ, ಕರುಣಿಸಿ ಕ್ಷಮಿಸುವ ಪ್ರೀತಿಯನ್ನು ಪಾಪಿಯಾದ ಸಹಮನುಷ್ಯನ ಕಡೆಗೆ ಸಹಾ ತನ್ನ ಲೆಖ್ಖಕ್ಕೆ ಅಡ್ಡಿ ಇಲ್ಲದೆ ತೋರಿಸ ಬೇಕೆಂದು ಕೇಳುತ್ತಾನೆ.

**೧೩೫.** ಆದರೆ ಪಾಪವು ಈಗಿರುವ ಭೂಸಂಬಂಧವಾದ ಲೋಕ ಕ್ರಮಕ್ಕೆ ವಿರೋಧವಾದ ದ್ರೋಹವಾಗಿರುತ್ತದೆ ಮಾತ್ರವಲ್ಲಾ, ಅದನ್ನು ಕ್ರಮಿಸಿದ ದೇವರ ಪರಿಶುದ್ಧ ಚಿತ್ತಕ್ಕೆ ಸಹಾ ವಿರೋಧವಾದದ್ದಾಗಿರುತ್ತದೆ; ಆದಕಾರಣ ಇಮ್ಮಡಿಯಾದ ಶಿಕ್ಷೆಗೆ, ಅಂದರೆ ತಾತ್ಕಾಲಿಕ ಮತ್ತು ನಿತ್ಯ ಶಿಕ್ಷೆಗೆ ಒಳಗಾಗುತ್ತದೆ. ಭೂಸಂಬಂಧವಾದ ಕ್ರಮವನ್ನು ತಬ್ಬಿಬ್ಬು ಮಾಡಿದಕ್ಕೆ ಮಾತ್ರವೆ ಭೂಸಂಬಂಧವಾದ ಶಿಕ್ಷೆಗಳು ಸಮತೋಲವಾಗಿರ ಬಹುದು, ಆದರೆ ನಿತ್ಯವಾದ ಅನಂತ ದೇವರಿಗೆ ವಿರೋಧವಾದ ದ್ರೋಹಕ್ಕೆ ಹಾಗಾಗ ಕೂಡದು. ನೆರೆಯವನ ಮೇಲೆ ತಂದ ಕೊರತೆಗಾಗಿ ಹೇಳುವ ಪ್ರಕಾರ, ಇಲ್ಲಿ ಸಹಾ "ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು" ಅಂತಾ ಹೇಳಲಿಕ್ಕೆ ಆಗುವದಿಲ್ಲಾ; ಯಾಕಂದರೆ ನೋಯಿಸಿದವನು ಬಡ ಅಂತ್ಯವುಳ್ಳ ನಿರ್ಮಾಣವಾಗಿರುತ್ತಾನೆ, ಆದರೆ ನೋಯಿಸಲ್ಪಟ್ಟವನು ನಿತ್ಯ ಅನಂತ ನಿರ್ಮಾಣಿಯಾದ ಸ್ವಾಮಿ. ಈಗ ಈ ಲೆಖ್ಖದಲ್ಲಿ ಪಾಪಕ್ಕೆ ಪಾಪಿಯು ಎಂದಿಗೂ ಸಮತೋಲ ಇಟ್ಟು ವಿಮೋಚಿಸ ಕೂಡದಾದ್ದರಿಂದ, ಅದರ ಮೇಲೆ ನಿತ್ಯ ಶಿಕ್ಷೆಯು ಅವಶ್ಯವಾಗಿ ನಿಲ್ಲ ಬೇಕು.

**೧೩೬.** ಮನುಷ್ಯರು ಪಾಪವನ್ನು ಪಾಪವೆಂದು ಭದ್ರವಾಗಿ ನಿಶ್ಚಯಿಸ ಕೂಡುವ ಮಟ್ಟಿಗೆ, ತಾತ್ಕಾಲಿಕ ಶಿಕ್ಷೆಯನ್ನು ಕೊಡುವದಕ್ಕೆ ದೇವರು ಸರ್ಕಾರದವರಿಗೆ ಸ್ವತಂತ್ರ ಕೊಟ್ಟಿದ್ದಾನೆ. (೮೯) ಆದರೆ ಭೂಮಿಯಲ್ಲಿರುವ ಸರ್ಕಾರದ ಕಣ್ಣೂ ಕೈಯೂ ಮುಟ್ಟದಿರುವಲ್ಲಿ ದೇವರು ತಾನೆ ತಾತ್ಕಾಲಿಕ ಶಿಕ್ಷೆಯನ್ನು ಪೂರೈಸಿ, ಪಾಪಿಯನ್ನು ನಿಷ್ಫಲತೆಯಿಂದಲೂ, ಅಸಮಾಧಾನದಿಂದಲೂ, ಮನಸ್ಸಾಕ್ಷಿ ಪೀಡೆಯಿಂದಲೂ, ನಿರಾಶೆಯಿಂದಲೂ ಬೆನ್ನಟ್ಟಿ, ಆಸ್ತಿಗೂ ಶರೀರಕ್ಕೂ ನಷ್ಟವನ್ನೂ, ವ್ಯಾಧಿಯನ್ನೂ, ಕಡೆಯಲ್ಲಿ ಎಲ್ಲಾ ಭೂಶಿಕ್ಷೆಯ ಸಂಪೂ

ಕೀಯೂ ಅಂತ್ಯವೂ ಆಗಿರುವ ಕೆಟ್ಟ ಅಕಾಲ ಮರಣವನ್ನೂ ಕಳುಹಿಸುತ್ತಾನೆ. ದೇವರ ಈ ಪ್ರಕಾರದ ಶಿಕ್ಷೆಗಳು ಬಹಳ ಸರ್ತಿ ಮರೆಯಾಗಿಯೂ ಆಶ್ಚರ್ಯಕರವಾಗಿಯೂ ಇದ್ದು, ಬಹಳ ಸರ್ತಿ ಆತನ ಅಶೋಧ್ಯ ಜ್ಞಾನದ ಪ್ರಕಾರ ಬಹು ಕಾಲ ತಡ ಮಾಡುತ್ತವೆ, ಆದರೂ ಮತ್ತೆ ಬಾರದೆ ನಿಲ್ಲವು, ನಿಶ್ಚಯವಾಗಿ ಬರುವವು.

**೧೩೭.** ಶಿಕ್ಷೆಯ ನಿಜಪ್ರಯೋಜನವು ನಿಯಮದ ಪ್ರಾಯಶ್ಚಿತ್ತ. ಅಥವಾ ಲೋಕ ಕ್ರಮದ ಪವಿತ್ರೀಕರಣ. ತ್ರಾಡಣೆಯೂ ಒಳ್ಳೆಯವರಾಗ ಮಾಡೋಣವೂ ಶಿಕ್ಷೆಯ ಒಂದೇ ಪ್ರಯೋಜನವೆಂದು ಆಲೋಚಿಸುವದು ಪೂರ್ಣ ಅಸಮ. ಒಳ್ಳೆಯವರಾಗುವದು ಅಸಾಧ್ಯವಾಗಿರುವಲ್ಲಿ ಸಹಾ ಪಾಪಕ್ಕೆ ಹ್ಯಾಗೂ ಶಿಕ್ಷೆ ಬರ ಬೇಕು. ಆದರೂ ಶಿಕ್ಷೆಯು ತ್ರಾಡಣೆಯಾಗಿ ಕಂಡು ಬಂದು, ಒಳ್ಳೆಯವರಾಗ ಮಾಡುವದಕ್ಕೆ ಪ್ರಯೋಗಿಸಲ್ಪಟ್ಟರೆ, ಅದು ಶಿಕ್ಷೆಯ ಸ್ವಭಾವದಿಂದ ಆಗುವದಿಲ್ಲಾ, ದೇವರು ಅನಂತ ಕರುಣೆಯಿಂದ ಪಾಪಿಯನ್ನು ತನ್ನೊಳಗೆ ಹಾಳಾಗಿ ಹೋಗ ಬಿಡದೆ, ಅವನನ್ನು ರಕ್ಷಿಸುವದಕ್ಕೋಸ್ಕರ ತ್ರಾಡಿಸಿ ಬೆಳಿಸುವದೆ ಕಾರಣ. ಆದರೆ ಬೆಳಿಸುವಂಥಾದ್ದು ತೀರಿದ ಕೂಡಲೆ, ಶಿಕ್ಷೆಯ ಈ ಪ್ರಯೋಜನ ಸಹಾ ತೀರಿತು; ಮತ್ತೆ ಶಿಕ್ಷೆಯ ಪ್ರಯೋಜನವು ಶಿಕ್ಷೆ ಕೊಡ ಬೇಕೆಂಬದು ಮಾತ್ರವೆ.

**೧೩೮.** ಪಾಪದ ಅತಿ ಭಾರವಾದ ಶಾಪವು ಯಾವದಂದರೆ: ಅದು ದಿನ ಹೋದಷ್ಟಕ್ಕೆ ಮನುಷ್ಯನ ಚಿತ್ತವನ್ನು ದಾಸತ್ವಕ್ಕೆ ಒಳಗಾಗ ಮಾಡಿ[೧], ತಿಳುವಿಕೆಯನ್ನು ಕುರುಡಾಗ ಗೊಳಿಸುತ್ತದೆ. ಈ ಪ್ರಕಾರ ಮನುಷ್ಯನು ಕಡೆಯಲ್ಲಿ ರಕ್ಷಣೆಯ ಅಭಿಲಾಷೆಯನ್ನೂ, ಅದರ ಸಂಗಡಲೆ ಅದಕ್ಕೆ ಬೇಕಾದ ಗ್ರಹಣ ಶಕ್ತಿಯನ್ನೂ, ಕ್ರಿಸ್ತನಲ್ಲಿ ಮುಂದಿಟ್ಟ ರಕ್ಷಣೆಯನ್ನು ಸ್ವೀಕರಿಸ ತಕ್ಕ ಯೋಗ್ಯತೆಯನ್ನೂ ಸಹಾ ಕಳಕೊಳ್ಳುತ್ತಾನೆ, ಮತ್ತು ಹೀಗೆ ಕಡೆಯಲ್ಲಿ ರಕ್ಷಣಾ ಹೀನನಾಗಿ ನಿತ್ಯ ನಾಶಕ್ಕೆ ಪೂರ್ಣ ಪಾತ್ರನಾಗುತ್ತಾನೆ.

೧) "ಪಾಪ ಮಾಡುವವರೆಲ್ಲರೂ ಪಾಪಕ್ಕೆ ದಾಸರಾಗಿದ್ದಾರೆ." (ಯೋಹಾ. ೮, ೩೪.) (ರೋಮಾ. ೬, ೧೬. ೨೦. ೨ ತಿಮೊ. ೩, ೧೩.)

ಪರಿಶಿ. ಪಾಪದ ಎಲ್ಲಾ ಫಲಗಳನ್ನೂ ಶಿಕ್ಷೆಗಳನ್ನೂ, ಅಂತರಂಗದವುಗಳನ್ನೂ ಬಹಿರಂಗದವುಗಳನ್ನೂ, ಶರೀರದವುಗಳನ್ನೂ ಆತ್ಮದವುಗಳನ್ನೂ, ತಾತ್ಕಾಲಿಕವಾದವುಗಳನ್ನೂ ನಿತ್ಯವಾದವುಗಳನ್ನೂ, ಪರಿಶುದ್ಧ ಬರಹವು "ಮರಣ" ಎಂಬ ಒಂದೇ ಶಬ್ದದಲ್ಲಿ ಕೂಡಿಸಿ ಹೇಳುತ್ತದೆ. (ರೋಮಾ. ೬, ೨೩.) ಪಾಪದ ಸಂಬಳವು ಮರಣವು. (ಸಮ ನೋಡು ಉತ್ಪ. ೨, ೧೭. ರೋಮಾ. ೫, ೧೨.) (**೧೯೮**, ೨.)

**೧೩೯.** ದೇವರು ನಿಯಮದ ಪೂರೈಸುವಿಕೆಯ ಮೇಲೆ ಇಟ್ಟ ಆಶೀರ್ವಾದವೂ, ಅದನ್ನು ಮೀರುವವನ ಮೇಲೆ ಬರುವ ಶಾಪವೂ ಒಂದೇ ಪ್ರಕಾರವಲ್ಲಾ; ಆಶೀರ್ವಾದವು ದಾನವಾಗಿರುತ್ತದೆ, ಆದರೆ ಶಾಪವು ಸಂಬಳ. ಅವಶ್ಯವಾಗಿರುವದಕ್ಕಿಂತ ಹೆಚ್ಚು ಒಳ್ಳೇದನ್ನು ಮಾಡುವಲ್ಲಿ ಮಾತ್ರವೆ ಆಶೀರ್ವಾದವು ಸಂಬಳವಾಗಿರ ಬಹುದು.

"ನಿಮಗೆ ಆಜ್ಞಾಪಿಸಿದವುಗಳನ್ನೆಲ್ಲಾ ಮಾಡಿದ ಮೇಲೆ, ನಿಷ್ಪ್ರಯೋಜಕರಾದ ದಾಸರಾಗಿದ್ದೇವೆ; ಯಾಕಂದರೆ ಮಾಡ ಬೇಕಾದದ್ದನ್ನು ಮಾಡಿದ್ದೇವೆಂದು, ಹೇಳಿರಿ." (ಲೂಕ. ೧೭, ೧೦.)

**೧೪೦.** ನಿಯಮದಲ್ಲಿ ಹೇಳಿರುವ ಆಶೀರ್ವಾದದಲ್ಲಿ ತಾತ್ಕಾಲಿಕವಾದ ಮತ್ತು ನಿತ್ಯವಾದ ಕ್ಷೇಮವು ಸೇರಿತು[೧]. ದೇವರ ವಾಕ್ಯವು, ನಿಯಮವನ್ನು ನಂಬಿಕೆಯಿಂದಲೂ ಪ್ರಾಮಾಣಿಕನಾಗಿಯೂ ಕೈಕೊಳ್ಳುವವನಿಗೆ ಇಹಜೀವದಲ್ಲಿರುವಾಗ ಅವನ ಕೆಲಸಗಳಲ್ಲಿ ಆಶೀರ್ವಾದವನ್ನೂ ಅಭಿವೃದ್ಧಿಯನ್ನೂ (ಕೀರ್ತ. ೧೨೭.) ಮನೆಯಲ್ಲಿ ಕ್ಷೇಮವನ್ನೂ ಸಮಾಧಾನವನ್ನೂ (ಕೀರ್ತ. ೧೨೮.) ದೇವರ ಕೃಪೆಯು ಸಾಕೆಂದನ್ನುವ ತೃಪ್ತಿಯಾದ ಹೃದಯವನ್ನೂ (೨ಕೊರಿ. ೧೨, ೯.) "ದೇವರನ್ನು ಪ್ರೀತಿ ಮಾಡುವವರಿಗೆ ಮೇಲಿಗಾಗಿ ಎಲ್ಲವುಗಳು ಕೈಕೂಡಿ ಬರುತ್ತವೆಂದು" (ರೋಮಾ. ೮, ೨೮.) ತಿಳಿದಿರುವ ಸಂತೋಷವುಳ್ಳ ಆತ್ಮವನ್ನೂ, ಮತ್ತು ಪರಜೀವದಲ್ಲಿ ನಿತ್ಯ ಆನಂದವನ್ನೂ ಮಹಿಮೆಯನ್ನೂ[೨], ವಾಗ್ದತ್ತ ಮಾಡುತ್ತದೆ.

೧) "ಭಕ್ತಿಯು ಎಲ್ಲಕ್ಕೂ ಪ್ರಯೋಜನವಾಗಿದೆ. ಅದಕ್ಕೆ ಇಹ ಪರ ಜೀವಗಳ ವಾಗ್ದತ್ತ ಉಂಟು." (೧ ತಿಮೊ. ೪, ೮.)

೨) "ಅವುಗಳನ್ನು ಯಾವನಾದರೂ ಮಾಡಿದರೆ, ಅವುಗಳಿಂದ ಬದುಕುವನು." (ಲೇವಿ. ೧೮, ೫.) "ನಾನು ನಿತ್ಯ ಜೀವವನ್ನು ಹೊಂದುವ ಹಾಗೆ ಒಳ್ಳೇದೇನು ಮಾಡಬೇಕು? . . ಜೀವದಲ್ಲಿ ಪ್ರವೇಶಿಸ ಬೇಕಾದರೆ ಕಟ್ಟಳೆಗಳನ್ನು ಕೈಕೊಳ್ಳು." (ಮತ್ತಾ. ೧೯, ೧೬. ೧೭.) "ಮರಣದ ಪರ್ಯಂತರ ನಂಬಿಕೆಯಾಗಿರು; ಆಗ ಜೀವದ ಕಿರೀಟವನ್ನು ನಿನಗೆ ಕೊಡುವೆನು." (ಪ್ರಕ. ೨, ೧೦.)

**೧೪೧.** ಆದರೆ ನಾವೆಲ್ಲರೂ (**೧೩೦**) ಪಾಪಿಗಳಾಗಿದ್ದು ದೇವರ ಮುಂದೆ ಎಲ್ಲಾ ನಿಯಮಕ್ಕೆ ಅಪರಾಧಿಗಳಾಗಿರಲಾಗಿ, ನಾವು ಸ್ವಂತ ತ್ರಾಣದಿಂದಲೂ ಸುಗುಣದಿಂದಲೂ ಸಂಪಾದಿಸ ಬೇಕಾದರೆ, ನಿಯಮದ ನಿತ್ಯ ಆಶೀರ್ವಾದವನ್ನು ಪಡಕೊಳ್ಳ ಕೂಡದು. ಅದ್ಯೋಗಿ, ನಾವು ನಿಯಮವನ್ನು ಎಷ್ಟು ಪ್ರಯಾಸದಿಂದ ಪೂರೈಸ ಬೇಕೆಂದು ಪ್ರಯತ್ನ ಮಾ

ಪಿದರೂ, ಅದರ ಶಾಪವು (ದೇವರ ನ್ಯಾಯಶೀರ್ವಿಕೆಯಲ್ಲಿ ವಿನಾಶಯೋಗ್ಯತೆಯು) ನಮ್ಮ ಮೇಲೆ ನೆಲೆಯಾಗಿರುವದು [೧]. ಯಾಕಂದರೆ ನಿಯಮುವನ್ನು ಪೂರೈಸದೆ ಅದನ್ನು ಪೂರ್ಣವಾಗಿಯೂ ಕೂಲಂಕುಶವಾಗಿಯೂ ಪೂರೈಸಲಿಕ್ಕೆ ನಿಜವಾಗಿಯೂ ಯಥಾರ್ಥ ಮನಸ್ಸಿನಿಂದಲೂ ಪ್ರಯತ್ನ ಮಾಡುವದರಿಂದ ಮಾತ್ರ, ನಿಯಮುದ ಮತ್ತು ದಿವ್ಯ ಪರಿಶುದ್ಧತ್ವದ ಅಚಂಚಲವಾದ ನಿತ್ಯ ವಿಧಿಗಳಿಗೆ ಸಂತೃಪ್ತಿ ಆಗದು.

೧) "ಯಾಕಂದರೆ ನ್ಯಾಯಪ್ರಮಾಣದ ಕ್ರಿಯೆಗಳವರಷ್ಟು ಶಾಪಕ್ಕೊಳಗಾಗಿದ್ದಾರೆ;" ಇತ್ಯಾದಿ. (ಗಲಾ. ೩, ೧೦. ೧೧.) (ಸಮ ನೋಡು **೧೫**, ೨.)

**೧೪೨.** ಆದರೂ ಆ ಪ್ರಕಾರ ನಿಯಮುವನ್ನು ಮನಸ್ಸಾಕ್ಷಿಪುರಸ್ಸರವಾಗಿ ಪೂರೈಸುವದಕ್ಕೆ ಸತ್ಯವಾಗಿಯೂ ನಿಜವಾಗಿಯೂ ಪ್ರಯತ್ನ ಮಾಡುವದು ಸಹಾ ನಿತ್ಯ ಜೀವಕ್ಕೆ ಸಿದ್ಧವಾಗುವದಕ್ಕೆ ಐಶ್ವರ್ಯವಾದ ಆಶೀರ್ವಾದವೂ ಫಲವೂ ಇಲ್ಲದೆ ಹೋಗದು; ಯಾಕಂದರೆ, ಅದು ತಾನೆ ಮನುಷ್ಯನನ್ನು ನೀತಿವಂತನಾಗಲೂ ಭಾಗ್ಯವುಳ್ಳವನಾಗಲೂ ಮಾಡಲಿಕ್ಕೆ ಆಗದೆ ಹೋದರೂ, ಅದರಿಂದ ಅವನ ಹೃದಯವು ದಿವ್ಯ ಕೃಪೆಯ ಮಹಾ ಅಭಿಲಾಷೆಗೂ ಅದರ ಸ್ವೀಕಾರಯೋಗ್ಯತೆಗೂ ಸಿದ್ಧವಾಗುತ್ತದೆ.

**೧೪೩.** ನಿಯಮುದ ತಾತ್ಕಾಲಿಕ ಆಶೀರ್ವಾದದ ವಿಷಯವು ಬೇರೆ ತರದ್ದಾಗಿರುತ್ತದೆ. (**೧೪೦.**) ಇದು ಹ್ಯಾಗೂ ಸ್ವಾಭಾವಿಕ ಮನುಷ್ಯನ ಯಥಾನುಶಕ್ತಿಯಾದ ಯಥಾರ್ಥ ಮತ್ತು ನಿಜವಾದ ಪ್ರಯತ್ನಕ್ಕೆ ಸಹಾ ದೊರಕ ಬಹುದು. ಹ್ಯಾಗಂದರೆ ಈ ಆಶೀರ್ವಾದವು ಎಲ್ಲಾ ಭೂಸಂಬಂಧದ ಜೀವನ ಪ್ರಕಾರವೆ ನಿತ್ಯ ಜೀವಕ್ಕೆ ಬೆಳೆಯ ಬೇಕೆಂಬದಕ್ಕೆ ಒಳಗಾಗಿರುತ್ತದಷ್ಟೇ. ಅದರ ಹೊರ್ತು, ನಿಯಮುದ ತಾತ್ಕಾಲಿಕ ಆಶೀರ್ವಾದವು, ಅದರ ತಾತ್ಕಾಲಿಕ ಶಾಪದ ಹಾಗೆಯೆ, ಭೂಸಂಬಂಧವಾದ ತಾತ್ಕಾಲಿಕ ಲೋಕ ಕ್ರಮುವನ್ನು ಸಮವಾಗಿ ನಡಿಸುವದರಲ್ಲಿಯೂ ಬಲ ಪಡಿಸುವದರಲ್ಲಿಯೂ ಬಹಳ ಸಹಾಯವಾಗಿರುತ್ತದೆ.

**೧೪೪.** ಇದು ಸಹಾ ದೇವಭಕ್ತಿಯ ಆಶೀರ್ವಾದಕ್ಕೂ, ದೈವಹೀನತ್ವದ ಶಾಪಕ್ಕೂ ಸೇರಿರುತ್ತದೆ, ಏನಂದರೆ, ಈ ಎರಡೂ ಸ್ವಾಭಾವಿಕ ಗತಿಗೆ ಅನುಕೂಲವಾಗಿ, ಅಂತರ್ಯದ, ಮರೆಯಾಗಿದ್ದರೂ ಅವಶ್ಯವಾದ (ಹುಟ್ಟು, ಮಾದರಿ, ಬೆಳಿಸೋಣ ಮೊದಲಾದವುಗಳಲ್ಲಿರುವ) ಸಂಬಂಧದ ಪ್ರಕಾರ ಪೂರ್ಣ ಕುಲಗಳ ಮೇಲೆಯೂ ಸಂತತಿಗಳ ಮೇಲೆಯೂ ಬರುತ್ತವೆ (ಉದಾಹರಣೆ: ಕುಲಪಾಪಗಳು, ಕುಲರೋಗಗಳು ಇತ್ಯಾದಿ). ಆದಕಾರಣ ದೇವರು ತನ್ನನ್ನು ಹಗೆ ಮಾಡುವವರಲ್ಲಿ ತಂದೆಗಳ ದುಷ್ಕೃತ್ಯವನ್ನು ಮೂರ

ನೆ ನಾಲ್ಕನೆ ತಲಾಂತರ ಪರ್ಯಂತ ವಿಚಾರಿಸುವೆನೆಂದು, ಬೆದರಿಸುತ್ತಾನೆ, ಮತ್ತು ತನ್ನನ್ನು ಪ್ರೀತಿ ಮಾಡಿ ತನ್ನ ಕಟ್ಟಳೆಗಳನ್ನು ಕೈಕೊಳ್ಳುವವರ ದೆಶೆಯಿಂದ ಸಹಸ್ರ ಸಹಸ್ರಗಳಿಗೆ ಕೃಪೆಯನ್ನು ಮಾಡುತ್ತೇನೆಂದು, ವಾಗ್ದತ್ತ ಮಾಡುತ್ತಾನೆ. ಈ ಬೆದರಿಕೆಯೂ ವಾಗ್ದತ್ತವೂ ನಮಗೋಸ್ಕರ ಮಾತ್ರವಲ್ಲಾ, ನಮ್ಮ ಮಾಂಸವೂ ರಕ್ತವೂ ಆಗಿರುವ ನಮ್ಮವರಿಗೋಸ್ಕರ ಸಹಾ ಪಾಪವನ್ನು ವರ್ಜಿಸಲಿಕ್ಕೆ ಪ್ರೇರೇಪಿಸುವಾಗ, ಮತ್ತೊಂದು ಕಡೆಯಲ್ಲಿ ಕೇಡಿನ ಸ್ವಾಭಾವಿಕ ಗತಿಯನ್ನು ಬಹಳವಾಗಿ ಸಂಕೋಚಿಸುವದರಿಂದ, ಆಶೀರ್ವಾದವನ್ನು ತುಂಬಿದ ಕೈಗಳಿಂದ ಹಂಚಿ, ಅದನ್ನು ಅಗಲವಾಗಿಯೂ (ಸಹಮನುಷ್ಯರ ಮೇಲೆ) ಉದ್ದವಾಗಿಯೂ (ಮತ್ತೆ ಹುಟ್ಟುವ ಮನುಷ್ಯರ ಮೇಲೆ) ಗತಿ ಇಲ್ಲದೆ ಹರಿಯ ಮಾಡುವ ದೇವರ ಕರುಣೆಯನ್ನು ಸಹಾ ನಮಗೆ ಪ್ರಕಟ ಮಾಡ ತಕ್ಕದ್ದು.

ಪರಿಶಿ. ಇದು ಸಹಾ (ವಿವೋಚನೆಯ ಸಂಕಲ್ಪದಲ್ಲಿ ಆಧಾರಗೊಂಡಿರುವ) ದೇವರ ಕರುಣೆಯೆ ಸರಿ; ಏನಂದರೆ: ಮನುಷ್ಯನು ಉಪಾಯವಿಲ್ಲದ ಹಾಗೆ ಕೇಡಿನ ಸ್ವಾಭಾವಿಕ ಗತಿಯಲ್ಲಿ ದೊಬ್ಬಿ ಇರುವದಿಲ್ಲಾ, ಅವನು ಮಾನಸಾಂತರದಿಂದಲೂ ವಿಶ್ವಾಸದಿಂದಲೂ ಅದರೊಳಗಿಂದ ಹೊರಗೆ ಬರ ಬಹುದು. ಹೀಗಾಗಿ ಯಾರೂ ತಂದೆಗಳಿಂದ ಕೇಡು ತನ್ನ ಮೇಲೆ ಬಂತು ಎಂದು ನೆವನ ಹೇಳಲಿಕ್ಕೂ, ಅಥವಾ ಉಪಾಯವೇನೂ ಇಲ್ಲವಲ್ಲಾ ಎಂದು ದುಃಖ ಪಡಲಿಕ್ಕೂ ಕಾರಣವಿಲ್ಲಾ. (ಸಮ ನೋಡು ದ್ವಿತಿ. ೨೪, ೧೬. ಮತ್ತು ಎಜೇಕಿ. ೧೮, ೨೦.)

**೧೪೫.** ನಿಯಮವು ಸಂಗಡ ತರುವ ಆಶೀರ್ವಾದದಿಂದ ನಮ್ಮ ಪಾಪತ್ವಕ್ಕಾಗಿ (**೧೨೦.**) ನಮಗೆ ನಿತ್ಯ ಜೀವವನ್ನೂ ಆನಂದವನ್ನೂ ಕೊಡ ಕೂಡದಾಗಿರಲಾಗಿ (**೧೪೨.**), ಅದು ಸಂಗಡ ತರುವ ಶಾಪದಿಂದ, ದೇವರ ಕೃಪೆಯುಳ್ಳ ಚಿತ್ತದ ಪ್ರಕಾರ ಭಾಗ್ಯಕ್ಕೆ ಮಾರ್ಗವನ್ನು ಸರಾಗ ಮಾಡ ತಕ್ಕದ್ದು. ಹ್ಯಾಗಂದರೆ, ಅದು ನಮ್ಮನ್ನು ಸ್ವಾಭಾವಿಕ ಪಾಪ ಭಾವದ ಮತ್ತು ವಿನಾಶಯೋಗ್ಯತೆಯ ಚುರುಕಾದ ತಿಳುವಿಕೆಗೆ ತರುತ್ತಿರಲಾಗಿ[೧], ನಾವು ವಿಮೋಚನೆಯನ್ನು ಬಹಳವಾಗಿ ಅಪೇಕ್ಷಿಸಲಿಕ್ಕೆ ಕಲಿಯ ತಕ್ಕದ್ದು[೨], ಮತ್ತು ಎಲ್ಲಾ ಮನುಷ್ಯರಿಗೆ ಯೇಸು ಕ್ರಿಸ್ತನ ಮೇಲಿನ ವಿಶ್ವಾಸದಿಂದ ಕೊಟ್ಟಿರುವಂಥಾ, ಕ್ರೈಸ್ತ ಮಕ್ಕಳಾದ ನಮಗೆ ಸ್ನಾನದಲ್ಲಿಯೆ ಅನುಕೂಲಿಸಿರುವಂಥಾ ವಿಮೋಚನೆಯನ್ನು ಮನಃಪೂರ್ವಕವಾಗಿಯೂ ಸಂತೋಷತೆಯಿಂದಲೂ ಹಿಡ ಕೊಂಡು ಪ್ರಾಣ ರಕ್ಷಣೆಗೆ ಪ್ರಯೋಗಿಸ ಬೇಕು[೩].

೧) "ನ್ಯಾಯಪ್ರಮಾಣದಿಂದ ಪಾಪದ ತಿಳುವಿಕೆಯು ಆಗುತ್ತದೆ." (ರೋಮಾ. ೩, ೨೦.)

೨) "ಹೀಗಿರಲಾಗಿ ನಾವು ವಿಶ್ವಾಸದಿಂದ ನೀತಿನಿರ್ಣಯ ಪಡುವ ಹಾಗೆ, ನ್ಯಾಯ ಪ್ರಮಾಣವು ನಮ್ಮನ್ನು ಕ್ರಿಸ್ತನಿಗೆ ತರುವ ಉಪಾಧ್ಯನಾಗಿತ್ತು." (ಗಲಾ. ೩, ೨೪.)

೩) "ಕ್ರಿಸ್ತನು ವಿಶ್ವಾಸಿಸುವವರೆಲ್ಲರಿಗೆ ನೀತಿಗೋಸ್ಕರ ನ್ಯಾಯಪ್ರಮಾಣದ ಅಂತ್ಯ ವಾಗಿದ್ದಾನೆ." (ರೋಮಾ. ೧೦, ೪.)

ಪರಿಶಿ. ನಿಯಮದ ಶಾಪವು ಅದರ ಬೆಳಿಸುವ ಪ್ರಯೋಜನಕ್ಕೆ ಸರಿಯಾಗಿ ನಮ್ಮ ನ್ನು ವಿಮೋಚನೆಯ ಸ್ವೀಕಾರಕ್ಕೆ ತಂದ ಮೇಲೆ, ವಿಮೋಚನೆಯ ಹೊಸ ಪ್ರಾಣದಿಂದಲೆ ಸಮವಾಗಿ ಪೂರೈಸಲಾಗುವ ನಿಯಮದ ಆಶೀರ್ವಾದ ಸಹಾ ನಮ್ಮಲ್ಲಿ ತನ್ನ ಸಂಪೂರ್ಣ ತೆಯನ್ನೂ ಪ್ರಾಣವನ್ನೂ ಸತ್ಯತ್ವವನ್ನೂ ಇಹದಲ್ಲಿಯೂ ಪರದಲ್ಲಿಯೂ ಪ್ರಕಟ ಮಾಡು ವದು. (೨೮೧.)

# ಎರಡನೆ ಭಾಗ.

## ಕ್ರೈಸ್ತ ವಿಶ್ವಾಸವನ್ನು ಕುರಿತು.

**೧೪೬.** ಮೊದಲನೆ ಭಾಗವು. ನಾವೆಲ್ಲರೂ ಪಾಪಿಗಳಾಗಿರಲಾಗಿ, ನಮಗೆ ಶಾಪವ ನ್ನೂ ಶಿಕ್ಷೆಯನ್ನೂ ಸಾರ ಬೇಕಲ್ಲದೆ, ರಕ್ಷಣೆಯ ವಿಷಯದಲ್ಲಿ ಏನೂ ಗೊತ್ತು ಮಾಡದೆ ಇರುವದರಿಂದ, ಈ ಮೊದಲನೆ ಭಾಗದ ಹೊರ್ತು ಬೇರೇನೂ ಇಲ್ಲದಿದ್ದರೆ, ನಿರಾಶೆ ಮಾ ತ್ರವೆ ನಮ್ಮ ಗತಿ ಆಗಿ ಹೋಗುತಿತ್ತು. ಆದರೆ, ಪಾಪಿಯು ತಾತ್ಕಾಲಿಕವಾಗಿಯೂ ನಿ ತ್ಯವಾಗಿಯೂ ಸಾಯ ಬೇಕೆಂದು ದೇವರು ಇಚ್ಛೈಸುವದಿಲ್ಲಾ೧), ಆತನು ಅನಂತ ಕರು ಣೆಯಿಂದ ಸಂಪೂರ್ಣ ಬಿಡುಗಡೆಯನ್ನು ನಿಶ್ಚಯಿಸಿ, ಉಂಟು ಮಾಡಿದ್ದಾನೆ. ಆದಕಾ ರಣ, ನಮಗೆ ಮರಣವನ್ನೂ ವಿನಾಶವನ್ನೂ ಸಾರಿದ ಮೊದಲನೆ ಭಾಗಕ್ಕೆ ತಗಲಿ, ಎರಡ ನೆದಾಗಿ, ನಾವು ತ್ರಿಯೇಕನಾದ ದೇವರಲ್ಲಿಡುವ ವಿಶ್ವಾಸದಿಂದ ಈ ವಿನಾಶಕ್ಕೆ ತಪ್ಪಿಸಿ ಕೊಂಡು, ನಿತ್ಯ ಆನಂದದ ಬಾಧ್ಯಸ್ಥರಾಗುವದು ಹ್ಯಾಗೆಂಬ ಭಾಗವು ಬರುತ್ತದೆ.

೧) "ಕರ್ತನಾದ ಯೆಹೋವ ಅನ್ನುತ್ತಾನೆ—ನನ್ನ ಜೀವದಾಣೆ, ನಾನು ದುಷ್ಟನ ಮರಣದಲ್ಲಿ ಸಂತೋಷ ಪಡುವದಿಲ್ಲ; ದುಷ್ಟನು ತನ್ನ ಮಾರ್ಗವನ್ನು ಬಿಟ್ಟು ತಿರಿಗಿ ಬ ದುಕುವದರಲ್ಲಿಯೇ ನನಗೆ ಸಂತೋಷ ಉಂಟು." (ಎಜೇಕಿ. ೩೩, ೧೧.)

ಪರಿಶಿ. ಎರಡನೆ ಭಾಗದ ಆಧಾರವು ಅಪೊಸ್ತೊಲಿಕವೆಂದು ಹೆಸರ್ಗೊಂಡ ವಿಶ್ವಾಸ ಪ್ರಮಾಣವು. (೬. ಪರಿಶಿ.) ಇದರಲ್ಲಿ ಮೂರು ವಾಕ್ಯಗಳಾಗಿ ಕ್ರೈಸ್ತ ವಿಶ್ವಾಸದ ಸಾರವನ್ನು

ಮುಂದಿಟ್ಟು, ತಂದೆ, ಮಗ ಆತ್ಮ ಆಗಿರುವ ತ್ರಿಯೇಕ ದೇವರು ನಮ್ಮಲ್ಲಿಯೂ ನಮಗೋಸ್ಕರವೂ ನಮ್ಮ ಆನಂದೀಕರಣಕ್ಕಾಗಿಯೂ ಬಿಡುಗಡೆಗಾಗಿಯೂ ಏನು ಮಾಡಿದ್ದಾನೆ, ಮತ್ತು ಇನ್ನೂ ಏನು ಮಾಡುವನು ಎಂಬದು ಬೋಧಿಸಿ ಅದೆ. ಅದರ ವಿಷಯದಲ್ಲಿ ಔಗುಸ್ತೀನನು ಹೇಳುವದೇನಂದರೆ: ವಿಶ್ವಾಸಪ್ರಮಾಣವು ಕ್ಲುಪ್ತ ಮತ್ತು ಘನ ವಿಶ್ವಾಸ ಸೂತ್ರವಾಗಿರುತ್ತದೆ; ಕ್ಲುಪ್ತವಾದದ್ದು ಶಬ್ದಗಳ ಸಂಖ್ಯೆಯಿಂದ; ಘನವಾದದ್ದು ವಾಕ್ಯಗಳ ಭಾರದಿಂದ.

**೧೪೭.** "ದೇವರಲ್ಲಿ ನಂಬುವದು" ಅಂದರೆ ಬೇರೆ, "ದೇವರು ಇದ್ದಾನೆಂದು ನಂಬುವದು" ಅಂದರೆ ಬೇರೆ. ಇದನ್ನು ದೆವ್ವಗಳು ಸಹಾ ನಂಬಿ ನಡಗುತ್ತವೆ. (ಯಾಕೊ. ೨, ೧೯.) ದೇವರಲ್ಲಿ ನಂಬುವದಂದರೆ, ಆತನು ನಮಗೆ ಎಲ್ಲಾದರಲ್ಲಿಯೂ ಸಹಾಯ ಮಾಡ ಶಕ್ತನೂ ಮನಸ್ಸುಳ್ಳವನೂ ಆಗಿದ್ದಾನೆ ಎಂಬ ದೃಢವಾದ ಸಂತೋಷತೆಯುಳ್ಳ ಮನೋನಿಶ್ಚಯತ್ವದಿಂದ ನಿರುಪಾಧಿಕವಾಗಿಯೂ, ಎಲ್ಲಾ ಸ್ವಚಿತ್ತ ಸ್ವಮಾರ್ಗ ಅರ್ಪಿಸುವವನಾಗಿಯೂ, ಆತನಿಗೆ ತನ್ನನ್ನು ಒಪ್ಪಿಸಿ ಕೊಡುವದೇ[೧]. ಆದರೆ ದೇವರು ಇದ್ದಾನೆ, ಏನಾಗಿರುತ್ತಾನೆ ಮತ್ತು ಹ್ಯಾಗಿರುತ್ತಾನೆ ಎಂಬದನ್ನೂ (ದೇವರ ಸ್ವಭಾವದ ವಿಷಯ), ಅತ್ತಕಡೆಯಲ್ಲಿ, ಆತನು ನಮಗೋಸ್ಕರ ಮತ್ತು ನಮ್ಮಲ್ಲಿ ಏನು ಮಾಡಿದ್ದಾನೆ ಮತ್ತು ಮಾಡಲಿಚ್ಛೈಸುತ್ತಾನೆ ಎಂಬದನ್ನೂ (ದೇವರ ಪ್ರವೃತ್ತಿಯ ವಿಷಯ) ನಂಬದೆ, ನಾವು ದೇವರಲ್ಲಿ ನಂಬಲಾಗುವದಿಲ್ಲಾ[೨]. ಎರಡಕ್ಕೂ ಅಪೊಸ್ತೊಲಿಕವೆಂಬ ವಿಶ್ವಾಸಪ್ರಮಾಣವು ಗತಿ ತೋರಿಸುತ್ತದೆ.

೧) "ವಿಶ್ವಾಸವು ನಿರೀಕ್ಷಿಸಿದವುಗಳ ನಿಶ್ಚಯವೂ, ಕಾಣದ ಕಾರ್ಯಗಳ ಪ್ರಮಾಣವೂ, ಆಗಿದೆ." (ಇಬ್ರಿ. ೧೧, ೧.)

೨) "ಆದರೆ ವಿಶ್ವಾಸವಿಲ್ಲದೆ ಅವನನ್ನು ಮೆಚ್ಚಿಸುವದಕ್ಕಾಗದು. ಯಾಕಂದರೆ ದೇವರ ಬಳಿಗೆ ಬರುವವನು, ಅವನು ಇದ್ದಾನೆಂದೂ, ಅವನನ್ನು ಜಾಗ್ರತೆಯಾಗಿ ಹುಡುಕುವವರಿಗೆ ಫಲ ಕೊಡುವವನಾಗಿದ್ದಾನೆಂದೂ, ವಿಶ್ವಾಸಿಸ ಬೇಕು." (ಇಬ್ರಿ. ೧೧, ೬.)



## I. ದೇವರ ಸ್ವಭಾವದ ವಿಷಯ.

ತಂದೆಯಾದ ದೇವರಲ್ಲಿಯೂ,.....ಆತನ ಒಬ್ಬನಾಗಿ ಹುಟ್ಟಿದ ಮಗನಲ್ಲಿಯೂ,.....ಪರಿಶುದ್ಧಾತ್ಮನಲ್ಲಿಯೂ.....ನಂಬುತ್ತೇನೆ.

**೧೪೮.** ನಾವು ದೇವರೆಂದು ಹೇಳುವಂಥಾ ಸರ್ವ ಸಂಪೂರ್ಣ ಸರ್ವೋತ್ತಮ ವಸ್ತುವೂ, ತನ್ನ ಸ್ವಂತ ಇರೋಣಕ್ಕೆ ಆಧಾರ ಮತ್ತೊಬ್ಬನಲ್ಲಿ ಅಲ್ಲಾ, ತನ್ನಲ್ಲಿಯೆ ಇದ್ದು, ಸರ್ವಕ್ಕೂ ಕಾರಣವೂ ಆಗಿರುವವನೊಬ್ಬನು ಇದ್ದಾನೆಂಬದಕ್ಕಿಂತಾ ಹೆಚ್ಚಾಗಿ ಯಾವದೂ ನಿಶ್ಚಯವಲ್ಲಾ. ಯಾಕಂದರೆ, ಈ ಇರೋಣವು ಪಂಚೇಂದ್ರಿಯಗಳಿಗೆ ಪ್ರತ್ಯಕ್ಷವಾಗಿರದಿದ್ದರೂ, ಇಂದ್ರಿಯಗಳಿಗೆ ಒಳಗಾಗಿಯೂ ಪರವಾಗಿಯೂ ಇರುವ ಸಮಸ್ತಕ್ಕೂ ಆಧಾರ ವಸ್ತುವಾಗಿರುತ್ತದೆ. ಹಾಗಾದರೆ, ದೇವರು ಇದ್ದಾನೆಂಬದಕ್ಕೆ ಪ್ರಮಾಣ ಬೇಡಾ, ಅದು ಎಲ್ಲಾ ಪ್ರಮಾಣಕ್ಕೆ ಅತೀತವಾಗಿರುತ್ತದೆ.

"ಒಂದೊಂದು ಮನೆ ಯಾರಿಂದಲಾದರೂ ಕಟ್ಟಲ್ಪಡುವದು; ಆದರೆ ಸರ್ವವನ್ನು ಕಟ್ಟಿದವನು ದೇವರೇ." (ಇಬ್ರಿ. ೩, ೪.)

**೧೪೯.** ದೇವರ ಅರುವು ಮನುಷ್ಯನ ಆದಿಭಾವಕ್ಕೆ ಅನುಕೂಲವಾಗಿ ಅವನ ಆತ್ಮದಲ್ಲಿ ಇರುತ್ತದೆ. ಮನುಷ್ಯಾತ್ಮವು ತಾನೆ ದಿವ್ಯ ಮೂಲದಿಂದ ಬಂದದ್ದಾಗಿ ಈ ಅರುವಿಗೆ ಕಾರಣ[1]. ಆದರೆ ಈ ಜನ್ಮಭಾವ ಸಹಾ ಸುಶಿಕ್ಷೆಯಿಂದಲೂ ಉಪದೇಶದಿಂದಲೂ ವಿಕಸಿತವಾಗುವದೂ ಸಾಕಲ್ಪಡುವದೂ ಅವಶ್ಯ. ಇದಲ್ಲದೆ, ದೇವರ ಅರುವು ದೇವರ ನಿರ್ಮಾಣಗಳ ಧ್ಯಾನದಿಂದಲೂ, ಚರಿತ್ರದಲ್ಲಿ ಕಾಣುವ ದೇವರ ಅಧಿಕಾರದ ಧ್ಯಾನದಿಂದಲೂ ಎಚ್ಚರವಾಗುತ್ತದೆ. ಮತ್ತು ಪೋಷಣ ಹೊಂದುತ್ತದೆ[2]. ದೇವರು ಒಬ್ಬನಾಗಿಯೂ ಅಹಂಭಾವವುಳ್ಳವನಾಗಿಯೂ ಆಗಿ ಎಲ್ಲವುಗಳ ನಿರ್ಮಾಣಿಕನೂ, ಪಾಲಕನೂ, ನಾಯಕನೂ ಆಗಿರುತ್ತಾನೆಂಬದಕ್ಕೆ ಒಪ್ಪಿಕೊಳ್ಳುವದೆ ಆಸ್ತಿಕ ಮತ. ಆದಿಭಾವದಲ್ಲಿರುವ ದೇವರ ಅರುವನ್ನು ಪೂರ್ಣವಾಗಿಯೂ ಬೇಕೆಂದೂ ಅಲ್ಲಗಳೆಯುವದು ಅಥವಾ ಇಲ್ಲವೆಂದು ನೆನಸುವದು (ನಾಸ್ತಿಕ ಮತ) ಇರುವದೇ ಇಲ್ಲಾ, ಇದ್ದರೂ, ತನಗೆ ತಾನೆ ಹೇಳುವ ಸುಳ್ಳಾಗಿರುತ್ತದೆ[3]. ಆದರೆ ಒಂದು ಸರಿ, ಆ ಆದಿಭಾವದಲ್ಲಿರುವ ದೇವರ ಅರುವು ಸುಳ್ಳಿನಿಂದಲೂ ಅಭಿಲಾಷೆಗಳಿಂದಲೂ ಬಹು ವಿಧವಾಗಿ ಕತ್ತಲೆಯಾಗಿಯೂ ತಲೆಕೆಳಗಾಗಿಯೂ ಹೋಗುತ್ತದೆ[4].

೧) "ಅವನು ನಮ್ಮಲ್ಲಿ ಯಾವನೊಬ್ಬನಿಗಾದರೂ ದೂರವಾದವನಲ್ಲ. ಯಾಕಂದರೆ, ಅವನ ವಂಶದವರಾಗಿದ್ದೇವೆಂದು, ನಿಮ್ಮ ಕವಿಗಳೊಳಗೆ ಕೆಲವರು ಹೇಳಿದ ಪ್ರಕಾರ, ಅವನಲ್ಲಿ ಬದುಕುತ್ತೇವೆ, ಚಲಿಸುತ್ತೇವೆ, ಇರುತ್ತೇವೆ." (ಅ. ಕ್ರಿ. ೧೭, ೨೭. ೨೮.) (ಸಮ ನೋಡು ಉತ್ಪ. ೨, ೭.)

೨) "ದೇವರನ್ನು ಕುರಿತು ತಿಳಿಯ ತಕ್ಕದ್ದು ಅವರಲ್ಲಿ ತೋರಿ ಇದೆ; ಯಾಕಂದರೆ

ದೇವರು ಅದನ್ನು ಅವರಿಗೆ ತೋರಿಸಿದ್ದಾನೆ." ಇತ್ಯಾದಿ. (ರೋಮಾ. ೧, ೧೯. ೨೦.) (ಸಮ ನೋಡು **೨೪**, ಪರಿಶಿ. ೧.)

೩) "ದೇವರಿಲ್ಲವೆಂದು, ಬುದ್ಧಿಹೀನನು ತನ್ನ ಹೃದಯದಲ್ಲಿ ಹೇಳಿ ಕೊಂಡಿದ್ದಾನೆ; ಅವರು ಕೆಟ್ಟು ಹೋಗಿ, ಕರ್ಮದಲ್ಲಿ ಅಸಹ್ಯರಾಗಿದ್ದಾರೆ." (ಕೀರ್ತ. ೧೪, ೧.)

೪) "ದೇವರನ್ನು ತಿಳಿದು, ಅವನನ್ನು ದೇವರೆಂದು ಮಹಿಮೆ ಪಡಿಸದೆ, ಸ್ತುತಿಸದೆ, ತಮ್ಮ ಯೋಚನೆಗಳಲ್ಲಿ ನಿಷ್ಪ್ರಯೋಜಕರಾಗಿ, ಅವರ ಬುದ್ಧಿ ಇಲ್ಲದ ಹೃದಯವು ಅಂಧಕಾರವಾಯಿತು." ಇತ್ಯಾದಿ. (ರೋಮಾ. ೧, ೨೧—೨೩.) (ಸಮ ನೋಡು **೨೪**, ಪರಿಶಿ. ೧.)

ಪರಿಶಿ. ದೇವರ ಅರುವಿನ ವಿಷಯದಲ್ಲಿ ಮುಖ್ಯವಾದ ಅಪಮಾರ್ಗಗಳು ಯಾವವಂದರೆ: ೧. ನಿಶ್ಚಿಂತ ದೇವ ಮತ, ಅಥವಾ ಕೇವಲೇಶ್ವರ ಮತ. ಈ ಮತದಲ್ಲಿ, ದೇವರು ಪರದಲ್ಲಿ ಮಾತ್ರವೆ ಇರುತ್ತಾನೆಂದೂ ನಿರ್ಮಾಣಕ್ಕಿಂತ ಅಪರಿಮಿತವಾಗಿ ಮೇಲಾಗಿದ್ದು, ಲೋಕದಲ್ಲಿ ನಿತ್ಯವಾದ ಸ್ವಭಾವ ಕ್ರಮಗಳನ್ನು ಮಾಡಿಟ್ಟ ಮೇಲೆ, ಈ ಲೋಕದ ವಿಷಯದಲ್ಲಿ ಏನೂ ಚಿಂತೆ ಪಡುವದಿಲ್ಲವೆಂದೂ ಬೋಧನೆ. ಆದಕಾರಣ, ದೇವರ ಪ್ರಕಟಣೆ, ಅದ್ಭುತಗಳು, ಪ್ರವಾದನೆ, ಪ್ರಾರ್ಥನೆ ಕೇಳುವದು ಇತ್ಯಾದಿ ಅಸಾಧ್ಯವೆಂದು ಈ ಮತದವರು ಹೇಳುತ್ತಾರೆ. ೨. ಸರ್ವದೇವತ್ವ ಮತ, ಅಥವಾ ಅದ್ವೈತ ಮತ. ಈ ಮತದ ಪ್ರಕಾರ, ದೇವರು ಇಹದಲ್ಲಿ ಮಾತ್ರವೆ ಇದ್ದಾನೆ; ಅಂಥವರು, ದೇವರು ಪ್ರತ್ಯೇಕ ಅಹಂಭಾವಿ ಎಂಬದನ್ನೂ, ಆತನು ಲೋಕದ ಮೇಲೆಯೂ ಲೋಕಕ್ಕೆ ಬೇರೆಯಾಗಿಯೂ ಇರುತ್ತಾನೆಂಬದನ್ನೂ ಅಲ್ಲಗಳಿಯುತ್ತಾರೆ; ಲೋಕವೇ ದೇವರೆಂದೂ, ಲೋಕದ ಜೀವವೆಲ್ಲಾ ದೇವತೆಯ ಲೀಲೆ ಎಂದೂ ಹೇಳುತ್ತಾರೆ; ಈ ಮತದ ಪ್ರಕಾರ, ಮನುಷ್ಯ ಈಗ ಇದ್ದವನು ಮತ್ತೆ ಸಹಾ ನಿತ್ಯವಾಗಿ ಇರುವದಿಲ್ಲಾ; ಉತ್ಥಾನವೂ, ನ್ಯಾಯವಿಚಾರಣೆಯೂ, ಪ್ರತಿಫಲವೂ ಇರುವದಿಲ್ಲಾ, ಈ ಪ್ರಕಾರ ಒಳ್ಳೇದು ಕೆಟ್ಟದ್ದು ಎಂಬ ಹೆಚ್ಚು ಕಡಿಮೆಯು ಬಲವು ಪೂರ್ಣವಾಗಿ ಇಲ್ಲವಾಗುತ್ತದೆ. ೩. ದ್ವಿದೇವಮತ. ಈ ಮತದವರು, ಒಬ್ಬ ಒಳ್ಳೇ ದೇವರೂ, ಒಬ್ಬ ಕೆಟ್ಟ ದೇವರೂ, ಈ ಪ್ರಕಾರ ಇಬ್ಬರು ದೇವರಿದ್ದಾರೆಂದೂ, ಅವರಿಬ್ಬರೂ ಒಬ್ಬನಿಗೊಬ್ಬನು ಅನಾದಿಯಿಂದ ವಿರೋಧಿಗಳಾಗಿರುತ್ತಾರೆಂದೂ ನೆನಸುತ್ತಾರೆ. ೪. ಬಹುದೇವಮತ. ಈ ಮತದವರು ದೇವರು ಒಬ್ಬನಾಗಿದ್ದಾನೆಂಬ ಆಲೋಚನೆಯನ್ನು ಕೆಡಿಸಿ, ಲೋಕದ ಜೀವದಲ್ಲಿ ನಡಿಯುವ ಪ್ರತಿ ವಿಶೇಷ ಕಾರ್ಯಕ್ಕೆ ಒಂದೊಂದು ದೇವತೆ ಉಂಟೆಂದು ನೆನಸುತ್ತಾರೆ. ೫. ಸಬಾಯಮತ, ಅಂದರೆ, ನಕ್ಷತ್ರಾರಾಧನೆ. ಈ ಮತದವರು, ಮೇಲಿರುವ ನಕ್ಷತ್ರಗಳು ಏಕಪ್ರಕಾರ ಇರುವ ತಮ್ಮ ಕ್ರಮದಲ್ಲಿ ನಡದು, ಭೂಮಿಯಲ್ಲಿರುವವರಿಗೆ ಆಶೀರ್ವಾದಕ್ಕೂ ವಿನಾಶಕ್ಕೂ ಕಾರಣವಾಗಿರುತ್ತಾವೆಂಬದಾಗಿ, ಅವುಗಳಲ್ಲಿಯೆ ದೇವರು ಪ್ರತ್ಯಕ್ಷವಾಗಿರುತ್ತಾನೆಂದು ನೆನಸುತ್ತಾರೆ. ೬. ಫೆತಿಶಮತ. ಈ ಮತದವರು, ದೇವರ ಅರುವನ್ನು ಸ್ವಲ್ಪಕಡಿಮೆ ಎಲ್ಲಾ ಕಳಕೊಂಡವರಾಗಿ, ಮನಸ್ಸಿಗೆ ಬಂದ

ಹಾಗೆ ಕ್ರಮ ಆಲೋಚನೆ ಇಲ್ಲದೆ ಬೇರೆ ಬೇರೆ ನಿರ್ಮಾಣಗಳನ್ನೂ ಚಮತ್ಕಾರದ ವಸ್ತುಗಳನ್ನೂ (ಹಾವುಗಳನ್ನೂ, ಮರ ಕಲ್ಲುಗಳ ವಿಗ್ರಹಗಳನ್ನೂ, ಇತ್ಯಾದಿ) ದೇವರೆಂದೆಣಿಸಿ ಆರಾಧಿಸುತ್ತಾರೆ.

**೧೫೦.** ಈ ಪ್ರಕಾರ ಸ್ವಾಭಾವಿಕವಾದ ದೇವರ ಅರುವು ಬಹುವಿಧವಾಗಿ ಅರೂಪವಾದ್ದರಿಂದ, ದೇವರ ತಿಳುವಿಕೆಗೆ ಅದು ಸರ್ವಸಯೋಗ್ಯವಾದ ಆಧಾರವಾಗಿರ ಕೂಡದು. ಸಮವಾಗಿಯೂ ಸ್ಥಿರವಾಗಿಯೂ ಇರುವ ದೇವಜ್ಞಾನವನ್ನು ಪರಿಶುದ್ಧ ಬರಹದಿಂದ ಮಾತ್ರವೇ ಪಡಕೊಳ್ಳ ಬೇಕು. ಇದರಲ್ಲಿ ದೇವರು ತನ್ನನ್ನು, ತಾನೆ ಮನುಷ್ಯರಿಗೆ ಹೊಸತಾಗಿ ಪ್ರಕಟ ಮಾಡಿ ಕೊಂಡಿದ್ದಾನೆ.

**೧೫೧.** ಪರಿಶುದ್ಧ ಬರಹದಲ್ಲಿ ದೇವರ ಸ್ವಭಾವವು, ಆತ್ಮವೂ ಜೀವವೂ ಪ್ರೀತಿಯೂ ಪ್ರಕಾಶವೂ ಸತ್ಯವೂ ಆಗಿರುತ್ತದೆಂದು, ಅಂದರೆ, ಎಲ್ಲಾ ಜೀವಕ್ಕೂ ಎಲ್ಲಾ ಸತ್ಯಕ್ಕೂ ಅಹಂಭಾವವುಳ್ಳ ಸ್ವತಂತ್ರವುಳ್ಳ ಸಂಪೂರ್ತಿಯೂ ಬುಗ್ಗೆಯೂ ಆಗಿರುತ್ತದೆಂದು ತಿಳಿಸಿ ಅದೆ. (ನಿರ್ಮಾಣಕ್ಕೆ ಆತ್ಮವೂ, ಜೀವವೂ, ಪ್ರೀತಿಯೂ ಇತ್ಯಾದಿ ಉಂಟು, ಆದರೆ ದೇವರು ತಾನೆ ಆತ್ಮವೂ, ಜೀವವೂ, ಪ್ರೀತಿಯೂ ಇತ್ಯಾದಿ ಆಗಿ ಇದ್ದಾನೆ.)

"ದೇವರು ಆತ್ಮವೇ; ಮತ್ತು ಅವನನ್ನು ಆರಾಧಿಸುವವರು ಆತ್ಮದಿಂದಲೂ ಸತ್ಯದಿಂದಲೂ ಆರಾಧಿಸ ಬೇಕು." (ಯೋಹಾ. ೪, ೨೪.) "ತಂದೆಯು ತನ್ನಲ್ಲಿ ಹ್ಯಾಗೆ ಜೀವ ಉಂಟಾದವನಾಗಿದ್ದಾನೋ, ಹಾಗೆಯೇ ಮಗನಿಗೆ ತನ್ನಲ್ಲಿ ಜೀವ ಉಂಟಾದವನಾಗಿರ ಕೊಟ್ಟಿದ್ದಾನೆ." (ಯೋಹಾ. ೫, ೨೬.) "ದೇವರು ಪ್ರೀತಿಯಾಗಿದ್ದಾನೆ." (೧ಯೋಹಾ. ೪, ೮.) "ಮತ್ತು ನಾವು ಅವನಿಂದ ಕೇಳಿ, ನಿಮಗೆ ತಿಳಿಸುವ ಸಂಗತಿ ಏನಂದರೆ—ದೇವರು ಬೆಳಕಾಗಿದ್ದಾನೆ; ಅವನಲ್ಲಿ ಎಷ್ಟು ಮಾತ್ರವು ಕತ್ತಲೆ ಇಲ್ಲಾ." (೧ಯೋಹಾ. ೧, ೫.) "ನಾನೇ ಮಾರ್ಗವೂ, ಸತ್ಯವೂ, ಜೀವವೂ ಆಗಿದ್ದೇನೆ." (ಯೋಹಾ. ೧೪, ೬.)

**೧೫೨.** ದೇವರ ಹೆಸರು ಅಂದರೆ, ಆತನ ಪ್ರವೃತ್ತಿಯಲ್ಲಿ ತಿಳಿಯ ಕೂಡುವಷ್ಟಕ್ಕೆ ಆತನ ಸ್ವಭಾವ; ಮತ್ತು ಅವನ ಪ್ರವೃತ್ತಿಯ ಸ್ಥಳವು ಇಮ್ಮಡಿಯಾಗಿರುವದರಿಂದ (ಪ್ರಕೃತಿಯ ರಾಜ್ಯವೂ ಕೃಪೆಯ ರಾಜ್ಯವೂ), ಆತನ ಹೆಸರು ಸಹಾ ಇಮ್ಮಡಿಯಾಗಿರುತ್ತದೆ: ಹಳೆ ಒಡಂಬಡಿಕೆಯಲ್ಲಿ ಎಲೊಹಿಮ್ ಮತ್ತು ಯೆಹೋವ (ದೇವರು ಮತ್ತು ಕರ್ತನು), ಇವುಗಳಿಗೆ ಸರಿಯಾಗಿ ಹೊಸ ಒಡಂಬಡಿಕೆಯಲ್ಲಿ ಥೆಯೊಸ್ (ದೇವರು) ಮತ್ತು ಕೂರಿಯೊಸ್ (ಕರ್ತನು) ಆತನ ಹೆಸರು ಎಲೊಹಿಮ್, ಆತನ ದೇವತ್ವದ ನಿತ್ಯ

ಬಲವೂ ಸಂಪೂರ್ಣತೆಯೂ ಲೋಕದ ನಿರ್ಮಾಣದಿಂದಲೂ, ಪಾಲನೆಯಿಂದಲೂ ವಿಚಾರದಿಂದಲೂ ಪ್ರತ್ಯಕ್ಷವಾಗುವಷ್ಟಕ್ಕೆ. (ರೋಮಾ. ೧, ೨೦) ಆದರೆ ಯೆಹೋವ (ಹೊರ. ೩, ೧೪. ೬, ೨—೪.) ಆತನು ಒಬ್ಬನಾದ ಸತ್ಯ ದೇವರಾಗಿದ್ದು ತನ್ನ ಕೃಪೆಯನ್ನೂ ನಂಬಿಕಸ್ತಿಕೆಯನ್ನೂ ಮನುಷ್ಯರ ವಿಮೋಚನೆಗೋಸ್ಕರವಾದ ಕೃಪಾರಾಜ್ಯದ ಸ್ಥಾಪನೆಯಿಂದಲೂ, ಸ್ಥಿರೀಕರಣದಿಂದಲೂ, ವಿಸ್ತರಣದಿಂದಲೂ, ಪ್ರಕಟ ಮಾಡಿದ್ದಾನೆ ಎಂಬದು ಪ್ರತ್ಯಕ್ಷವಾಗುವಷ್ಟಕ್ಕೆ.

**೧೫೩.** ದೇವರು ಸ್ವಭಾವದ ಪ್ರಕಾರ ಒಬ್ಬನೆ[೧]. ಯಾಕಂದರೆ ಅತ್ಯುತ್ತಮ ಸಂಪೂರ್ಣ ವಸ್ತುವು ಒಂದೆ ಆಗಿರ ಬೇಕು.

೧) "ಇಸ್ರಯೇಲೇ, ಕೇಳು; ನಮ್ಮ ದೇವರಾದ ಯೆಹೋವನು ಒಬ್ಬನೇ ಯೆಹೋವನು." (ದ್ವಿತಿ. ೬, ೪.) "ನಾನೇ ಯೆಹೋವ, ಮತ್ತೊಬ್ಬನಿಲ್ಲ; ನಾನಲ್ಲದೆ ದೇವರಿಲ್ಲ." (ಯೆಶಾ. ೪೫, ೫.) "ದೇವರೊಬ್ಬನೇ ಹೊರ್ತು ಒಳ್ಳೆಯವನು ಯಾವನೂ ಇಲ್ಲ." (ಮತ್ತಾ. ೧೯, ೧೭.)

**೧೫೪.** ದೇವರ ಸ್ವಭಾವದ ಏಕತ್ವದಿಂದ ದೇವರಲ್ಲಿ ಮೂರ್ತಿಗಳ ಬಹುತ್ವ ಇರ ಕೂಡದೆಂದು ಹೇಳಲಾಗದು. ಪರಿಶುದ್ಧ ಬರಹದ ಪ್ರಕಟಣೆಯು ದಿವ್ಯಸ್ವಭಾವದೊಳಗೆ ತಂದೆ, ಮಗ ಆತ್ಮ — ಎಂಬ ಮೂರು ಮೂರ್ತಿಗಳನ್ನು ತಿಳಿಯ ಕಲಿಸುತ್ತದೆ. ಮತ್ತು ಈ ಪರಸ್ಪರ ಸಂಬಂಧಕ್ಕೆ ಕ್ರೈಸ್ತ ಸಭೆಯಲ್ಲಿ ತ್ರಿಯೇಕತ್ವ ಎಂಬ ಹೆಸರುಂಟು.

ಪರಿಶಿ. ಮೂರ್ತಿ ಅಂದರೆ, ಸ್ವಂತ ತನ್ನನ್ನೂ ಪರವಸ್ತುಗಳಿಂದ ತನ್ನ ಅನ್ಯತ್ವವನ್ನೂ ಅರಿತಿರುವ ನಾನು.

**೧೫೫.** ತನ್ನ ಅಹಂಭಾವದ ಪ್ರತ್ಯೇಕತ್ವದ ಪ್ರಕಾರ ತಂದೆಯಾದ ದೇವರು ನಿರ್ಮಾಣಕ್ಕೆ ಅದೃಶ್ಯನೂ, ಅಶೋಧ್ಯನೂ, ಅಗಮ್ಯನೂ[೧] ಆಗಿದ್ದರೂ, ಮಗನಲ್ಲಿಯೂ ಆತ್ಮನಲ್ಲಿಯೂ ಪ್ರಕಟಿಸಿ ಕೊಳ್ಳುತ್ತಾನೆ[೨], ಮತ್ತು ಇವರಲ್ಲಿ ಆತನ ಹತ್ತರ ನಿರ್ಮಾಣಕ್ಕೆ ಸಹಾ ಪ್ರವೇಶ ಉಂಟು[೩]. ಆತನು ಎಲ್ಲಾ ಜೀವಕ್ಕೂ ಎಲ್ಲಾ ಸತ್ಯಕ್ಕೂ ನಿತ್ಯ ಮೂಲವಾಗಿರುತ್ತಾನೆ. ಆತನಿಂದ ಎಲ್ಲಾ ದೃಶ್ಯಾದೃಶ್ಯ ವಸ್ತುಗಳು ಬರುತ್ತವೆ[೪], ಆದರೆ ಎಲ್ಲಾ ಮಗ ಆತ್ಮಗಳ ಪರಿಮುಖವಾಗಿ ಮಾತ್ರವೆ.

೧) "ಭಾಗ್ಯವುಳ್ಳ ಏಕ ಪ್ರಭುವು, ಅರಸುಗಳ ಅರಸನು, ಕರ್ತರ ಕರ್ತನು, ಒಬ್ಬನೇ ಅಮರತ್ವವುಳ್ಳವನು, ಅಪ್ರವೇಶ್ಯವಾದ ಬೆಳಕಿನಲ್ಲಿ ವಾಸ ಮಾಡಿ, ಮನುಷ್ಯರಲ್ಲಿ ಯಾರಿಗೂ ಕಾಣಿಸದೆ, ಕಾಣಿಸ ಕೂಡದೆ, ಇರುವವನು." (೧ ತಿಮೊ. ೬, ೧೫. ೧೬.)

೨) "ದೇವರನ್ನು ಯಾವನಾದರೂ ಎಂದೂ ನೋಡಲಿಲ್ಲ. ತಂದೆಯ ಎದೆಯಲ್ಲಿರುವ ಒಬ್ಬನಾಗಿ ಹುಟ್ಟಿದ ಮಗನು, ಅವನೇ ಅವನನ್ನು ತಿಳಿಯ ಮಾಡಿದ್ದಾನೆ." (೧ಯೋಹಾ. ೧, ೧೮.) "ದೇವರು ಅವುಗಳನ್ನು ತನ್ನ ಆತ್ಮದಿಂದ ನಮಗೆ ಪ್ರಕಟ ಮಾಡಿದ್ದಾನೆ. ಯಾಕಂದರೆ ಆತ್ಮವು ಎಲ್ಲವುಗಳನ್ನು ಶೋಧಿಸುತ್ತದೆ; ದೇವರ ಅಗಾಧಗಳನ್ನು ಸಹಾ." (೧ಕೊರಿ. ೨, ೧೦.)

೩) "ಅವನ (ಕ್ರಿಸ್ತನ) ಮುಖಾಂತರ ಇಬ್ಬರಾದ ನಮಗೆ (ಯೆಹೂದ್ಯರಿಗೂ ಅನ್ಯ ಜನರಿಗೂ) ಒಂದೇ ಆತ್ಮದಲ್ಲಿ ತಂದೆಯ ಬಳಿಗೆ ಪ್ರವೇಶ ಉಂಟು." (ಎಫೆ. ೨, ೧೮.)

೪) "ಎಲ್ಲರ ತಂದೆಯಾದ ದೇವರು ಒಬ್ಬನೇ; ಅವನು ಎಲ್ಲರ ಮೇಲೆಯೂ ಎಲ್ಲರ ಮೂಲವಾಗಿಯೂ ನಿಮ್ಮೆಲ್ಲರಲ್ಲಿಯೂ ಇದ್ದಾನೆ." (ಎಫೆ. ೪, ೬.) "ಎಲ್ಲಾ ಒಳ್ಳೇ ವರಗಳೂ, ಎಲ್ಲಾ ಸಂಪೂರ್ಣ ದಾನಗಳೂ ಮೇಲಿನಿಂದ ಉಂಟಾಗಿ, ಬೆಳಕುಗಳ ತಂದೆಯಿಂದ ಇಳಿದು ಬರುತ್ತವೆ." (ಯಾಕೊ. ೧, ೧೭.)

ಪರಿಶಿ. ಆತನಿಗೆ ತಂದೆ ಎಂಬ ಹೆಸರು ನಿಜವಾದ ಅರ್ಥದಲ್ಲಿ, ಯೇಸು ಕ್ರಿಸ್ತನ ತಂದೆಯಾಗಿರುವದರಿಂದ, ಬಂತು. ಯಾಕಂದರೆ ಈತನು ತಂದೆಯಿಂದ ಹುಟ್ಟಿ ಆತನೊಡನೆ ಒಂದೇ ಸ್ವಭಾವದವನಾಗಿರುತ್ತಾನೆ. ಆದರೆ ಆತನಿಗೆ ನಮ್ಮ ತಂದೆ ಎಂಬ ಹೆಸರು ಸಹಾ ಉಂಟು, ಯಾಕಂದರೆ, ಆತನು ನಮ್ಮನ್ನು ಕ್ರಿಸ್ತಯೇಸುವಿನಲ್ಲಿ ಮಕ್ಕಳಾಗಿಯೂ ತನ್ನ ಮಹಿಮೆಯ ಬಾಧ್ಯಸ್ಥರಾಗಿಯೂ ತಕ್ಕೊಳ್ಳಲಿಕ್ಕೆ ಇಚ್ಛೈಸುತ್ತಾನೆ.

**೧೩೬.** ಮಗನಾದ ದೇವರು ತಂದೆಯಿಂದ ನಿತ್ಯತ್ವದಲ್ಲಿ ಹುಟ್ಟಿದ್ದಾನೆ. (ಸಮ ನೋಡು **೧೭೦** ಪರಿಶಿ.) ಈತನೆ ಕೃಪೆಯಿಂದಲೂ ಸತ್ಯದಿಂದಲೂ ತುಂಬಾಗಿರುವಂಥಾ, ತಂದೆಯಿಂದ ಒಬ್ಬನೆ ಹುಟ್ಟಿದ ಮಗನೂ (ಯೋಹಾ. ೧, ೧೪.) ಅದೃಶ್ಯ ದೇವರ ಪ್ರತಿರೂಪವೂ, ಆತನ ಮಹಿಮೆಯ ಪ್ರತಿಕಾಂತಿಯೂ, ತಂದೆಯು ತನ್ನಲ್ಲಿ ಜೀವವುಂಟಾದವನಾಗಿರ ಕೊಟ್ಟವನೂ (ಯೋಹಾ. ೫, ೨೬.) ಆಗಿದ್ದಾನೆ. ತಂದೆಯಿಂದಲೂ ಪರಿಶುದ್ಧಾತ್ಮದಿಂದಲೂ ಪ್ರತ್ಯೇಕವಾದ ಅಹಂತೆಯುಳ್ಳವನಾಗಿರುವಷ್ಟಕ್ಕೆ ಮಗನು ಪ್ರತ್ಯಕ್ಷವಾಗುವಂಥಾ ಪ್ರಕಟ ದೇವರೂ, ದೇವರ ಮುಖವೂ, ಆಗಿರುತ್ತಾನೆ. ಆತನಿಂದಲೆ ತಂದೆಯು ಎಲ್ಲವುಗಳನ್ನು ನಿರ್ಮಿಸಿದ್ದಾನೆ, ಆಧರಿಸುತ್ತಾನೆ, ಕಾಪಾಡುತ್ತಾನೆ.

"ಆದಿಯಲ್ಲಿ ವಾಕ್ಯವು ಇತ್ತು. ಆ ವಾಕ್ಯವು ದೇವರ ಬಳಿಯಲ್ಲಿ ಇತ್ತು. ಆ ವಾಕ್ಯವು ದೇವರಾಗಿತ್ತು. ಅದು ಆದಿಯುಲ್ಲಿ ದೇವರ ಬಳಿಯಲ್ಲಿ ಇತ್ತು. ಅದರಿಂದ ಎಲ್ಲಾ ಉಂಟಾಯಿತು. ಅದು ಇಲ್ಲದೆ, ಉಂಟಾದವುಗಳಲ್ಲಿ ಒಂದಾದರೂ ಉಂಟಾಗಲಿಲ್ಲ." (ಯೋಹಾ. ೧, ೧—೩.) "ಅವನು ಅದೃಶ್ಯನಾದ ದೇವರ ಪ್ರತಿರೂಪವೂ, ಎಲ್ಲಾ ಸೃಷ್ಟಿಯ

ಹೊಟ್ಟುಲವನೂ, ಆಗಿದ್ದಾನೆ. ಯಾಕಂದರೆ ಪರಲೋಕಗಳಲ್ಲಿಯೂ, ಭೂಲೋಕದಲ್ಲಿಯೂ, ಇರುವ ದೃಶ್ಯಾದೃಶ್ಯವಾದವುಗಳೂ ಎಲ್ಲಾ ಅವನಿಂದ ಸೃಷ್ಟಿಸಲ್ಪಟ್ಟವು ಸಿಂಹಾಸನಗಳಾಗಲಿ, ಒಡೆತನಗಳಾಗಲಿ, ಧೊರೆತನಗಳಾಗಲಿ, ಅಧಿಕಾರಗಳಾಗಲಿ, ಎಲ್ಲವುಗಳು ಅವನಿಂದಲೂ ಅವನಿಗೋಸ್ಕರವೂ ಸೃಷ್ಟಿಸಲ್ಪಟ್ಟವು." (ಕೊಲೊ. ೧, ೧೫. ೧೬.) "ಇವನನ್ನು ಸರ್ವಕ್ಕೆ ಬಾಧ್ಯಸ್ತನಾಗಿ ನೇಮಿಸಿದನು; ಇವನಿಂದ ಲೋಕಗಳನ್ನು ಉಂಟು ಮಾಡಿದನು; ಇವನು, ಅವನ ಮಹಿಮೆಯ ಪ್ರತಿ ಕಾಂತಿಯಾಗಿಯೂ, ಅವನ ಸ್ವಭಾವದ ಪ್ರತಿರೂಪವಾಗಿಯೂ, ತನ್ನ ಬಲದ ವಾಕ್ಯದಿಂದ ಸರ್ವಕ್ಕೆ ಆಧಾರಕನಾಗಿಯೂ" ಇದ್ದಾನೆ. (ಇಬ್ರಿ. ೧, ೨. ೩.)

ಪರಿಶಿ. ೧. ದೇವರ ಮಗನೆಂಬ ಹೆಸರು ಹ್ಯಾಗಂದರೆ, ಆತನು ತಂದೆಯಿಂದ ಹುಟ್ಟಿದವನಾಗಿ, ಆತನೊಡನೆ ಪೂರ್ಣ ಏಕ ಸ್ವಭಾವದವನಾಗಿರುತ್ತಾನೆ. (ಯಾಕಂದರೆ ಹುಟ್ಟಿಸುವದೆಂದರೆ ಸ್ವಭಾವದ ಸಂಪ್ರದಾನವಾಗಿರುತ್ತದೆ.) ದೇವರ ವಾಕ್ಯವೆಂಬ ಹೆಸರು ಹ್ಯಾಗಂದರೆ, ತಂದೆಯು ಆತನಲ್ಲಿ ಪ್ರತ್ಯಕ್ಷವಾಗುತ್ತಾನೆ, ಆತನ ಪರಿಮುಖವಾಗಿ ತನ್ನನ್ನು ಪ್ರಕಟಿಸಿ ಕೊಳ್ಳುತ್ತಾನೆ. (ಮನುಷ್ಯಾತ್ಮವು ನುಡಿಯಿಂದ ಪ್ರತ್ಯಕ್ಷವಾಗಿ ಪ್ರಕಟವಾಗುತ್ತದೆ ಹ್ಯಾಗೊ ಹಾಗೆಯೆ.)

ಪರಿಶಿ. ೨. ಮಗನು ತಂದೆಯಿಂದ ನಿತ್ಯತ್ವದಲ್ಲಿ ಹುಟ್ಟಿದವನಾಗಿ ಆತನೊಡನೆ ಏಕಸ್ವಭಾವವುಳ್ಳವನಾಗಿದ್ದಾನೆಂಬದನ್ನು ಅಲ್ಲಗಳದು, ಅವನು ತಂದೆಯ ನಿರ್ಮಾಣವು, (ಸರಿ ಎಲ್ಲಾ ನಿರ್ಮಾಣಗಳಲ್ಲಿ ಮೊದಲನೆ ಮುಖ್ಯವಾದ ಶ್ರೇಷ್ಠವಾದ ನಿರ್ಮಾಣವು,) ಆದಕಾರಣ ತಂದೆಯ ಸಂಗಡ ನಿತ್ಯನೂ ಸ್ವಭಾವಸಮಾನನೂ ಅಲ್ಲವೆಂಬ ಅಬದ್ಧ ಬೋಧನೆಯು ಅರೀಯ ಮತವೆಂದು ಹೆಸರ್ಗೊಂಡದೆ. ಯಾಕಂದರೆ ಅರೀಯನು († ೩೩೬) ಅದಕ್ಕೆ ಕಾರಣವಾಗಿದ್ದನು. ೩೨೫ನೆಯಲ್ಲಿ ನಿಕ್ಯೆಯದಲ್ಲಿ ಕೂಡಿದ ಸರ್ವಸಂಘದಲ್ಲಿ ಈ ಮತವು ಅಬದ್ಧ ಬೋಧನೆಯಾಗಿರುವದರಿಂದ ಶಾಪಗ್ರಸ್ತವೆಂದಾಯಿತು.

**೧೫೬.** ಪರಿಶುದ್ಧಾತ್ಮನೆಂಬ ದೇವರು ದೇವರ ಅಥವಾ ಕ್ರಿಸ್ತನ ಬರೆ ಶಕ್ತಿಯಲ್ಲ, ತಂದೆಯಿಂದಲೂ ಮಗನಿಂದಲೂ ನಿತ್ಯದಿಂದ ಹೊರಡುವವನಾಗಿ (ಯೋಹಾ. ೧೫, ೨೬.) ಆ ಇಬ್ಬರಿಗೆ ಬೇರೆಯಾಗಿಯೂ (ಯೋಹಾ. ೧೪, ೧೬. ಗಲಾ. ೪, ೬.) ಇಬ್ಬರೊಡನೆ ಪೂರ್ಣವಾಗಿ ಏಕ ಸ್ವಭಾವದವನಾಗಿಯೂ ಇದ್ದಾನೆ; ಹ್ಯಾಗಂದರೆ, ಪರಿಶುದ್ಧ ಬರಹದಲ್ಲಿ ಆತನಿಗೆ ದಿವ್ಯ ನಾಮಗಳೂ (ಅ. ಕ್ರಿ. ೫, ೩. ೪. ೧ ಕೊರಿ. ೩, ೧೬.) ದಿವ್ಯ ಗುಣಗಳೂ (೧ ಕೊರಿ. ೨, ೧೦. ೨ ಪೇತ್ರ. ೧, ೨೧. ಕೀರ್ತ. ೧೩೯, ೭.) ದಿವ್ಯ ಕ್ರಿಯೆಗಳೂ (ಕೀರ್ತ. ೩೩, ೬. ಯೋಬ್. ೩೩, ೪.) ದಿವ್ಯ ಮಾನವೂ (ಮತ್ತಾ. ೨೮, ೧೯.) ಉಂಟು. ಆತನ ಸ್ವಂತ ಲಕ್ಷಣದ ಪ್ರಕಾರ ಆತನು ಸಂಪ್ರದಾಯಕ ದೇವರು,

ಆತನ ಪರಿಮುಖವಾಗಿ ತಂದೆಯೂ ಮಗನೂ ದಿವ್ಯ ಜೀವಾಶೀರ್ವಾದಗಳ ತ್ರಾಣಗಳನ್ನೂ, ಪ್ರಕಾಶವನ್ನೂ, ಸತ್ಯವನ್ನೂ ಆನಂದವನ್ನೂ ಹಂಚಿ ಸ್ವೀಕರಿಸ ಮಾಡಿಸುತ್ತಾರೆ. (ಉತ್ಪ. ೧, ೨. ಯೋಹಾ. ೧೬, ೧೩. ೧೪. ೨ಪೇತ್ರ. ೧, ೨೧. ೧ಕೊರಿ. ೨, ೯. ೧೦.) ಈ ಪ್ರಕಾರ ಆತನ ಪರಿಮುಖವಾಗಿ ಪ್ರತಿ ದಿವ್ಯ ಕರಣಿಯು ತೀರಿ ಪೂರ್ಣವಾಗುತ್ತದೆ.

ಪರಿಶಿ. ದೇವತೆಯ ಮೂರನೆ ಮೂರ್ತಿಯು ತಂದೆಯ ಮತ್ತು ಮಗನ ಆತ್ಮ ಎಂದು ಹೆಸರ್ಗೊಂಡದೆ, ಯಾಕಂದರೆ, ಇಬ್ಬರಿಂದಲೂ ಹೊರಡುವವನಾಗಿ ದಿವ್ಯ ಜೀವಶ್ವಾಸದಂತೆ ನಿರ್ಮಾಣದಲ್ಲಿ ದಿವ್ಯ ಜೀವವನ್ನು ಘುಳಿಸುತ್ತದೆ, ಸಂಪ್ರದಾಯ ಮಾಡುತ್ತದೆ.

**೧೫೮.** ಅನ್ಯ ಜನಾಂಗಗಳ ಬಹು ದೇವ ಮತಕ್ಕೂ ಅದ್ವೈತ ಮತಕ್ಕೂ ಪ್ರತಿಕೂಲವಾಗಿ ಹಳೆ ಒಡಂಬಡಿಕೆಯಲ್ಲಿ ದೇವರ ಏಕತ್ವವು ಬಹು ಬಲವಾಗಿ ಕಾಣಿಸಿ ಅದೆ. ಆದರೂ ಇಲ್ಲಿಯೆ ತ್ರಿಯೇಕತ್ವ ಬೋಧನೆಯ ಪ್ರಾರಂಭವೂ ಮೂಲವೂ ಕಾಣ ಬರುತ್ತದೆ. ನಿರ್ಮಾಣ ಚರಿತ್ರದಲ್ಲಿಯೆ ಇದು ಪ್ರತ್ಯಕ್ಷವಾಗುತ್ತದೆ. (ದೇವರು, ನಿರ್ಮಿಸುವ ವಾಕ್ಯವು, ಜೀವ ಉಂಟು ಮಾಡುವ ಆತ್ಮವು.) ಇನ್ನೂ ಖಂಡಿತವಾಗಿ ಆರೋನನ ಆಶೀರ್ವಾದದಲ್ಲಿ ಕಂಡು ಬರುತ್ತದೆ[1]. ಶೆರಾಫರು ಪರಿಶುದ್ಧನು ಎಂದು ಮೂರು ಸಾರಿ ಹೇಳುವಂಥಾದ್ದರಿಂದ ಸಹಾ[2] ಇದು ಸೂಚಿಸಿ ಅದೆ. ದೇವರು ತಾನೆ ತನ್ನ ವಿಷಯದಲ್ಲಿ ಬಹುವಚನದಲ್ಲಿ ಮಾತಾಡುತ್ತಾನೆ. (ಉದಾಹರಣೆ. ಉತ್ಪ. ೧, ೨೬.) ದಿವ್ಯ ನಾನು ಮತ್ತು ದಿವ್ಯ ನೀನು (ಕರ್ತೃ ಕರ್ಮ) ಬೇರೆ ಬೇರೆ ಮಾಡಿಯದೆ[3]. ಯೆಹೋವನ ದೂತನು ತನ್ನನ್ನು ತಾನೆ ಪ್ರಕಟ ಮಾಡಿ ಕೊಳ್ಳುವ ದೇವರಾಗಿ ಕಾಣ ಬರುತ್ತಾನೆ. ಹ್ಯಾಗಂದರೆ ಅವನು ತನ್ನನ್ನು ದೇವರೆಂದು ಕರೆಯುತ್ತಾನೆ, ದಿವ್ಯ ಸಾಮರ್ಥ್ಯವನ್ನೂ ಮಾನವನ್ನೂ ನಾಮವನ್ನೂ ಇಟ್ಟು ಕೊಳ್ಳುತ್ತಾನೆ, ಬಲಿಯನ್ನೂ ಆರಾಧನೆಯನ್ನೂ ಅಂಗೀಕರಿಸುತ್ತಾನೆ, ಇತ್ಯಾದಿ. (ಉತ್ಪ. ೧೬, ೧೦. ೧೩. ೨೨, ೧೧. ೧೨. ೪೮, ೧೫. ೧೬. ಹೊರ. ೩, ೨. ೬. ನ್ಯಾಯಾಧಿ. ೬, ೧೨. ೧೬. ಮಲಕಿ. ೩, ೧.) ಮೆಸ್ಸೀಯನಿಗೆ ಪ್ರವಾದಿಗಳು ದಿವ್ಯ ಸ್ವಭಾವ ಉಂಟೆಂಬದಾಗಿ ಮಾತಾಡುತ್ತಾರೆ, (ಉದಾಹರಣೆ. ಯೆಶಾ. ೭, ೧೪. ೯, ೬. ೪, ೨. ಯೆರೆ. ೨೩, ೫. ೬. ಮೀಕ. ೫, ೨.) ಮತ್ತು ಎಲ್ಲಾ ಹಳೆ ಒಡಂಬಡಿಕೆಯಲ್ಲಿ ಬಹಳ ಬಹಳ ಸರ್ತಿ ಪ್ರಕಾಶೀಕರಿಸುವ ಬದುಕಿಸುವ ದೇವಾತ್ಮದ ವಿಷಯ ಹೇಳಿ ಅದೆ.

೧) "ನೀವು ಇಸ್ರಯೇಲ್ ಮಕ್ಕಳನ್ನು ಆಶೀರ್ವದಿಸುವಾಗ, ಈ ಪ್ರಕಾರ ಅವರಿಗೆ ಹೇಳ ಬೇಕು—ಯೆಹೋವನು ನಿನ್ನನ್ನು ಆಶೀರ್ವದಿಸಿ, ಕಾಪಾಡಲಿ; ಯೆಹೋವನು ತನ್ನ

ಮುಖವನ್ನು ನಿನ್ನ ಕಡೆಗೆ ಪ್ರಕಾಶಿಸ ಮಾಡಿ, ನಿನಗೆ ದಯ ಮಾಡಲಿ; ಯೆಹೋವನು ತನ್ನ ಮುಖವನ್ನು ನಿನ್ನ ಕಡೆಗೆ ಎತ್ತಿ, ನಿನಗೆ ಸಮಾಧಾನವನ್ನು ಕೊಡಲಿ." (ಅಂಕೆ. ೬, ೨೪—೨೬.)

ಪರಿಶಿ. ಈ ಆಶೀರ್ವಾದದಲ್ಲಿಯೆ ಪರಿಶುದ್ಧ ತ್ರಿಯೇಕತ್ವದ ಮತ್ತು ಅದರಿಂದ ಉಂಟಾಗ ತಕ್ಕ ವಿವೋಚನೆಯ ಪೂರ್ಣ ಮರ್ಮವು ಮರೆಯಾಗಿಯೂ ವೊಳಿಕೆಯಂತೆಯೂ ಅಡಕವಾಗಿ ಅದೆ. ಆದಕಾರಣ ಅದನ್ನು ಕ್ರೈಸ್ತ ಸಭೆಯಲ್ಲಿ ಸಹಾ ಎಲ್ಲಾ ದೇವಾರಾಧನೆಯ ಕಾರ್ಯಗಳಲ್ಲಿ ಬಿಡದೆ ಪ್ರಯೋಗಿಸುತ್ತಾರೆ. ಮೂರು ಸಾರಿ ಕರ್ತನ ನಾಮವು ಸಭೆಯ ಮೇಲೆ ಇಡಲ್ಪಡುತ್ತದೆ,—ಮತ್ತು ಮೊದಲಾಗಿ ಕರ್ತನೆಂಬದು ಮಾತ್ರ ಉಂಟು. (**೧೫೫.**) ಮತ್ತೆ ಎರಡು ಸರ್ತಿ ಕರ್ತನ ಮುಖವು ಬರುತ್ತದೆ. (**೧೫೬. ೧೫೭.**) ಮೊದಲನೆ ಆಶೀರ್ವಾದ ವಾಕ್ಯದಲ್ಲಿ ಆಶೀರ್ವಾದವನ್ನೂ ಆಧಾರವನ್ನೂ (ಎಲ್ಲಾ ಒಳ್ಳೇ ದಾನಗಳ ಮೂಲವರ್ತಿಯಾಗಿರುವ ತಂದೆಯಿಂದ), ಎರಡನೆದರಲ್ಲಿ ಪ್ರಕಾಶವನ್ನೂ ಕೃಪೆಯನ್ನೂ (ಮಗನಿಂದ), ಮೂರನೆದರಲ್ಲಿ (ಪರಿಶುದ್ಧಾತ್ಮನಿಂದುಂಟಾಗುವ) ಸಮಾಧಾನವನ್ನು ಬೇಡಿಕೊಳ್ಳುವದು.

೨) "ಸೈನ್ಯಗಳ ಯೆಹೋವನು ಪರಿಶುದ್ಧನು, ಪರಿಶುದ್ಧನು, ಪರಿಶುದ್ಧನು; ಭೂಮಿ ಎಲ್ಲಾ ಅವನ ಘನದಿಂದ ತುಂಬಿಯದೆ." (ಯೆಶಾ. ೬, ೩.)

೩) "ಯೆಹೋವ ನನ್ನ ಕರ್ತನಿಗೆ ಹೇಳಿದ್ದೇನಂದರೆ—ನಾನು ನಿನ್ನ ಶತ್ರುಗಳನ್ನು ನಿನ್ನ ಪಾದ ಪೀಠವಾಗಿ ಇಡುವ ಪರ್ಯಂತರ, ನನ್ನ ಬಲ ಪಾರ್ಶ್ವದಲ್ಲಿ ಕೂತುಕೋ." (ಕೀರ್ತ. ೧೧೦, ೧.)

**೧೫೯.** ಆದರೂ ಹೊಸ ಒಡಂಬಡಿಕೆಯಲ್ಲಿ, ಮಗನು ಕ್ರಿಸ್ತನಲ್ಲಿ ಮನುಷ್ಯನಾಗಲಾಗಿ ಮತ್ತು ಆತ್ಮವು ಸಮಸ್ತ ಮಾಂಸದ ಮೇಲೆ ಹೊಯ್ಯಲ್ಪಟ್ಟಿರಲಾಗಿ, ದೇವರ ತ್ರಿಯೇಕತ್ವವು ಸ್ವಚ್ಛವಾಗಿಯೂ ಖಂಡಿತವಾಗಿಯೂ ಎದುರಾಗುತ್ತದೆ. ಹ್ಯಾಗಂದರೆ ಇವರಲ್ಲಿ ಮಗನಿಗೂ ಆತ್ಮನಿಗೂ ಒಂದು ಕಡೆಯಲ್ಲಿ ತಂದೆಯೊಡನೆ ಏಕಸ್ವಭಾವವೂ (**೧೬೦. ೨೩೧.**) ಮತ್ತೊಂದು ಕಡೆಯಲ್ಲಿ ಮೂರ್ತಿತ್ವವೂ, ಸ್ವತಂತ್ರವೂ, ತಮ್ಮೊಳಗೂ ತಂದೆಯಿಂದಲೂ[1], ಬೇರೆಯಾಗಿರುವ ಪ್ರತ್ಯೇಕತ್ವವೂ ಉಂಟೆಂಬದು ಹೇಳಿ ಅದೆ. ಸ್ನಾನವಾಕ್ಯದಲ್ಲಿ (ಮತ್ತಾ. ೨೮, ೧೯.) ತ್ರಿಯೇಕತ್ವ ಬೋಧನೆಯು ಕ್ರೈಸ್ತ ವಿಶ್ವಾಸದ ಆಧಾರವಾಗಿಯೂ, ಅಪೊಸ್ತೊಲಿಕ ಆಶೀರ್ವಾದವಾಕ್ಯಗಳಲ್ಲಿ (ಉದಾಹರಣೆ. ೨ಕೊರಿ. ೧೩, ೧೩.) ಕ್ರೈಸ್ತ ಜೀವದ ಆಧಾರವಾಗಿಯೂ ಕಾಣ ಬರುತ್ತದೆ. (ಸಮ ನೋಡು ೧ ಯೋಹಾ. ೫, ೭.)

೧) "ನಾನು ತಂದೆಯನ್ನು ಬೇಡಿ ಕೊಳ್ಳುವೆನು; ಆಗಲವನು, ಎಂದೆಂದಿಗೂ ನಿಮ್ಮ ಸಂಗಡ ಇರುವದಕ್ಕೆ ಬೇರೊಬ್ಬ ಆದರಿಕನನ್ನು ನಿಮಗೆ ಕೊಡುವನು." (ಯೋಹಾ.೧೪, ೧೬.)

**೧೬೦.*** ಈ ಪ್ರಕಟಿತ ಸತ್ಯಕ್ಕೆ ಅನುಕೂಲವಾಗಿಯೂ (**೧೫೫ – ೧೫೯.**) ಲೋಕದಲ್ಲಿ ಬಂದಿರುವ ರಕ್ಷಣೆಯ ನಡದ ಕಾರ್ಯಗಳ ಆಧಾರದಿಂದಲೂ ಕ್ರೈಸ್ತ ಸಭೆಯು ಏಕಧ್ವನಿಯಾಗಿ ಹೇಳುವದೇನಂದರೆ: ಏಕವಾದ, ಅಭೇದ ಅಭೇದ್ಯ ದಿವ್ಯ ಸ್ವಭಾವವು ನಿತ್ಯದಿಂದ ಮೂರು ಮೂರ್ತಿಗಳಾಗಿ, ತಂದೆ, ಮಗ, ಪರಿಶುದ್ಧಾತ್ಮವಾಗಿ ಇರುತ್ತದೆ; ಇವರು ಸಂಪೂರ್ಣವಾದ ಸ್ವಭಾವ ಸಮಾನತ್ವದಿಂದ ಒಬ್ಬರ ಸಂಗಡ ಒಬ್ಬರು ಐಕ್ಯವಾಗಿಯೂ, ಮೂರ್ತಿತ್ವದಿಂದಲೂ ಅಹಂಭಾವದಿಂದಲೂ ಒಬ್ಬರಿಂದೊಬ್ಬರು ಬೇರೆ ಬೇರೆ ಆಗಿಯೂ ಇರುತ್ತಾರೆ.

ಪರಿಶಿ. ಸಭೆಯ ತ್ರಿಯೇಕತ್ವಬೋಧನೆಯ ವಿರೋಧಿಗಳಿಗೆ ಒಟ್ಟಿಗೆ ಪ್ರತಿತ್ರಿಯೇಕತ್ವವಾದಿಗಳು ಎಂದು ಹೇಳುತ್ತಾರೆ. ದೇವರು ಸ್ತಬ್ಧವಾದ ಏಕನೆಂದು ಹೇಳುವವರು ಏಕತ್ವವಾದಿಗಳು; ಮಗನೂ ಪರಿಶುದ್ಧಾತ್ಮನೂ ಮೂರ್ತಿವತ್ತಾಗಿರುವ ಸ್ವತಂತ್ರವಿಲ್ಲದೆ ದೇವತೆಯಿಂದ ಹೊರಟು ಬರುವ ಎರಡು ಶಕ್ತಿಗಳೆಂದೂ, ಅವುಗಳಿಂದ ದೇವರು ತನ್ನನ್ನು ಪ್ರಕಟಿಸಿ ಕಾರ್ಯ ನಡಿಸುತ್ತಾನೆಂದೂ ಹೇಳುವವರು ಸಬೆಲ್ಯರು (ಈ ಹೆಸರು ಸಬೆಲ್ಯನು ಎಂಬವನಿಂದ ಬಂತು, † ೨೬೦); ತಂದೆ ಮಗ ಪರಿಶುದ್ಧಾತ್ಮ ಎಂಬದು ದೇವತೆಯ ಇರೋಣ ಪ್ರಕಟಣೆಗಳ ಮೂರು ರೂಪಗಳು ಎಂದು ಹೇಳುವವರು ವಿಕಾರವಾದಿಗಳು. ಇಂದಿನ ಪರ್ಯಂತ ಇರುವಂಥಾ ಪ್ರತಿತ್ರಿಯೇಕತ್ವವಾದಿಗಳು ಸೊಚಿನ್ಯರು. ಈ ಮತಸ್ಥಾಪಕರು ಪುನಃಸ್ಥಾಪನೆಯ ಸಮಯದಲ್ಲಿ ಬದುಕಿದ (ಚಿಕ್ಕಪ್ಪ ಮತ್ತು ಮಗ ಆಗಿರುವ) ಇಬ್ಬರು ಸೊಚಿನರು.

---

* ಅಥನಾಸ್ಯನ ವಿಶ್ವಾಸಪ್ರಮಾಣ. "ರಕ್ಷಿಸಲ್ಪಡಲಿಚ್ಛೈಸುವವನು ಎಲ್ಲಾದಕ್ಕಿಂತ ಮೊದಲು ಸಮವಾದ ಕ್ರೈಸ್ತವಿಶ್ವಾಸವನ್ನು ಪಡಕೊಳ್ಳ ಬೇಕು. ಅದನ್ನು ಪೂರ್ಣವಾಗಿಯೂ ಶುದ್ಧವಾಗಿಯೂ ಕೈಕೊಳ್ಳದವನು ನಿಸ್ಸಂಶಯವಾಗಿ ನಿತ್ಯ ನಾಶವಾಗುತ್ತಾನೆ.—ಇದೆ ಸಮವಾದ ಕ್ರೈಸ್ತವಿಶ್ವಾಸವು ಏನಂದರೆ, ನಾವು ಏಕದೇವರನ್ನು ಮೂರು ಮೂರ್ತಿಗಳಲ್ಲಿಯೂ, ಮೂರು ಮೂರ್ತಿಗಳನ್ನು ಏಕದೇವತೆಯಲ್ಲಿಯೂ ಸನ್ಮಾನಿಸ ಬೇಕು—ಆದರೆ ಮೂರ್ತಿಗಳನ್ನು ಒಂದರಲ್ಲೊಂದು ಬೆರಿಕೆ ಮಾಡದೆಯೂ, ದಿವ್ಯ ಸ್ವಭಾವವನ್ನು ವಿಭೇದಿಸದೆಯೂ ಇರ ಬೇಕು.—ತಂದೆಯ ಮೂರ್ತಿ ಬೇರೆ, ಮಗನದು ಬೇರೆ, ಪರಿಶುದ್ಧಾತ್ಮನದು ಬೇರೆ. ಆದರೆ ತಂದೆ ಮಗ ಪರಿಶುದ್ಧಾತ್ಮ ಒಟ್ಟಿಗೆ ಮಹಿಮೆಯಲ್ಲಿ ಸಮಾನವಾಗಿಯೂ, ಸಮಾನ ನಿತ್ಯ ಸ್ವಾಮಿಯಾಗಿಯೂ ಇರುವ ಏಕ ದೇವತೆ.—ತಂದೆ ಎಂಥವನೊ, ಅಂಥವನೆ ಮಗನು, ಅಂಥವನೆ ಪರಿಶುದ್ಧಾತ್ಮನು. ತಂದೆ ಅನಿರ್ಮಿತನು, ಮಗನು ಅನಿರ್ಮಿತನು, ಪರಿಶುದ್ಧಾತ್ಮನು ಅನಿರ್ಮಿತನು.—ತಂದೆ ಅಪರಿಮಿತನು, ಮಗ ಅಪರಿಮಿತನು, ಪರಿಶುದ್ಧಾತ್ಮ ಅಪರಿಮಿತನು. ತಂದೆ ನಿತ್ಯನು, ಮಗ ನಿತ್ಯನು, ಪರಿಶುದ್ಧಾತ್ಮ ನಿತ್ಯನು. ಆದರೂ ಮೂವರು ನಿತ್ಯರಲ್ಲ, ಒಬ್ಬನೆ ನಿತ್ಯನು. ಅದೇ ಪ್ರಕಾರ ಮೂವರು ಅನಿರ್ಮಿತರಲ್ಲ, ಮೂವರು ಅಪರಿಮಿತರಲ್ಲ, ಒಬ್ಬನೆ ಅನಿರ್ಮಿತನು, ಒಬ್ಬನೆ ಅಪರಿಮಿತನು. ಹಾಗೆಯೆ ತಂದೆ ಸರ್ವಶಕ್ತ ಪ್ರಾಣಿ, ಮಗ ಸರ್ವಶಕ್ತ ಪ್ರಾಣಿ, ಪರಿಶುದ್ಧಾತ್ಮ ಸರ್ವಶಕ್ತ ಪ್ರಾಣಿ. ಆದರೂ ಮೂವರು ಸರ್ವಶಕ್ತ ಪ್ರಾಣಿಗಳಲ್ಲ, ಒಬ್ಬನೆ ಸರ್ವಶಕ್ತ ಪ್ರಾಣಿ. ಹಾಗೆಯೆ ತಂದೆ ದೇವರು, ಮಗ ದೇವರು, ಪರಿಶುದ್ಧಾತ್ಮ ದೇವರು. ಆದರೂ ಮೂವರು ದೇವರುಗಳಲ್ಲ, ಒಬ್ಬನೆ ದೇವರು. ಹಾಗೆಯೆ ತಂದೆ ಕರ್ತನು, ಮಗ ಕರ್ತನು, ಪರಿಶುದ್ಧಾತ್ಮ ಕರ್ತನು. ಆದರೂ ಮೂವರು ಕರ್ತರುಗಳಲ್ಲ, ಒಬ್ಬನೆ ಕರ್ತನು. ಯಾಕಂದರೆ, ಕ್ರೈಸ್ತ ಸತ್ಯಕ್ಕೆ ಸರಿಯಾಗಿ ನಾವು ಒಂದೊಂದು ಮೂರ್ತಿ

**೧೬೧.** ಈ ಮೂರು ಪರಿಶುದ್ಧ ಮೂರ್ತಿಗಳ ಪರಸ್ಪರ ಸಂಬಂಧದ ವಿಷಯದಲ್ಲಿ ಸಭೆಯು ಪರಿಶುದ್ಧ ಬರಹದ ಆಧಾರದಿಂದ ಕಲಿಸುವದೇನಂದರೆ, ತಂದೆಯಾದ ದೇವರು ಮಗನನ್ನು ನಿತ್ಯದಿಂದ ಪಡೆಯುತ್ತಾನೆ (ನಿರ್ಮಿಸುತ್ತಾನಲ್ಲಾ)[೧]; ಮತ್ತು ಪರಿಶುದ್ಧಾತ್ಮನು ತಂದೆಯಿಂದಲೂ ಮಗನಿಂದಲೂ ನಿತ್ಯದಿಂದ ಹೊರಡುತ್ತಾನೆ[೨].

೧) "ನೇಮಕವನ್ನು ಸಾರುತ್ತೇನೆ. ಯೆಹೋವನು ನನಗೆ ಹೇಳಿದ್ದು—ನೀನು ನನ್ನ ಮಗನು, ನಾನು ಈ ಹೊತ್ತು ನಿನ್ನನ್ನು ಪಡೆದಿದ್ದೇನೆ." (ಕೀರ್ತ. ೨, ೭.) (ಸಮ ನೋಡು ಇಬ್ರಿ. ೧, ೫. ೫, ೫. ಯೋಹಾ. ೧, ೧. ೨. ಕೊಲೊ. ೧, ೧೫. ಇಬ್ರಿ. ೧, ೨. ೩.) (**೧೫೬.**)

೨) "ಆದರೆ ನಾನು ತಂದೆಯ ಬಳಿಯಿಂದ ನಿಮಗೆ ಕಳುಹಿಸುವಂಥ, ತಂದೆಯ ಬಳಿಯಿಂದ ಹೊರಡುವಂಥ, ಸತ್ಯದ ಆತ್ಮವೆಂಬ ಆದರಿಕನು ಬಂದಾಗ ಅವನೇ ನನ್ನನ್ನು ಕುರಿತು ಸಾಕ್ಷಿ ಕೊಡುವನು." (ಯೋಹಾ. ೧೫, ೨೬.) "ಯಾವನಿಗಾದರೂ ಕ್ರಿಸ್ತನ ಆತ್ಮವು ಇಲ್ಲದಿದ್ದರೆ, ಅವನು ಕ್ರಿಸ್ತನವನಲ್ಲ." (ರೋಮಾ. ೮, ೯.)

**೧೬೨.** ದೇವರ ಸ್ವಭಾವವು ಹೊರಗಿನ ಕಡೆಗೆ ಆತನ ಸ್ಥಾನ ಕೃತ್ಯ ಪ್ರಕಟಣೆಗಳಲ್ಲಿ ಮನುಷ್ಯನ ಗ್ರಹಿಕೆಗೆ (ಇದು ಒಂದು ವಸ್ತುವಿನ ಎಲ್ಲಾ ತಾರತಮ್ಯಗಳನ್ನೂ ಪರಸ್ಪರ ಸಂಬಂಧಗಳನ್ನೂ ಒಂದೇ ಪೆಟ್ಟಿಗೆ ಗ್ರಹಿಸಲಾರದೆ, ಒಂದೊಂದೆಯಾಗಿ ನೋಡಿ ಗ್ರಹಿಸಬಲ್ಲದ್ದಾಗಿರಲಾಗಿ) ಬೇರೆ ಬೇರೆ ದಿವ್ಯ ಗುಣಗಳ ಪರಿಪೂರ್ತಿಯಾಗಿ ಕಾಣ ಬರುತ್ತದೆ. ದೇವರು ತನ್ನ ದಿವ್ಯ ಸ್ವಭಾವದಿಂದ ನಿಶ್ಚಯಿಸುವ ಪರಸ್ಪರ ಸಂಬಂಧದಲ್ಲಿ ಸೇರುವ ವಸ್ತುಗಳ ಭೇದದಿಂದ ಈ ಗುಣಗಳ ಬಹುತ್ವವೂ ಭೇದವೂ ಸಿದ್ಧವಾಗುತ್ತದೆ.

---

ಯು ತಾನೆ ದೇವರೂ ಕರ್ತನೂ ಆಗಿರುತ್ತದೆಂದು ಅರಿಕೆ ಮಾಡ ಬೇಕು ಹ್ಯಾಗೊ, ಹಾಗೆಯೆ ಕ್ರೈಸ್ತವಿಶ್ವಾಸದಲ್ಲಿ, ಮೂವರು ದೇವರೆಂದೂ, ಮೂವರು ಕರ್ತರೆಂದೂ ಹೇಳಲಾಗದು. ತಂದೆಯು ಯಾರಿಂದಲಾದರೂ ಮಾಡಲ್ಪಟ್ಟವನೂ ಅಲ್ಲಾ, ನಿರ್ಮಿಸಲ್ಪಟ್ಟವನೂ ಅಲ್ಲಾ, ಹುಟ್ಟಿದವನೂ ಅಲ್ಲಾ. ಮಗನು ತಂದೆಯಿಂದ ಮಾತ್ರವೆ ಇರುತ್ತಾನೆ; ಆದರೆ ಮಾಡಲ್ಪಟ್ಟವನೂ ನಿರ್ಮಿಸಲ್ಪಟ್ಟವನೂ ಅಲ್ಲಾ. ಹುಟ್ಟಿದವನು ಮಾತ್ರವೆ. ಪರಿಶುದ್ಧಾತ್ಮನು ತಂದೆಯಿಂದಲೂ ಮಗನಿಂದಲೂ ಇರುತ್ತಾನೆ; ಮಾಡಲ್ಪಟ್ಟವನೂ ನಿರ್ಮಿಸಲ್ಪಟ್ಟವನೂ ಹುಟ್ಟಿದವನೂ ಅಲ್ಲಾ, ಹೊರಡುವವನು ಮಾತ್ರವೆ. ಈ ಪ್ರಕಾರ ತಂದೆ ಒಬ್ಬನೆ; ಮೂವರು ತಂದೆಯುಂದಿರಲ್ಲಾ, ಮಗ ಒಬ್ಬನೆ, ಮೂವರು ಮಗಂದಿರು ಅಲ್ಲಾ; ಪರಿಶುದ್ಧಾತ್ಮ ಒಬ್ಬನೆ, ಮೂವರು ಪರಿಶುದ್ಧಾತ್ಮರಲ್ಲಾ. ಮತ್ತು ತ್ರಿಯೇಕತ್ವದಲ್ಲಿ ಒಬ್ಬನಾದರೂ ಮೊದಲನೆಯವನೂ ಅಥವಾ ಕಡೆಯುವನೂ, ಒಬ್ಬನಾದರೂ ದೊಡ್ಡವನೂ ಅಥವಾ ಚಿಕ್ಕವನೂ ಆಗಿರುವದಿಲ್ಲಾ. ಎಲ್ಲಾ ಮೂರು ಮೂರ್ತಿಗಳು ತಮ್ಮೊಳಗೆ ಸಮಾನ ನಿತ್ಯರಾಗಿಯೂ ಸಮಾನ ಶ್ರೇಷ್ಠರಾಗಿಯೂ ಇರುತ್ತಾರೆ. ಈ ಪ್ರಕಾರ ಮೇಲೆ ಹೇಳಿದ್ದಕ್ಕೆ ಸರಿಯಾಗಿ ಮೂರು ಮೂರ್ತಿಗಳು ಒಂದೇ ದೈವತ್ವದಲ್ಲಿಯೂ, ಒಬ್ಬನೆ ದೇವರು ಮೂರು ಮೂರ್ತಿಗಳಲ್ಲಿಯೂ ಸನ್ಮಾನಿಸಲ್ಪಡ ತಕ್ಕದ್ದು. ಆದಕಾರಣ ರಕ್ಷಿಸಲ್ಪಡ ಬೇಕೆಂದಿರುವವನು ತ್ರಿಯೇಕತ್ವದ ವಿಷಯದಲ್ಲಿ ಹೀಗೆ ಆಲೋಚಿಸ ಬೇಕು."

ಪರಿಶಿ. ತಂದೆಯೂ ಮಗನೂ ಪರಿಶುದ್ಧಾತ್ಮನೂ ಪೂರ್ಣವಾಗಿ ಏಕ ಸ್ವಭಾವವುಳ್ಳವರಾಗಿರುವದರಿಂದ, ಎಲ್ಲಾ ದಿವ್ಯ ಗುಣಗಳು ದಿವ್ಯ ಮೂರ್ತಿಗಳಲ್ಲಿ ಒಬ್ಬೊಬ ನಿಗೆ ಉಂಟೆಂದು ಹೆಚ್ಚುಕಡಿಮೆ ಇಲ್ಲದೆ ಹೇಳ ಬೇಕು.

**೧೬೨.** ಲೋಕದ ಕಡೆಗಿರುವ ದೇವರ ಸಂಬಂಧವು ಇಮ್ಮಡಿಯಾದದ್ದು. ಆತನು ಆತ್ಮವೂ ಎಲ್ಲಾ ವಸ್ತುಗಳ ಮೂಲಕಾರಣವೂ ಆಗಿರುವಷ್ಟಕ್ಕೆ ಆತನು ಲೋಕದಿಂದ ಬೇರೆಯಾಗಿಯೂ ಅದರ ಮೇಲೆ ಅನಂತವಾಗಿ ಶ್ರೇಷ್ಠನಾಗಿಯೂ ಅದರಲ್ಲಿ ಇರುವ ಯಾವದಕ್ಕಾದರೂ ಒಳಗಾಗದೆಯೂ ಅಡ್ಡಿ ಪಡದವನಾಗಿಯೂ ಇರುತ್ತಾನೆ. ಆತನು ಜೀವವೂ ಪ್ರೀತಿಯೂ, ಅಥವಾ ಎಲ್ಲಾ ವಸ್ತುಗಳ ಪಾಲಕನೂ ಆಗಿರುವಷ್ಟಕ್ಕೆ ಲೋಕದಲ್ಲಿ ಇರುತ್ತಾನೆ, ಬದುಕುತ್ತಾನೆ, ಯತ್ನೈಸುತ್ತಾನೆ; ಲೋಕವನ್ನು ಎಲ್ಲಾ ವಿಷಯದಲ್ಲಿಯೂ ಸಮಸ್ತ ಪ್ರಕಾರವಾಗಿಯೂ ವ್ಯಾಪಿಸುತ್ತಾನೆ, ಆಧರಿಸುತ್ತಾನೆ, ಬದುಕಿಸುತ್ತಾನೆ, ಆಳುತ್ತಾನೆ. ಲೋಕದ ಕಡೆಗಿರುವ ಈ ಎರಡು ಸಂಬಂಧಗಳಿಂದ ಗುಣಗಳ ಎರಡು ತರಗಳು ಸಹಾ ಪ್ರತ್ಯಕ್ಷವಾಗುತ್ತವೆ.

**೧೬೪.** ದಿವ್ಯ ಗುಣಗಳ ಈ ೨ ತರಗಳಿಂದ ಒಂದೊಂದಕ್ಕೆ ಎರಡೆರಡು ಭಾಗವಾಗುತ್ತದೆ. ಒಂದು ಭಾಗದವುಗಳು (ಸ್ಥಳ ಕಾಲಗಳ ಮೇಲೆ ನಡಿಯುವ) ಸಾಧಾರಣವಾಗಿ ಲೋಕದಲ್ಲಿ ಪ್ರಕಟವಾಗುವ ಗುಣಗಳು. ಎರಡನೆ ಭಾಗದವುಗಳು ಮುಖ್ಯವಾಗಿ ಅಹಂಭಾವಿಯಾದ ನಿರ್ಮಾಣದ ಸ್ವತಂತ್ರ ನ್ಯಾಯ ಸ್ಥಿತಿ ಹೊಣೆಗಾರಿಕೆಗಳನ್ನು ನಡಿಸುವ ಗುಣಗಳು. (ಸಮ ನೋಡು **೧೬೨.** ಇತ್ಯಾದಿ.)

**೧೬೫.** ಸಾಧಾರಣವಾಗಿ ಲೋಕದ ವಿಷಯದಲ್ಲಿ ಪ್ರತ್ಯಕ್ಷವಾಗುವ ದೇವರ ಗುಣಗಳಿಂದ ಒಂದು ಕಡೆಯಲ್ಲಿ ಯಾವ ಸ್ಥಳಕ್ಕೂ ಕಾಲಕ್ಕೂ ಒಳಗಾಗದಂಥಾ ಅನಂತವಾದ ಆತನ ಶ್ರೇಷ್ಠತೆಯು, ಅಂದರೆ, ನಿತ್ಯತ್ವವೂ,[೧], ಸ್ಥಳ ಪರತ್ವವೂ, (ಅಪ್ರಮೇಯತ್ವವೂ, ಶರೀರರಹಿತತ್ವವೂ ಆತ್ಮಿಕತ್ವವೂ)[೨] ಮತ್ತೊಂದು ಕಡೆಯಲ್ಲಿ ಜೀವವುಳ್ಳದ್ದಾಗಿಯೂ ಯತ್ನವುಳ್ಳದ್ದಾಗಿಯೂ ಇರುವ ಕಾಲ ಸ್ಥಳಗಳ ಆತನ ವ್ಯಾಪಕತ್ವವೂ, ಬದುಕಿಸೋಣವೂ, ಆಳೋಣವೂ, ಅಂದರೆ, ಸರ್ವತ್ರತ್ವವೂ[೩], ಸರ್ವತ್ರಾಣವೂ[೪], ಸರ್ವಜ್ಞತೆಯೂ[೫], ವರ್ಣಿಸಿ ಅದೆ. ಹ್ಯಾಗಂದರೆ ಆತನು ಸ್ಥಳವನ್ನೂ, ಕಾಲವನ್ನೂ ತನ್ನ ಸ್ವಭಾವದಿಂದಲೂ ತನ್ನ ಚಿತ್ತದಿಂದಲೂ ತನ್ನ ಜ್ಞಾನದಿಂದಲೂ ವ್ಯಾಪಿಸುತ್ತಾನಲ್ಲವೇ!

೧) "ಕರ್ತನೇ, ತಲತಲಾಂತರಗಳಲ್ಲಿ ನೀನು ನಮ್ಮ ವಾಸಸ್ಥಾನವಾಗಿದ್ದೀ. ಬೆಟ್ಟಗಳು ಹುಟ್ಟುವದಕ್ಕಿಂತ ಮುಂಚೆಯೂ, ನೀನು ಭೂಮಿಯನ್ನೂ ಲೋಕವನ್ನೂ ನಿರ್ಮಿ

ಸುವದಕ್ಕಿಂತ ಮುಂಚೆಯೂ, ಯುಗಯುಗದಿಂದ ಯುಗಯುಗಕ್ಕೂ ನೀನು ದೇವರಾಗಿದ್ಧೀ. . . ಸಾವಿರ ವರುಷಗಳು ನಿನ್ನ ದೃಷ್ಟಿಗೆ ಕಳೆದು ಹೋಗುವ ನಿನ್ನಿನ ದಿವಸದ ಹಾಗೆಯೂ, ರಾತ್ರಿ ಝಾವದ ಹಾಗೆಯೂ, ಅವೆ." (ಕೀರ್ತ. ೯೦, ೧—೪.) "ಕರ್ತನಲ್ಲಿ ಒಂದು ದಿವಸವು ಸಾವಿರ ವರುಷಗಳ ಹಾಗೆಯೂ, ಸಾವಿರ ವರುಷಗಳು ಒಂದು ದಿವಸದ ಹಾಗೆಯೂ, ಅವೆ." (೨ ಪೇತ್ರ. ೩, ೮.) "ನಿನ್ನ ವರುಷಗಳು ತಲತಲಾಂತರಗಳಿಗೂ ಅವೆ, ಅಂದೆನು. ನೀನು ಪೂರ್ವದಲ್ಲಿ ಭೂಮಿಯನ್ನು ಸ್ಥಾಪಿಸಿದಿ; ಆಕಾಶಗಳು ನಿನ್ನ ಕೈಕೆಲಸಗಳಾಗಿವೆ. ಅವು ನಾಶವಾಗುವವು; ಆದರೆ ನೀನು ನೆಲೆಯಾಗಿರುತ್ತೀ; ಅವುಗಳೆಲ್ಲಾ ವಸ್ತ್ರದ ಹಾಗೆ ಜೀರ್ಣವಾಗುವವು; ಅಂಗಿಯ ಹಾಗೆ ಅವುಗಳನ್ನು ಬದಲಾಯಿಸುವಿ; ಆಗ ಬದಲಾಗುವವು. ಆದರೆ ನೀನು ಅವನೇ; ನಿನ್ನ ವರುಷಗಳು ಮುಗಿಯವು." (ಕೀರ್ತ. ೧೦೨, ೨೫—೨೭.) "ಒಬ್ಬನೇ ಅಮರತ್ವವುಳ್ಳವನು." (೧ ತಿಮೊ. ೬, ೧೬.)

೨) "ದೇವರು ನಿಶ್ಚಯವಾಗಿ ಭೂಮಿಯ ಮೇಲೆ ವಾಸವಾಗಿರುವನೋ? ಇಗೋ ಆಕಾಶಗಳೂ ಆಕಾಶಾಕಾಶಗಳೂ ನಿನ್ನನ್ನು ಹಿಡಿಯಲಾರವು." (೧ ಅರಸು. ೮, ೨೭.) "ಯೆಹೋವನು ಹೇಳುವದೇನಂದರೆ—ಆಕಾಶವು ನನ್ನ ಸಿಂಹಾಸನವು; ಭೂಮಿಯು ನನ್ನ ಪಾದ ಪೀಠವು." (ಯೆಶಾ. ೬೬, ೧.) (ಮತ್ತಾ. ೫, ೩೪. ೩೫.)

೩) "ನಾನು ಸಮೀಪದಲ್ಲಿ ದೇವರಾಗಿದ್ದು, ದೂರದಲ್ಲಿಯೂ ದೇವರಲ್ಲವೋ? ನಾನು ಅವನನ್ನು ನೋಡದ ಹಾಗೆ, ಒಬ್ಬನು ಮರೆಯಾದ ಸ್ಥಳಗಳಲ್ಲಿ ತನ್ನನ್ನು ಅಡಗಿಸಿಕೊಳ್ಳಬಹುದೋ? ಎಂದು ಯೆಹೋವನು ಅನ್ನುತ್ತಾನೆ; ನಾನು ಆಕಾಶವನ್ನೂ ಭೂಮಿಯನ್ನೂ ತುಂಬುತ್ತೇನೆ ಅಲ್ಲವೋ? ಎಂದು ಯೆಹೋವನು ಅನ್ನುತ್ತಾನೆ." (ಯೆರೆ. ೨೩, ೨೩. ೨೪.) "ನಿನ್ನ ಆತ್ಮಕ್ಕೆ ತಪ್ಪಿ, ಎಲ್ಲಿಗೆ ಹೋಗಲಿ? ನಿನ್ನ ಮುಖಕ್ಕೆ ತಪ್ಪಿ, ಎಲ್ಲಿಗೆ ಓಡಲಿ? ನಾನು ಆಕಾಶಕ್ಕೆ ಏರಿ ಹೋದರೆ, ನೀನು ಅಲ್ಲಿ ಇದ್ಧೀ; ಪಾತಾಳವನ್ನು ನನ್ನ ಹಾಸಿಗೆಯಾಗಿ ಮಾಡಿದರೆ, ಅಗೋ, ನೀನು ಅಲ್ಲಿ ಇದ್ಧೀ. ಉದಯದ ರೆಕ್ಕೆಗಳನ್ನು ತಕ್ಕೊಂಡು, ಸಮುದ್ರದ ಕಟ್ಟ ಕಡೆಯಲ್ಲಿ ವಾಸ ಮಾಡಿದರೆ, ಅಲ್ಲಿಯೂ ನಿನ್ನ ಕೈ ನನ್ನನ್ನು ನಡಿಸಿ, ನಿನ್ನ ಬಲಗೈ ನನ್ನನ್ನು ಹಿಡಿಯುವದು. ನಿಶ್ಚಯವಾಗಿ ಕತ್ತಲೆಯು ನನ್ನನ್ನು ಕೌಚಿಕೊಳ್ಳುವದೆಂದು ಹೇಳಿದರೆ ರಾತ್ರಿಯು ನನ್ನ ಸುತ್ತಲು ಬೆಳಕಾಗಿರುವದು." (ಕೀರ್ತ. ೧೩೯, ೭—೧೧.) (ಅ. ಕ್ರಿ. ೧೭, ೨೭. ೨೮.) (**೧೪೯**, ೧.)

೪) "ಅವನು ಹೇಳಲು ಆಯಿತು; ಅವನು ಆಜ್ಞಾಪಿಸಲು ಸ್ಥಿರವಾಯಿತು." (ಕೀರ್ತ. ೩೩, ೯.) "ನಮ್ಮ ದೇವರು ಪರಲೋಕದಲ್ಲಿದ್ದಾನೆ; ತಾನು ಇಚ್ಛೈಸುವದನ್ನೆಲ್ಲಾ ಮಾಡುತ್ತಾನೆ." (ಕೀರ್ತ. ೧೧೫, ೩.) "ದೇವರ ಬಳಿಯಲ್ಲಿ ಯಾವ ಕಾರ್ಯವಾದರೂ ಅಸಾಧ್ಯವಲ್ಲ." (ಲೂಕ. ೧, ೩೭.) (ಕೀರ್ತ. ೧೩೫, ೬. ಎಫೆ. ೩, ೨೦.)

೫) "ಲೋಕಾರಭ್ಯ ದೇವರಿಗೆ ತನ್ನ ಕ್ರಿಯೆಗಳೆಲ್ಲಾ ತಿಳಿದವೆ." (ಅ. ಕ್ರಿ. ೧೫, ೧೮.)

"ಮತ್ತು ಅವನ ಸಮ್ಮುಖದಲ್ಲಿ ಪ್ರತ್ಯಕ್ಷವಾಗದಿರುವ ಸೃಷ್ಟಿಯೂ ಇಲ್ಲ; ಆದರೆ ಯಾರ ಸಂಗಡ ನಮಗೆ ಕಾರ್ಯ ಉಂಟೋ, ಅವನ ಕಣ್ಣುಗಳಿಗೆ ಸಮಸ್ತವು ಬೆತ್ತಲೆಯಾಗಿಯೂ ತೆರೆದದ್ದಾಗಿಯೂ ಇದೆ." (ಇಬ್ರಿ. ೪, ೧೩.) "ಕಿವಿಯನ್ನು ನೆಡುವವನು ಕೇಳನೋ? ಕಣ್ಣನ್ನು ರೂಪಿಸುವವನು ದೃಷ್ಟಿಸನೋ?" (ಕೀರ್ತ. ೯೪, ೯.) "ಯೆಹೋವನೇ, ನನ್ನನ್ನು ಪರಿಶೋಧಿಸಿ, ತಿಳು ಕೊಂಡಿದ್ದೀ; ನಾನು ಕೂಡ್ರುವದನ್ನೂ, ಏಳುವದನ್ನೂ, ನೀನು ತಿಳು ಕೊಂಡಿದ್ದೀ; ನನ್ನ ಆಲೋಚನೆಯನ್ನು ದೂರದಿಂದ ಗ್ರಹಿಸಿ ಕೊಂಡಿದ್ದೀ. ನಾನು ನಡೆಯುವದನ್ನೂ, ನಾನು ಮಲಗುವದನ್ನೂ, ನೀನು ಶೋಧಿಸಿದ್ದೀ; ನನ್ನ ಮಾರ್ಗಗಳೆಲ್ಲಾ ನಿನಗೆ ಗೊತ್ತಾಗಿವೆ. ಯಾಕಂದರೆ, ಇಗೋ, ಯೆಹೋವನೇ, ನನ್ನ ನಾಲಿಗೆಯಲ್ಲಿ ನಿನಗೆ ಪೂರ್ಣವಾಗಿ ತಿಳಿಯದ ಮಾತು ಒಂದಾದರೂ ಇಲ್ಲ." (ಕೀರ್ತ. ೧೩೯, ೧—೪.)

**೧೬೬.** ಅಹಂಭಾವಿಯಾಗಿರುವ ನಿರ್ಮಾಣದ ಸ್ವತಂತ್ರ ನ್ಯಾಯ ಸ್ಥಿತಿಗಳ ವಿಷಯವಾಗಿರುವ ದೇವರ ಗುಣಗಳಿಂದ ವರ್ಣಿಸಲ್ಪಡುವದೇನಂದರೆ: ಒಂದು ಕಡೆಯಲ್ಲಿ ಮಾನುಷ ನ್ಯೂನತೆಗೂ, ಅಪೂರ್ಣತೆಗೂ, ಪಾಪತ್ವಕ್ಕೂ, ಬಡತನಕ್ಕೂ ಮೇಲಾಗಿರುವ ದೇವರ ಅನಂತ ಎತ್ತರವಾಗಿರೋಣ, ಅಂದರೆ: ಆತನ ಜ್ಞಾನ[೧], ಸ್ವಾಮಿತ್ವ, ಮಹಿಮೆ[೨], ಪರಿಶುದ್ಧತ್ವ[೩], ಆನಂದ[೪] — ಮತ್ತೊಂದು ಕಡೆಯಲ್ಲಿ, ನಿರ್ಮಾಣದ ಸ್ವತಂತ್ರದ ಮತ್ತು ನ್ಯಾಯಸ್ಥಿತಿಯ ಕಡೆಗಿರುವ ಆತನ ಜೀವವುಳ್ಳ ಯತ್ನವುಳ್ಳ ನಡತೆ, ಅಂದರೆ: ಆತನ ನೀತಿ[೫] ಒಳ್ಳೇತನ (ಮನುಷ್ಯನ ಪಾಪತ್ವಕ್ಕಾಗಿ ಮುಖ್ಯವಾಗಿ: ಕರುಣೆ, ಕೃಪೆ, ತಾಳ್ಮೆ, ದೀರ್ಘಶಾಂತಿ)[೬], ನಂಬಿಕೆ, ಸತ್ಯತ್ವ[೭].

೧) "ನನ್ನ ಆಲೋಚನೆಗಳು ನಿಮ್ಮ ಆಲೋಚನೆಗಳಲ್ಲ, ನಿಮ್ಮ ಮಾರ್ಗಗಳು ನನ್ನ ಮಾರ್ಗಗಳಲ್ಲ, ಎಂದು ಯೆಹೋವನು ಹೇಳುತ್ತಾನೆ. ಯಾಕಂದರೆ ಆಕಾಶವು ಭೂಮಿಯ ಮೇಲೆ ಎಷ್ಟು ಉನ್ನತವೋ, ನನ್ನ ಮಾರ್ಗಗಳು ನಿಮ್ಮ ಮಾರ್ಗಗಳ ಮೇಲೆಯೂ, ನನ್ನ ಆಲೋಚನೆಗಳು ನಿಮ್ಮ ಆಲೋಚನೆಗಳ ಮೇಲೆಯೂ, ಅಷ್ಟು ಉನ್ನತವಾಗಿವೆ" (ಯೆಶಾ. ೫೫, ೮. ೯.) "ಅವನ ವಿವೇಕಕ್ಕೆ ಎಣಿಕೆ ಇಲ್ಲ." (ಕೀರ್ತ. ೧೪೭, ೫.) "ಅವನಿಗೆ ಆಶ್ಚರ್ಯವಾದ ಆಲೋಚನೆಯೂ, ದೊಡ್ಡ ಚಾತುರ್ಯವೂ ಉಂಟು." (ಯೆಶಾ. ೨೮, ೨೯. "ಓ ದೇವರ ಜ್ಞಾನಗಳ ಐಶ್ವರ್ಯದ ಅಗಾಧವೇ! ಅವನ ನ್ಯಾಯತೀರ್ವಿಕೆಗಳು ಎಷ್ಟೋ ಅಶೋಧ್ಯವಾಗಿವೆ! ಅವನ ಹಾದಿಗಳು ಎಷ್ಟೋ ಅಮಾರ್ಗ್ಯವಾಗಿವೆ! ಯಾಕಂದರೆ ಕರ್ತನ ಮನಸ್ಸನ್ನು ತಿಳಿದವನ್ಯಾರು? ಇಲ್ಲವೆ ಅವನಿಗೆ ಆಲೋಚನೆ ಹೇಳಿದವನ್ಯಾರು?" (ರೋಮಾ. ೧೧, ೩೩. ೩೪.) "ಒಬ್ಬನೇ ಜ್ಞಾನಿಯಾಗಿರುವ ದೇವರು." (ಯೂದ. ೨೫.)

೨) "ನಿನ್ನ ದೇವರಾದ ಯೆಹೋವನು ದೊಡ್ಡ ಭಯಂಕರನಾದ ದೇವರಾಗಿ ನಿನ್ನ ಮಧ್ಯದಲ್ಲಿದ್ದಾನೆ." (ದ್ವಿತಿ. ೭, ೨೧.) "ಭೂಮಿಯೆಲ್ಲಾ ಯೆಹೋವನಿಗೆ ಭಯ ಪಡಲಿ;

ಭೂಲೋಕನಿವಾಸಿಗಳೆಲ್ಲರು ಅವನಿಗೆ ಅಂಜಲಿ." (ಕೀರ್ತ. ೩೩, ೮.) (ಹೊರ. ೨೪,೧೦. ೩೩, ೨೨. ಯೆಶಾ. ೬, ೧. ೧ ತಿಮೊ. ೬, ೧೫. ೧೬.) (**೧೫೫.** ೧.) ಇತ್ಯಾದಿ.

೩) "ನೀನು ದುಷ್ಟತ್ವದಲ್ಲಿ ಸಂತೋಷಿಸುವ ದೇವರಲ್ಲ; ಕೆಟ್ಟತನವು ನಿನ್ನ ಬಳಿಯಲ್ಲಿ ತಂಗದು." (ಕೀರ್ತ. ೫, ೪.) (೧ ಪೇತ್ರ. ೧, ೧೫. ೧೬. ಯೆಶಾ. ೬, ೩.)

೪) "ತಾನೇ ಎಲ್ಲರಿಗೆ ಜೀವವನ್ನೂ ಉಸುರನ್ನೂ ಎಲ್ಲವುಗಳನ್ನೂ ಕೊಡುವವನಾಗಿ, ಏನಾದರೂ ಬೇಕಾದವನ ಹಾಗೆ, ಮನುಷ್ಯರ ಕೈಗಳಿಂದ ಪೂಜಿಸಲ್ಪಡುವದಿಲ್ಲ." (ಅ. ಕ್ರಿ. ೧೭, ೨೫.) (೧ ತಿಮೊ. ೬, ೧೫.)

೫) "ಅವನು ಒಬ್ಬೊಬ್ಬನಿಗೆ ಅವನವನ ಕ್ರಿಯೆಗಳ ಪ್ರಕಾರ ಬದಲು ಕೊಡುವನು." ಇತ್ಯಾದಿ. (ರೋಮಾ. ೨, ೬—೧೦.) (ಗಲಾ. ೬, ೭—೯. ಯೋಬ. ೩೪, ೧೦—೧೨.) (**೧೩೩.**) "ಯೆಹೋವನು ನೀತಿಗಳನ್ನೂ ನ್ಯಾಯಗಳನ್ನೂ ಬಲಾತ್ಕಾರ ಪಡುವವರೆಲ್ಲರಿಗೆ ನಡಿಸುತ್ತಾನೆ." (ಕೀರ್ತ. ೧೦೩, ೬.) (ಕೀರ್ತ. ೩೪, ೧೫. ೧೬.)

೬) "ಯೆಹೋವನು ಸರ್ವಕ್ಕೂ ಒಳ್ಳೆಯವನು; ಅವನ ಅಂತಃಕರಣವು ಅವನ ಎಲ್ಲಾ ಕೆಲಸಗಳ ಮೇಲೆ ಅದೆ." (ಕೀರ್ತ. ೧೪೫, ೯.) "ಯೆಹೋವನನ್ನು ಕೊಂಡಾಡಿರಿ, ಯಾಕಂದರೆ ಅವನು ಒಳ್ಳೆಯವನು; ಯಾಕಂದರೆ ಅವನ ಕೃಪೆಯು ಯುಗಯುಗಕ್ಕೂ ಅದೆ." (ಕೀರ್ತ. ೧೧೮, ೧.) "ಯೆಹೋವನು ಅಂತಃಕರಣವೂ ದಯವೂ ದೀರ್ಘಶಾಂತಿಯೂ ಬಹಳ ಕೃಪೆಯೂ ಉಳ್ಳವನಾಗಿದ್ದಾನೆ." ಇತ್ಯಾದಿ. (ಕೀರ್ತ. ೧೦೩, ೪—೧೪.) "ಸ್ತ್ರೀ ತನ್ನ ಮೊಲೆಕೂಸನ್ನು ಮರೆಯುವಳೇ? ತನ್ನ ಗರ್ಭದ ಮಗನನ್ನು ಕರುಣಿಸಳೇ? ಹೌದು, ಇವರು ಮರೆತಾರು; ಆದರೆ ನಾನು ನಿನ್ನನ್ನು ಮರೆಯುವದಿಲ್ಲ." (ಯೆಶಾ. ೪೯, ೧೫.) "ಎಫ್ರಾಯಿಮನು ನನಗೆ ಪ್ರಿಯ ಕುಮಾರನೋ? ಅವನು ಆನಂದವುಳ್ಳ ಮಗುವೋ? ನಿಶ್ಚಯವಾಗಿ, ನಾನು ಅವನಿಗೆ ವಿರೋಧವಾಗಿ ಮಾತಾಡಿದಂದಿನಿಂದ, ಅವನನ್ನು ಇನ್ನು ಬಹಳವಾಗಿ ಜ್ಞಾಪಕ ಮಾಡುತ್ತೇನೆ; ಆದದರಿಂದ ನನ್ನ ಕರುಳುಗಳು ಅವನಿಗೋಸ್ಕರ ಅರಚುತ್ತವೆ; ನಿಶ್ಚಯವಾಗಿ ಅವನಮ್ನು ಕನಿಕರಿಸುವೆನೆಂದು, ಯೆಹೋವನು ಅನ್ನುತ್ತಾನೆ." (ಯೆರೆ. ೩೧, ೨೦.) "ಎಫ್ರಾಯಿಮೇ ನಾನು ನಿನ್ನನ್ನು ಕೊಟ್ಟು ಬಿಡುವದು ಹ್ಯಾಗೆ?" ಇತ್ಯಾದಿ. (ಹೊಶೇ. ೧೧, ೮.) "ದೇವರ ದಯವು ಮಾನಸಾಂತರಕ್ಕೆ ನಿನ್ನನ್ನು ಪ್ರೇರಣೆ ಮಾಡುತ್ತದೆ ಎಂದು ತಿಳಿಯದೆ, ಅವನ ದಯ, ತಾಳ್ಮೆ, ದೀರ್ಘಶಾಂತಿಗಳ ಐಶ್ವರ್ಯವನ್ನು ಅಸಡ್ಡೆ ಮಾಡುತ್ತೀಯಾ?" (ರೋಮಾ. ೨, ೪.) ಇತ್ಯಾದಿ.

೭) "ದೇವರು ಸುಳ್ಳು ಹೇಳುವ ಹಾಗೆ ಮನುಷ್ಯನಲ್ಲ, ಪಶ್ಚಾತ್ತಾಪ ಪಡುವ ಹಾಗೆ ನರಪುತ್ರನಲ್ಲ; ಅವನು ನುಡಿದು ಮಾಡನೇ? ಮಾತಾಡಿ, ಅದನ್ನು ಸ್ಥಾಪಿಸನೇ?" (ಅಂಕೆ. ೨೩, ೧೯.) "ಯೆಹೋವನ ವಾಕ್ಯವು ನೆಟ್ಟನೆಯದು; ಅವನ ಕೆಲಸಗಳೆಲ್ಲಾ ನಂಬಿಕೆಯಾಗಿವೆ." (ಕೀರ್ತ. ೩೩, ೪.)



## II. ದೇವರ ಪ್ರವೃತ್ತಿಯ ವಿಷಯ.

**೧೬೭.** ಪರಿಶುದ್ಧ ತ್ರಿಯೇಕತ್ವದ ಬೋಧನೆಯಿಂದ ದಿವ್ಯಸ್ವಭಾವಕ್ಕೆ ತನ್ನೊಳಗಿರುವ ಪರಸ್ಪರ ಸಂಬಂಧವೂ — ದಿವ್ಯ ಗುಣಗಳ ಬೋಧನೆಯಿಂದ ಲೋಕದ, ಅಂದರೆ, ದೇವರ ಹೊರ್ತಾಗಿರುವ ಸಮಸ್ತ ಸೃಷ್ಟಿಯ ಕಡೆಗಿರುವ ಆ ದಿವ್ಯ ಸ್ವಭಾವದ ಪರಸ್ಪರ ಸಂಬಂಧವೂ ತಿಳಿಯ ಬಂತು. ಆದರೆ ಈಗ ದೇವರ ಪ್ರಯತ್ನದ ಬೋಧನೆ ಬರುತ್ತದೆ. ಇದರಿಂದ ಆತನ ಗುಣಗಳು ಪ್ರವೃತ್ತಿಯಾಗಿ ಪ್ರಕಟವಾಗುತ್ತವೆ.

**೧೬೮.** ಎಲ್ಲಾ ದಿವ್ಯ ಪ್ರವೃತ್ತಿಯು (ಅಂದರೆ ಹೊರಗಿನ ಕಡೆಗೆ) ಮುಮ್ಮಡಿಯಾಗಿರುತ್ತದೆ: ನಿರ್ಮಿಸೋಣ, ವಿಮೋಚಿಸೋಣ, ಶುದ್ಧೀಕರಣ. ಎಲ್ಲಾದರಲ್ಲಿಯೂ ಎಲ್ಲಾ ದಿವ್ಯ ತ್ರಿಮೂರ್ತಿಗಳು ಪ್ರತ್ಯಕ್ಷವಾಗಿರುತ್ತಾವೆ. ಆದರೂ ನಮ್ಮ ವಿಶ್ವಾಸಪ್ರಮಾಣದಲ್ಲಿ ನಿರ್ಮಿಸೋಣವು ಮುಖ್ಯವಾಗಿ ತಂದೆಯಿಂದ ಆದ್ದಾಗಿ ಹೇಳಿಯದೆ. ಯಾಕಂದರೆ ಆತನು ಸಮಸ್ತ ಸೃಷ್ಟಿಯದರ ಮೂಲಾಧಾರವು. ವಿಮೋಚಿಸೋಣವು ಮುಖ್ಯವಾಗಿ ಮಗನಿಂದ ಆದ್ದಾಗಿ ಹೇಳಿಯದೆ; ಯಾಕಂದರೆ ಈತನು ಅದನ್ನು ಪೂರೈಸುವದಕ್ಕೋಸ್ಕರ ಮನುಷ್ಯನಾದನು. ಮತ್ತು ಅದನ್ನು ಸಂಪೂರ್ತಿ ಮಾಡುವದಕ್ಕೋಸ್ಕರ ನಿತ್ಯದಲ್ಲಿಯೂ ಮನುಷ್ಯನಾಗಿರುವನು. ಶುದ್ಧೀಕರಣವು ಮುಖ್ಯವಾಗಿ ಪರಿಶುದ್ಧಾತ್ಮನಿಂದಾಗುವದಾಗಿ ಹೇಳಿಯದೆ. ಯಾಕಂದರೆ ಆತನು ಮನುಷ್ಯರಿಗೆ ರಕ್ಷಣೆಯನ್ನು ಸ್ವೀಕಾರ ಮಾಡುವದಕ್ಕೆ ತಂದೆಯಿಂದಲೂ ಮಗನಿಂದಲೂ ಕಳುಹಿಸಲ್ಪಟ್ಟಿದ್ದಾನೆ.

---

# ಅಪೊಸ್ತೊಲಿಕ ವಿಶ್ವಾಸ ಪ್ರಮಾಣ.

## (೨ನೆ ಮುಖ್ಯ ಭಾಗ.)

### ೧ನೆ ಸೂತ್ರ.

### ನಿರ್ಮಾಣದ ವಿಷಯ.

ಪರಲೋಕ ಭೂಲೋಕಗಳ ಸರ್ವತ್ರಾಣಿಯಾದ ನಿರ್ಮಾಣಿಕನಾಗಿರುವ ತಂದೆಯಾದ ದೇವರಲ್ಲಿ ನಂಬುತ್ತೇನೆ.

ಹಾಗಂದರೇನು?

ದೇವರು ನನ್ನನ್ನು ಸಕಲ ಪ್ರಾಣಿಗಳ ಸಂಗಡ ನಿರ್ಮಿಸಿ, ನನಗೆ ಶರೀರ ಕಣ್ಣು ಕಿವಿ ಮೊದಲಾದ ಸಕಲ ಅವಯವಗಳನ್ನೂ ಬುದ್ಧಿಯನ್ನೂ ಪಂಚೇಂದ್ರಿಯಗಳನ್ನೂ ಕೊಟ್ಟು,

ಈ ವರೆಗೆ ಕಾಪಾಡುತ್ತಾ ಇದ್ದಾನೆಂದೂ, ಮತ್ತು ವಸ್ತ್ರ ಹೊದಿಕೆ, ಅನ್ನಪಾನ, ಹೊಲ ಮನೆ, ಹೆಂಡತಿ ಮಕ್ಕಳು, ದನಕರ ಮೊದಲಾದ ಸಮಸ್ತ ಉಪಕಾರಗಳನ್ನು ದಯಪಾಲಿಸಿ, ಆಹಾರಾದಿ ಬೇಕಾದದ್ದೆಲ್ಲಾ ನನ್ನ ಶರೀರಕ್ಕೋಸ್ಕರವೂ ಪ್ರಾಣಕ್ಕೋಸ್ಕರವೂ ಅಧಿಕವಾಗಿ ದಿನಾಲೂ ಸಿದ್ಧ ಮಾಡಿ, ಸಕಲ ಸಂಕಟದಲ್ಲಿ ಸಂರಕ್ಷಿಸಿ, ಸಕಲ ಕೇಡಿನಿಂದ ತಪ್ಪಿಸಿ, ಆಶ್ರಯವಾಗಿದ್ದಾನೆಂದೂ, ಆತನು ಇವುಗಳನ್ನೆಲ್ಲಾ ಪುಣ್ಯವೂ ಯೋಗ್ಯತೆಯೂ ಇಲ್ಲದ ನನಗೆ ದಿವ್ಯ ಉತ್ತಮತ್ವದಿಂದಲೂ, ತಂದೆಗೆ ತಕ್ಕ ಕನಿಕರದಿಂದಲೂ ದಯಪಾಲಿಸಿದ ಕಾರಣ, ನಾನು ಆತನಿಗೆ ಸ್ತುತಿಯನ್ನೂ ಅನುಸರಣೆಯಾದ ಸೇವೆಯನ್ನೂ ಮಾಡ ಬೇಕೆಂಬ ಹಂಗಿನಲ್ಲಿದ್ದೇನೆಂದೂ ನಂಬುತ್ತೇನೆ. ಇದು ಸತ್ಯವೇ ಸರಿ.

**೧೬೯.** ಒಂದನೆ ಸೂತ್ರದಲ್ಲಿ ನಿರ್ಮಾಣದ ವಿಷಯ ಒಟ್ಟಾರೆ ಹೇಳಿಯದೆ. ಇದರಲ್ಲಿ ಲೋಕವನ್ನು ಪಾಲಿಸುವದೂ ನಡಿಸುವದೂ ಬಂತು.

## ಅ.) ನಿರ್ಮಾಣದ ವಿಷಯ.

**೧೭೦.** ನಿರ್ಮಿಸೋಣವೆಂದರೆ ದೇವರ ಹೊರತಾಗಿರುವ ಸಮಸ್ತ ಇರೋಣ ಬದುಕೋಣಗಳನ್ನು ಆತನ ಚಿತ್ತದ ಮೂಲವಾಗಿ ನಾಸ್ತಿಯಿಂದ ಉಂಟು ಮಾಡುವ ದೇವರ ಪ್ರವೃತ್ತಿ.

“ವಿಶ್ವಾಸದಿಂದ ಕಾಣಲ್ಪಡುವವುಗಳು ತೋರುವಂಥವುಗಳಿಂದ ಉಂಟು ಮಾಡಲ್ಪಡದೆ, ಲೋಕಗಳು ದೇವರ ವಾಕ್ಯದಿಂದ ಸಿದ್ಧ ಮಾಡಲ್ಪಟ್ಟವೆಂದು, ಗ್ರಹಿಸುತ್ತೇವೆ.” (ಇಬ್ರಿ. ೧೧, ೩.)

ಪರಿಶಿ. ನಿರ್ಮಿಸುವದಕ್ಕೂ, ಹುಟ್ಟಿಸುವದಕ್ಕೂ ಹೆಚ್ಚು ಕಡಿಮೆ ಉಂಟು. ದೇವರ ಮಗನು ಹುಟ್ಟಿದ್ದಾನೆ, ಲೋಕವು ನಿರ್ಮಿಸಲ್ಪಟ್ಟದೆ. ಹಾಗಂದರೆ, ಮಗನು ತಂದೆಯು ಸ್ವಭಾವದಿಂದ ಬಂದವನಾಗಿ ತಂದೆಯ ಸಂಗಡ ಬಂದೆ ಸ್ವಭಾವವುಳ್ಳವನು, ಲೋಕವು ನಾಸ್ತಿಯಿಂದ ಉಂಟಾದ್ದಾಗಿ ದೇವರಿಂದ ಬೇರೆಯಾಗಿದೆ. ಹುಟ್ಟಿಸೋಣವು ದೇವರಲ್ಲಿ ಅವಶ್ಯತ್ವದ ಕಾರ್ಯ (ಹಾಗಂದರೆ ಮಗನಿಲ್ಲದೆ ದೇವರ ಜೀವವು ಇರಕೂಡದು), ನಿರ್ಮಿಸೋಣವು ಆತನ ಸ್ವತಂತ್ರವುಳ್ಳ ಕೃಪೆಯ ಕಾರ್ಯವಾಗಿದೆ. ಹುಟ್ಟಿಸೋಣವು ಕಾಲರಹಿತವಾಗಿದೆ (ನಿತ್ಯವಾದದ್ದು; ಇದರಲ್ಲಿ ಆದ್ಯಂತ, ಪೂರ್ವಾಪೂರ್ವ ಎಂಬದಿಲ್ಲಾ), ನಿರ್ಮಿಸೋಣವು ಕಾಲದಲ್ಲಿಯೂ ಕಾಲದೊಡನೆಯೂ ಉಂಟಾಯಿತು.

**೧೭೧.** ತಂದೆಯು ಲೋಕವನ್ನು ಮಗನ ಮುಖಾಂತರ ಆತ್ಮದ ಸಲವಾಗಿ ನಿರ್ಮಿಸಿದನು. ಇದು ಹೊಸ ಒಡಂಬಡಿಕೆಯಲ್ಲಿ ಸ್ಪಷ್ಟವಾಗಿ ಹೇಳಿ ಅದೆ ೧), ಮತ್ತು ಉತ್ಪತ್ತಿ

೧ನೆ ಸಂಧಿಯಲ್ಲಿಯೆ (ಮೂರ್ತಿಗಳ ಭೇದದ ಸಂಗತಿಯು ಸ್ಪಷ್ಟವಾಗಿ ತಿಳವಳಿಕೆಗೆ ಬಾರದಿದ್ದರೂ) ಸೂಚಿಸಿ ಅದೆ ೨).

೧) "ನಮಗೆ ತಂದೆಯಾದ ಒಬ್ಬನೇ ದೇವರು. ಅವನಿಂದ ಸಮಸ್ತವು; ಮತ್ತು ನಾವು ಅವನಿಗೋಸ್ಕರವು. ಇದಲ್ಲದೆ ಯೇಸು ಕ್ರಿಸ್ತನಾದ ಒಬ್ಬನೇ ಕರ್ತನು. ಅವನ ಮುಖಾಂತರ ಸಮಸ್ತವು; ಮತ್ತು ನಾವು ಅವನ ಮುಖಾಂತರವು." (೧ ಕೊರಿ. ೮, ೬.) "ಅವನ ದೆಶೆಯಿಂದಲೂ, ಅವನ ಮೂಲವಾಗಿಯೂ, ಅವನಿಗಾಗಿಯೂ, ಸಮಸ್ತವು ಉಂಟು." (ರೋಮಾ. ೧೧, ೩೬.) "ಆದಿಯಲ್ಲಿ ವಾಕ್ಯವು ಇತ್ತು." ಇತ್ಯಾದಿ. (ಯೋಹಾ. ೧, ೧—೩.) (**೧೫೬.**) "ಅವನು ಅದೃಶ್ಯನಾದ ದೇವರ ಪ್ರತಿರೂಪವೂ," ಇತ್ಯಾದಿ. (ಕೊಲೊ. ೧, ೧೫. ೧೬.) (**೧೫೬.**) "ಇವನನ್ನು ಸರ್ವಕ್ಕೆ ಬಾಧ್ಯಸ್ಥನಾಗಿ ನೇಮಿಸಿದನು;" ಇತ್ಯಾದಿ. (ಇಬ್ರಿ. ೧, ೨. ೩.) (**೧೫೬**)

೨) "ದೇವರ ಆತ್ಮವು ನೀರುಗಳ ಮೇಲೆ ಚಲಿಸುತ್ತಿತ್ತು. ಆಗ ದೇವರು . . ಆಗಲಿ ಅನ್ನಲು . . ಆಯಿತು." (ಉತ್ಪ. ೧, ೩.) (ಸಮ ನೋಡು ಕೀರ್ತ. ೩೩, ೬.)

**೧೬೨.** ದೇವರಿಗೆ ಲೋಕದ ಅವಶ್ಯವಿರಲಿಲ್ಲ. ಆತನು ಅದನ್ನು ತನಗೋಸ್ಕರವಲ್ಲ ಅದಕ್ಕೋಸ್ಕರವೆ ಸ್ವತಂತ್ರವುಳ್ಳ ಕೃಪೆಯಿಂದ ನಿರ್ಮಿಸಿದನು. ತನ್ನ ಕೃಪೆಯಿಂದಲೂ ಪ್ರೀತಿಯಿಂದಲೂ ಹರಿದು ಬರುವ ಜೀವದಲ್ಲಿ ಆನಂದವಾಗಿ ಇರ ತಕ್ಕ ನಿರ್ಮಾಣಗಳು ಉಂಟಾಗ ಬೇಕೆಂದು ಆತನು ಚಿತ್ತೈಸಿದನು.

## ಇ.) ನಿರ್ಮಾಣಗಳ ವಿಷಯ.

**೧೬೩.** ನಿರ್ಮಾಣದಲ್ಲಿರುವ ಸಮಸ್ತ ಜೀವಿಗಳು ಮೊದಲಾಗಿ ಎರಡು ಭಾಗವಾಗುತ್ತವೆ, ಅಹಂಭಾವವುಳ್ಳದ್ದು ಮತ್ತು ಅಹಂಭಾವ ಇಲ್ಲದ್ದು, ಅಥವಾ ಆತ್ಮ ಮತ್ತು ಪ್ರಕೃತಿ. ತನ್ನ ಪ್ರವೃತ್ತಿಯನ್ನು ಸ್ವತಂತ್ರವುಳ್ಳ ಸ್ವಬೋಧಸಹಿತವಾದ ನಿಶ್ಚಯತ್ವದಿಂದ ನಡಿಸುವದಾದರೆ ಮೊದಲನೆದು. ಆದರೆ ಸ್ವಭಾವಗುಣದಿಂದಲೂ ಪ್ರಕೃತಿಯ ಅವಶ್ಯತ್ವದಿಂದಲೂ ನಡಿಸುವದಾದರೆ ಎರಡನೆದು. (ನಿರ್ಮಿತವಾದ) ಆತ್ಮವು ತನ್ನ ಸ್ವಂತ ವಿಷಯದಲ್ಲಿಯೂ ಲೋಕಕ್ಕೂ ದೇವರಿಗೂ ತನಗಿರುವ ಪರಸ್ಪರ ಸಂಬಂಧದ ವಿಷಯದಲ್ಲಿಯೂ ಬೋಧವುಳ್ಳದ್ದಾಗಿರುತ್ತದೆ. ಅದು ನ್ಯಾಯಸ್ಥಿತಿಯಲ್ಲಿಯೂ ಧರ್ಮದಲ್ಲಿಯೂ ನಡಕೊಳ್ಳುವದಾಗಿದ್ದು, ತನ್ನ ಕ್ರಿಯೆಗಳಿಗೋಸ್ಕರವೆಲ್ಲಾ ಹೊಣೆಗಾರ ಆಗಿರುತ್ತದೆ. ಪ್ರಕೃತಿಗೆ ಇದೆಲ್ಲಾ ಇರುವದಿಲ್ಲಾ.

**೧೭೪.** ಆದರೆ ನಿರ್ಮಿತವಾದ ಆತ್ಮವು, ಈ ವಿಶೇಷಣಕ್ಕೆ ಅನುಕೂಲವಾಗಿ, ದೇವರಂತೆ, ಸರ್ವಸ್ವತಂತ್ರಿ ಅಲ್ಲಾ; ಸ್ಥಳದಿಂದಲೂ ಕಾಲದಿಂದಲೂ ಮೇರೆಯುಳ್ಳದ್ದಾಗಿಯೂ, ಸಹೇತುಕವಾಗಿಯೂ ಇರುವ ಅಂತ್ಯವುಳ್ಳ ಆತ್ಮವು. ಆದಕಾರಣ ಅದು ಪ್ರಕೃತಿಯಿಲ್ಲದೆ ಯಾವಾಗಲೂ ವಿನಾದರೂ ಆಗಿರುವದಿಲ್ಲಾ. ಅದರಲ್ಲಿಯೂ ಅದರಿಂದಲೂ ಈ ಆತ್ಮನು ತನ್ನ ಜೀವವನ್ನು ಉಳಿಸಿ ಕೊಳ್ಳ ಬೇಕು. ಅವನು ತಾನೇ (ತನಗೆ ಅತ್ಯವಶ್ಯವಾಗಿರುವ) ಶರೀರ ಜೀವದೊಡನೆ ಪ್ರಕೃತಿಯವನಾಗಿದ್ದಾನೆ. ಈ ಅಂತ್ಯವುಳ್ಳ ಆತ್ಮಗಳಾಗಿರುವವರು ನಮ್ಮ ತಿಳಿವಿಕೆಗೆ ಬಂದ ಹಾಗೆ, ಎರಡು ತರದ ನಿರ್ಮಾಣಗಳು ಮಾತ್ರವೆ: ದೂತರು ಮತ್ತು ಮನುಷ್ಯರು.

**೧೭೫.** ದೂತರು ಕಾಲದ ಲೆಖ್ಖದಲ್ಲಿ ದೇವರ ಪ್ರಥಮ ನಿರ್ಮಾಣಗಳು, ಹ್ಯಾಗಂದರೆ: ಅವರು ಭೂಮಿಯ ನಿರ್ಮಾಣದ (ಆರು ದಿವಸಗಳ ಕೆಲಸಗಳಲ್ಲಿ) ಸಾಕ್ಷಿಗಳಾಗಿದ್ದು, ಅದಕ್ಕೋಸ್ಕರ ಸಂತೋಷ ಪಟ್ಟರು[೧]. ಅವರ ಸ್ವಭಾವವು ಗಾಳಿಗಳಿಗೂ ಅಗ್ನಿಜ್ವಾಲೆಗಳಿಗೂ (ಮಿಂಚುಗಳಿಗೂ) ಸಮಾನ ಮಾಡಿಯದೆ. (ಕೀರ್ತ. ೧೦೪, ೪.) ಭೂಮಿಯಲ್ಲಿ ಅವರು ಆಕಾಶಭಾವವಾದ ಪ್ರಕಾಶವತ್ತಾದ ಬೆಳಗುವ ಶರೀರದೊಡನೆ ಪ್ರತ್ಯಕ್ಷವಾಗುತ್ತಾರೆ. (ಮತ್ತಾ. ೨೮, ೩.) ಅವರ ನಿವಾಸಗಳು ಒಂದು ವೇಳ್ಯ (ಯೋಬ್. ೩೮, ೭.) ಸೂಚಿಸಿರುವ ಪ್ರಕಾರ ಆಕಾಶದ ಜ್ಯೋತಿಲೋಕಗಳು. ಅವರ ಸಂಖ್ಯೆಯು ಅಗಣಿತ (ಉತ್ಪ. ೩೨, ೧. ೨. ದಾನಿ. ೭, ೧೦. ಕೀರ್ತ. ೬೮, ೧೮. ಲೂಕ. ೨, ೧೩. ಮತ್ತಾ. ೨೬, ೫೩.) ಮತ್ತು ಅವರಲ್ಲಿ ಲಿಂಗಭೇದವೂ ಜಾತ್ಯಭಿವೃದ್ಧಿಯೂ ಇಲ್ಲದಿರುವ ಕಾರಣ (ಮತ್ತಾ. ೨೨, ೩೦.) ಆರಂಭದಲ್ಲಿಯೆ ಮಹಾಸಂಖ್ಯೆಯಾಗಿ ನಿರ್ಮಿಸಲ್ಪಟ್ಟಿರಬಹುದು. ಅವರಲ್ಲಿ ಘನತೆಯ ಹೆಚ್ಚುಕಡಿಮೆಗಳು ಉಂಟೆಂದು ಪರಿಶುದ್ಧ ಬರಹದ ಕೆಲವು ಸ್ಥಳಗಳಲ್ಲಿ ಉಚ್ಚರಿಸಿ ಅದೆ ಎಂದು ಕಾಣುತ್ತದೆ. — ಖೆರುಬರು ಮತ್ತು ಸೆರಾಫರು (ಉತ್ಪ. ೩, ೨೪. ಯೆಶಾ. ೬, ೨. ೬.) ಪ್ರಧಾನದೂತರು (೧ಥೆಸ್ಸ. ೪, ೧೬. ಯೂದ. ೯.) ಸಿಂಹಾಸನಗಳೂ, ಒಡೆತನಗಳೂ, ಧೊರೆತನಗಳೂ, ಅಧಿಕಾರಗಳೂ (ಕೊಲೊ. ೧, ೧೬.) — ಬರಹದಲ್ಲಿ ಮುಖ್ಯವಾದವರ ಕೆಲವು ಹೆಸರುಗಳು ಬರುತ್ತವೆ. ಮಿಖಯೇಲ್. (ದಾನಿ. ೧೦, ೧೩. ಯೂದ. ೯.) ಗಬ್ರಿಯೇಲ್. (ಲೂಕ. ೧, ೧೯. ೨೬.)

೧) "ಉದಯದ ನಕ್ಷತ್ರಗಳು ಕೂಡಾ ಹರ್ಷಧ್ವನಿ ಮಾಡುವಾಗ, ದೇವರ ಮಕ್ಕಳೆಲ್ಲಾ ಉಲ್ಲಾಸದಿಂದ ಆರ್ಭಟಿಸುವಾಗ" (ಯೋಬ್. ೩೮, ೭.)

**೧೭೬.** ದೂತರು ಸ್ವತಂತ್ರವುಳ್ಳ ಅಹಂಭಾವಿಗಳಾದ ಸ್ವಬೋಧವುಳ್ಳ ಜೀವಿಗಳು ಸ್ವತಂತ್ರದಲ್ಲಿ ಸ್ವೇಚ್ಛಾನುಸಾರದ ಅವಶ್ಯತ್ವವೂ ಅವರ ಪ್ರವರ್ತನೆಯ ಆರಂಭದಲ್ಲಿಯಾದರೂ ಪಾಪಪತನದ ಸಾಧ್ಯತ್ವವೂ ಬಂತು. ದೇವರು ಅವರನ್ನು ನಿಶ್ಚೈಸಿದ್ದಕ್ಕಿಂತ ಬೇರೊಂದಕ್ಕೆ ಅವರು ತಮ್ಮನ್ನು ತಾವೆ ನಿಶ್ಚೈಸ ಬಹುದಾಯಿತು. ಮತ್ತು ಅವರಲ್ಲಿ ಒಂದು ಭಾಗವು ಹಾಗೇ ಮಾಡಿದರು. (**೧೯೫**) ಆದರೆ ಹೆಚ್ಚಾದವರು ದೇವರ ಚಿತ್ತಕ್ಕೆ ಅನುಸಾರವಾಗಿ ತಮ್ಮನ್ನು ನಿಶ್ಚೈಸಿ ಅತಿಶ್ರೇಷ್ಠವಾಗಿಯೂ ಪರಮ ಸ್ವತಂತ್ರವಾಗಿಯೂ ಇರುವ ಪರಿಶುದ್ಧತ್ವವನ್ನು ಪಡಕೊಂಡರು. ಇದರಲ್ಲಿ ಅವರು ಇನ್ನೂ ಮುಂದೆ ಪಾಪ ಮಾಡ ಕೂಡದು. ಯಾಕಂದರೆ ಅವರ ಚಿತ್ತವು ದಿವ್ಯ ಚಿತ್ತದೊಡನೆ ಪೂರ್ಣವಾಗಿ ಒಂದೇ ಆಯಿತು.

**೧೭೭.** ಈ ಪರಿಶುದ್ಧತ್ವದ ಬಲದಿಂದ ಅವರು ದೇವರ ಸಾಮೀಪ್ಯದಲ್ಲಿಯೂ ಶಾಶ್ವತ ದರ್ಶನದಲ್ಲಿಯೂ (ಮತ್ತಾ. ೧೮, ೧೦. ಎಶಾ. ೬, ೨೩.) ಸ್ತುತಿಯಲ್ಲಿಯೂ ಬದುಕುತ್ತಾರೆ. (ಯೋಬ್. ೩೮, ೭. ಕೀರ್ತ. ೧೦೩, ೨೦—೨೨. ಪ್ರಕ. ೫, ೧೧. ೧೨.) ಮತ್ತು ಅವರು, ಭೂಮಿಗೋಸ್ಕರವೂ ಭೂಮಿಗೋಸ್ಕರ ಮುಖ್ಯವಾಗಿಯೂ, ಆತನ ದೂತರೂ ಆತನ ಸೇವಕರೂ ಆಗಿದ್ದಾರೆ. ಹಾಗೆ, ನಿಯಮ ಕೊಟ್ಟಾಗ, ಅವರು ಕಾರ್ಯಸ್ಥರಾಗಿದ್ದರು. (ಅ. ಕ್ರಿ. ೭, ೫೩. ಗಲಾ. ೩, ೧೯.) ಕ್ರಿಸ್ತನ ಜನನವನ್ನು ಸಾರಿದರು. (ಲೂಕ. ೨, ೧೩.) ಅರಣ್ಯದಲ್ಲಿ ಶೋಧನಾನಂತರದಲ್ಲಿಯೂ (ಮತ್ತಾ. ೪, ೧೧.), ಗೆತ್ಸೇಮನೆಯಲ್ಲಿಯೂ (ಲೂಕ. ೨೨, ೪೩.) ಆತನನ್ನು ಬಲಪಡಿಸಿದರು. ಆತನ ಉತ್ಥಾನವನ್ನೂ (ಮತ್ತಾ. ೨೮, ೩. ಇತ್ಯಾದಿ) ದಿವಾರೋಹಣವನ್ನೂ (ಅ. ಕ್ರಿ. ೧, ೧೦.) ಸಾರಿದರು. ಮತ್ತು ಮುಂದೆ ಪುನರಾಗಮನದಲ್ಲಿ ಆತನ ಸಂಗಡ ಬಂದು, ಆತನ ನ್ಯಾಯ ಶಿಕ್ಷೆಗಳನ್ನು ತೀರಿಸುವರು. (ಮತ್ತಾ. ೧೩, ೪೧. ೨೪, ೩೧. ೨೫, ೩೧. ೧ ಥೆಸ್ಸ. ೪, ೧೬. ೨ ಥೆಸ್ಸ. ೧, ೭.) ಅವರು ಮಾನಸಾಂತರ ಪಡುವ ಒಬ್ಬೊಬ್ಬ ಪಾಪಿಗೋಸ್ಕರ ಸಂತೋಷ ಪಡುತ್ತಾರೆ. ಮತ್ತು ದಿವ್ಯ ಆಜ್ಞೆಯ ಪ್ರಕಾರ ಭಕ್ತರನ್ನು ಕಾಪಾಡುತ್ತಾರೆ[೧]. ಈ ಪ್ರಕಾರ ಅವರು ವಿಮೋಚನೆಯು ಪೂರ್ತಿಯಾಗುವದರಲ್ಲಿ ಎಲ್ಲಾ ಕಡೆಯಲ್ಲಿಯೂ ವಿಶೇಷವಾಗಿ ಸಾಹಸ ಮಾಡುವವರಾಗಿರುತ್ತಾರೆ; ಆದರೂ ಅದರ ಭಾವದ ಪೂರ್ಣಸ್ವಚ್ಛವಾದ ತಿಳಿವಿಕೆಯು ಅವರಿಗೆ ಇಲ್ಲವೆಂದು ತೋರುತ್ತದೆ. (ಅ. ಕ್ರಿ. ೧೦, ೩. ಇತ್ಯಾದಿ. ೧ ಪೇತ್ರ. ೧, ೧೨.)

೧) "ಈ ಪ್ರಕಾರ ಮಾನಸಾಂತರ ಪಡುವ ಒಬ್ಬ ಪಾಪಿಗೋಸ್ಕರ ದೇವದೂತರ ಮುಂದೆ ಸಂತೋಷವು ಇರುವದು." (ಲೂಕ. ೧೫, ೧೦.) "ಅವರೆಲ್ಲರು ರಕ್ಷಣೆಯನ್ನು

ಬಾಧ್ಯವಾಗಿ ಹೊಂದಲಿರುವವರಿಗೋಸ್ಕರ ಸೇವೆಗಾಗಿ ಕಳುಹಿಸಲ್ಪಟ್ಟ ಊಳಿಗದ ಆತ್ಮಗಳಾಗಿದ್ದಾರಲ್ಲವೋ?" (ಇಬ್ರಿ. ೧,೧೪.) "ನಿನ್ನ ಎಲ್ಲಾ ಮಾರ್ಗಗಳಲ್ಲಿ ನಿನ್ನನ್ನು ಕಾಪಾಡುವದಕ್ಕೆ, ತನ್ನ ದೂತರಿಗೆ ನಿನ್ನ ವಿಷಯವಾಗಿ ಆಜ್ಞಾಪಿಸುವನು. ನೀನು ನಿನ್ನ ಪಾದವನ್ನು ಕಲ್ಲಿಗೆ ತಗಲಿಸದ ಹಾಗೆ, ತಮ್ಮ ಕೈಗಳಲ್ಲಿ ನಿನ್ನನ್ನು ಎತ್ತಿ ಕೊಳ್ಳುವರು." (ಕೀರ್ತ. ೯೧,೧೧.೧೨.) "ಈ ಚಿಕ್ಕವರಲ್ಲಿ ಒಬ್ಬನನ್ನು ತಿರಸ್ಕರಿಸದ ಹಾಗೆ, ನೋಡಿ ಕೊಳ್ಳಿರಿ. ಯಾಕಂದರೆ ಪರಲೋಕದಲ್ಲಿ ಅವರ ದೂತರು ಯಾವಾಗಲೂ ಪರಲೋಕದಲ್ಲಿರುವ ನನ್ನ ತಂದೆಯ ಮುಖವನ್ನು ನೋಡುತ್ತಾರೆಂದು, ನಿಮಗೆ ಹೇಳುತ್ತೇನೆ." (ಮತ್ತಾ. ೧೮,೧೦.)

ಪರಿಶಿ. ಇಲ್ಲಿ ವರ್ಣಿಸಿದ ದೂತರಲ್ಲಿ ಹಳೆ ಒಡಂಬಡಿಕೆಯಲ್ಲಿ ಬಹಳ ಸರ್ತಿ ಪ್ರತ್ಯಕ್ಷವಾಗುವ ಕರ್ತನ ದೂತನು ಸೇರುವದಿಲ್ಲಾ, ಈತನು ನಿರ್ಮಾಣ ಅಲ್ಲವೇ ಅಲ್ಲಾ, ಪ್ರತ್ಯಕ್ಷವಾಗುವ ದೇವರು ತಾನೆ. (**೧೫೮.**) (ಸಮ ನೋಡು **೨೧೪.** ಅ.)

**೧೭೮.** ಈಗ ಕಾಣುವ ಪ್ರಕಾರ ದೂತರು ಆತ್ಮಗಳಾಗಿಯೂ ದಿವ್ಯ ನಿಯಾಮಕವನ್ನು ಅನುಕೂಲಿಸಿದವರಾಗಿ (ತಾರತಮ್ಯದ ಪ್ರಕಾರ) ಸಂಪೂರ್ಣ ಪರಿಶುದ್ಧತ್ವದಲ್ಲಿಯೂ ಆನಂದದಲ್ಲಿಯೂ ದೇವರ ಅತ್ಯಂತ ಸಾಮೀಪ್ಯದಲ್ಲಿ ಬದುಕುವವರಾಗಿ ಇರುವ ಕಾರಣ, ಅವರು ತನ್ನ ವಿಷಯದಲ್ಲಿ ಆದ ಸಂಕಲ್ಪಕ್ಕೆ ತಪ್ಪಿ, ಪಾಪದಿಂದ ದೇವರಿಗೆ ಬೇರೆಯಾಗಿ, ಸಂಕಷ್ಟದಲ್ಲಿಯೂ ಮರಣದಲ್ಲಿಯೂ ಬಿದ್ದಿರುವ ಮನುಷ್ಯನಿಗಿಂತ ಅಧಿಕರಾಗಿರುತ್ತಾರೆ. ಆದರೂ ದೂತರಿಗಿಂತ ಮನುಷ್ಯನ ವಿಷಯದಲ್ಲಿ ದೇವರು ಮಾಡಿದ ಆದಿ ಸಂಕಲ್ಪವು ಅಧಿಕವಾಗಿರುತ್ತದೆಂದು ಕಾಣುತ್ತದೆ. ಹಾಗೆಯೆ ಪರಿಶುದ್ಧ ಬರಹದ ಸ್ಪಷ್ಟವಾದ ವಾಕ್ಯಗಳ ಪ್ರಕಾರ[೧] (ದೇವರ ಬಾಧ್ಯಸ್ಥನೂ ಕ್ರಿಸ್ತನ ಸಹಬಾಧ್ಯಸ್ತನೂ — ರೋಮಾ. ೮, ೧೭. — ಆಗಿರ ತಕ್ಕ) ವಿಮೋಚಿಸಲ್ಪಟ್ಟ ಮನುಷ್ಯನ ಮುಂದಿನ ಮಹಿಮೆಯು ದೂತರ ಮಹಿಮೆಗಿಂತ ಎಷ್ಟೋ ಎಷ್ಟು ಅಧಿಕವಾಗಿರುವದಲ್ಲವೇ?

೧) ಇಬ್ರಿ. ೧, ೪—೮. ೧೩. ೧೪. ೨, ೫—೯. ೧೪—೧೬.

ಪರಿಶಿ. ಕಡೇ ನ್ಯಾಯತೀರ್ವಿಕೆಯಲ್ಲಿ ದೂತರು ಸೇವಕರಾಗಿಯೂ ಕ್ರಿಸ್ತನ ತೀರ್ಪುಗಳನ್ನು ಪೂರೈಸುವವರಾಗಿಯೂ ಕಾಣ ಬರುತ್ತಾರೆ. (ಮತ್ತಾ. ೧೩, ೪೯. ೫೦.) (**೨೫೧.**) ಅಪೊಸ್ತಲರೂ ಪರಿಶುದ್ಧರೂ ಕ್ರಿಸ್ತನ ಸಹಾಯಕರಾಗಿಯೂ ಸಹನ್ಯಾಯಾಧಿಪತಿಗಳಾಗಿಯೂ ಕಾಣ ಬರುತ್ತಾರೆ. (ಮತ್ತಾ. ೧೯, ೨೮. ೧ ಕೊರಿ. ೬, ೨. ೩.) (**೨೫೧,** ೩.) ಇವರೇ (ಬಿದ್ದ) ದೂತರಿಗೆ ಸಹಾ ನ್ಯಾಯತೀರಿಸುವರು. (೧ ಕೊರಿ. ೬, ೩.)

**೧೭೯.** ಮನುಷ್ಯನ ಅಂಶಗಳು: ಶರೀರ, ಪ್ರಾಣ, ಆತ್ಮ. (೧ ಥೆಸ್ಸ. ೫, ೨೩. ಇಬ್ರಿ. ೪, ೧೨.) ದೇವರು ಮೊದಲನೆ ಮನುಷ್ಯನನ್ನು ಮಣ್ಣಿನಿಂದುಂಟು ಮಾಡಿ, ತನ್ನ ಜೀ

ವವುಳ್ಳ ಶ್ವಾಸಗಳನ್ನು ಅವನಲ್ಲಿ ಊದಲಾಗಿ, ಮನುಷ್ಯನು ಜೀವಂತ (ಹಾಗಂದರೆ ದಿವ್ಯ ಶ್ವಾಸದಿಂದ ಜೀವವುಳ್ಳ) ಪ್ರಾಣವಾದನು. (ಉತ್ಪ. ೨, ೭.) ಈ ಪ್ರಕಾರ ಮನುಷ್ಯನು ಇಮ್ಮಡಿ ಮೂಲವುಳ್ಳವನು. ಶರೀರ ಪ್ರಾಣಗಳ ಪ್ರಕಾರ ಪಶುಗಳ ಹಾಗೆಯೆ ಇವುಗಳುಳ್ಳವನಾಗಿ ಮನುಷ್ಯನು ಪ್ರಕೃತಿಗೆ ಸೇರಿದ್ದಾನೆ, ಮತ್ತು ಪ್ರಕೃತಿಜೀವದ ಅತ್ಯುತ್ತಮ ಫಲವಾಗಿದ್ದಾನೆ. ಆದರೆ ಅವನಲ್ಲಿ ವಾಸವಾಗಿರುವ ದೇವರ ಶ್ವಾಸದಿಂದ (ಅಥವಾ ಆತ್ಮದಿಂದ) "ದಿವ್ಯ ವಂಶದವನು" (ಅ. ಕ್ರಿ. ೧೭, ೨೮.) ಆಗಿದ್ದು, ಪ್ರಕೃತಿಗಿಂತ ಅಧಿಕನಾಗಿದ್ದಾನೆ.

ಪರಿಶಿ. ಪ್ರಾಣವು ರಕ್ತದಲ್ಲಿ ಸ್ಥಾನವುಳ್ಳದ್ದಾಗಿದ್ದು (ಲೇವಿ. ೧೭, ೧೧.) ಶರೀರಕ್ಕೂ ಆತ್ಮಕ್ಕೂ ಮಧ್ಯವಾದ ಬಂಧವಾಗಿರುತ್ತದೆ. ಅದು ಶರೀರವನ್ನು ಜೀವಂತ ಮಾಡುತ್ತದೆ. ಅದರೆ ಶರೀರವು ಅದಕ್ಕೆ ಸಮಸ್ತ ಪ್ರವೃತ್ತಿಗೆ ಅತ್ಯವಶ್ಯವಾದ ಕರಣವಾಗಿರುತ್ತದೆ. ಪ್ರಾಣವಿಲ್ಲದೆ ಶರೀರವು ಮೃತವಾಗಿರುತ್ತದೆ. (ಕೇಳುವಂಥಾದ್ದು ಕಿವಿಯಲ್ಲಾ, ನೋಡುವಂಥಾದ್ದು ಕಣ್ಣಲ್ಲಾ, ಪ್ರಾಣವು ಕಣ್ಣಿನಿಂದ ನೋಡುತ್ತದೆ ಕಿವಿಯಿಂದ ಕೇಳುತ್ತದೆ.) ಬೇರೊಂದು ಭಾಗವನ್ನು ಆಲೋಚಿಸುವಾಗ, ಪ್ರಾಣವು ಸ್ವಾಭಾವಿಕ ಜೀವದ, ಸ್ಮೃತಿಯ, ಇಷ್ಟಾನಿಷ್ಟಗಳ ಸ್ಥಾನವಾಗಿದ್ದು, ಆತ್ಮದಿಂದ ಸಮಸ್ತ ಪ್ರವೃತ್ತಿಗೆ ನಿಶ್ಚೈಸಲ್ಪಡ ತಕ್ಕದ್ದು.

**೧೮೦.** ಈ ಇಮ್ಮಡಿಯಾದ ಸ್ಥಿತಿಯಿಂದ ಮನುಷ್ಯನು ದೇವರಿಗೂ ಪ್ರಕೃತಿಗೂ ಮಧ್ಯಾಂಗವಾಗಿ, ಪ್ರಕೃತಿಯ ಯಾಜಕನೂ ಅರಸನೂ ಆಗಿದ್ದಾನೆ. ಆದಕಾರಣ ದೇವರ ಕಾರ್ಯಸ್ಥನಾಗಿ, ಅವನು ಎಲ್ಲಾ ಭೂಪ್ರಕೃತಿಯನ್ನು ಆಳಿ ಸಂಪೂರ್ತಿಗೆ ಅದನ್ನು ಎದುರು ತರುವದು ಅವನ ಕೆಲಸವಾಗಿರುತ್ತದೆ. ಈ ಪ್ರಯೋಜನಕ್ಕಾಗಿ ದಿವ್ಯ ಸ್ವರೂಪವು ಅವನಿಗೆ ಒಡನಿರ್ಮಿಸಲ್ಪಟ್ಟಿತು[೧]. ಇದು ಆತ್ಮದಲ್ಲಿ ಬೇರುಳ್ಳದ್ದಾಗಿ, ಅಲ್ಲಿಂದ ಪ್ರಾಣವನ್ನೂ ಶರೀರವನ್ನೂ ವ್ಯಾಪಿಸಿ, ಆತ್ಮದಲ್ಲಿ ಮಹಿಮೆ ಪಡಿಸ ತಕ್ಕದ್ದು. ಅದರಿಂದಲೆ ಮನುಷ್ಯನು ದಿವ್ಯ ಜ್ಞಾನವನ್ನೂ ಬಲವನ್ನೂ ಪರಿಶುದ್ಧತ್ವವನ್ನೂ ಆನಂದವನ್ನೂ ಹೊಂದುತ್ತಾನೆ. ಮತ್ತು ಅದರಿಂದಲೆ ತನ್ನ ಉದ್ಯೋಗ ಪೂರೈಸುವದಕ್ಕೆ ಸಾಮರ್ಥ್ಯ ಹೊಂದುತ್ತಾನೆ.

೧) "ದೇವರು ಹೇಳಿದ್ದೇನಂದರೆ—ನಮ್ಮ ರೂಪವಾಗಿ, ನಮ್ಮ ಹೋಲಿಕೆಯ ಹಾಗೆ ಮನುಷ್ಯರನ್ನು ಉಂಟು ಮಾಡುವ; ಅವರು ಸಮುದ್ರದ ಮೀನುಗಳನ್ನೂ ಆಕಾಶದ ಪಕ್ಷಿಗಳನ್ನೂ, ಪಶುಗಳನ್ನೂ, ಎಲ್ಲಾ ಭೂಮಿಯನ್ನೂ, ಭೂಮಿಯ ಮೇಲೆ ಹರಿದಾಡುವ ಎಲ್ಲಾ ಕ್ರಿಮಿಗಳನ್ನೂ, ಆಳಲಿ. ಮತ್ತು ದೇವರು ಮನುಷ್ಯನನ್ನು ತನ್ನ ರೂಪವಾಗಿ ಸೃಷ್ಟಿಸಿದನು, ದೇವರ ರೂಪವಾಗಿ ಅವನನ್ನು ಸೃಷ್ಟಿಸಿದನು." (ಉತ್ಪ. ೧ ೨೬. ೨೭.)

ಪರಿಶಿ. ಮೊದಲನೆ ನಿವಾಸ ಸ್ಥಳವಾಗಿ ದೇವರು ಅವನಿಗೆ ಏದೆನ್ ದೇಶದಲ್ಲಿ ಒಂದು

ತೋಟವನ್ನು (ಪರದೈಸವನ್ನು) ನೆಟ್ಟನು. ಈ ತೋಟವನ್ನು ಮನುಷ್ಯನು ನೆಡುತ್ತಾ ಕಾಪಾಡುತ್ತಾ ಇರ ಬೇಕೆಂಬ ಉದ್ಯೋಗಕ್ಕೂ (ಉತ್ಪ. ೨, ೧೫) ಭೂಮಿಯನ್ನೆಲ್ಲಾ ಆಳ ಬೇಕೆಂಬ ಉದ್ಯೋಗಕ್ಕೂ ವಿರೋಧವಿಲ್ಲಾ. ಅದು ಇದರ ಮೊದಲನೆ ಆರಂಭ. ಇಲ್ಲಿ ಹಿಡಿದು ಅವನು ತನ್ನ ಪ್ರವೃತಿಯನ್ನು ಹೆಚ್ಚು ಹೆಚ್ಚು ವಿಸ್ತಾರ ಮಾಡಿ, ಸಮಸ್ತ ಭೂಮಿಯಲ್ಲಿಯೂ ನೀಡ ಬೇಕಾಗಿತ್ತು, ಹಾಗಂದರೆ, ಸಮಸ್ತ ಭೂಮಿಯನ್ನು ಪರದೈಸ ಮಾಡ ಬೇಕಾಗಿತ್ತು.

**೧೮೧.** ಮನುಷ್ಯನು ದೇವರ ನಿರ್ಮಾಣಿಕಹಸ್ತದಿಂದ ಒಳ್ಳೆಯವನಾಗಿಯೂ ಪೂರ್ಣನಾಗಿಯೂ ಉಂಟಾದನು. ಆದರೆ ಅವನ ಆದಿಸ್ಥಿತಿಯ ಪೂರ್ಣತ್ವದ ದೆಶೆಯಿಂದ ಸ್ವಸಂಕಲ್ಪವೂ ಸ್ವತಂತ್ರವುಳ್ಳ ವಿಕಸನವೂ ಇಲ್ಲವಾಗುವದಿಲ್ಲಾ. ಅವನು ಸ್ವತಂತ್ರವುಳ್ಳ ಆತ್ಮದವನಾಗಿ ಇದ್ದ ಕಾರಣ, ವಿಕಸನವನ್ನು ಒಂದು ಗಿಡಕ್ಕೆ ಕೊಟ್ಟ ಹಾಗೆ, ಅವನಿಗೂ ಕೊಡಲಿಕ್ಕಾಗುವದಿಲ್ಲಾ. ದೇವರು ಅವನನ್ನು ಯಾವದಕ್ಕೆ ನಿಶ್ಚೈಸಿ ಸಾಮರ್ಥ್ಯವುಳ್ಳವನಾಗ ಮಾಡಿದ್ದಾನೊ, ಅದಕ್ಕೆ ಅವನು ತಾನೆ ಸ್ವಂತ ಸ್ವತಂತ್ರವುಳ್ಳ ನಿರ್ಧಾರದಿಂದಲೂ ಸ್ವತಂತ್ರವುಳ್ಳ ಪ್ರಯತ್ನದಿಂದಲೂ ತನ್ನನ್ನು ನಿಶ್ಚೈಸಿ ವಿಕಸಿಸ ಬೇಕು. ಆದರೆ ಈ ಸಮಯದಲ್ಲಿ ಅವನು ಮತ್ತೊಂದಕ್ಕೆ ತನ್ನನ್ನು ನಿಶ್ಚೈಸಿ ಬೇರೊಂದು ಅದೈವಿಕ ವಿಕಾಸಗತಿಯನ್ನು ಆರಂಭಿಸ ಬಹುದು.

**೧೮೨.** ಮೊದಲಾಗಿ ಅವನ ಸನಿರ್ಮಿತ ಪರಿಶುದ್ಧತ್ವ ಏನಂದರೆ, ಅದಕ್ಕೋಸ್ಕರ ಪಾಪ ಮಾಡುವದೆ ಅಸಾಧ್ಯತ್ವವಾಗಿರಲಿಲ್ಲಾ. — ಅಸಾಧ್ಯತ್ವವು ಅವನ ಸ್ವತಂತ್ರವುಳ್ಳ ವಿಕಸನದ ಅಂತ್ಯದಲ್ಲಿ ಸಾಧ್ಯವಾಗ ಬೇಕಾಗಿ ದೇವರು ಚಿತ್ತೈಸಿದ್ದಾಗಿರುತ್ತದೆ. ಆದರೆ ಮನುಷ್ಯನ ಆದಿಸ್ಥಿತಿಯು ಒಳ್ಳೇದೂ ಅಲ್ಲಾ ಕೆಟ್ಟದ್ದೂ ಅಲ್ಲಾ ಎಂಬ ಹಾಗೆ, ಪಾಪ ಮಾಡದಿರುವದು ಸಾಧ್ಯತ್ವವೆಂದಾಗಿ ಮಾತ್ರವೆ ಇರಲಿಲ್ಲಾ. ಯಾಕಂದರೆ ಈ ಪ್ರಕಾರ ಇದ್ದದ್ದಾದರೆ, ಅವನು ಪಾಪಪತನದಿಂದ ಏನೂ ಕಳಕೊಳ್ಳದೆ, ದೇವರ ಸಂಕಲ್ಪದಲ್ಲಿ ಇದ್ದದ್ದನ್ನು ಹೊಂದಲಿಲ್ಲವೆಂದು ಮಾತ್ರವೆ ಆಗುತ್ತಿತ್ತು. ಇಂಥಾ ಆಲೋಚನೆಗೆ ಎಲ್ಲಾ ದೇವವಾಕ್ಯವೂ ಎಲ್ಲಾ ಚಿತ್ತಿಯುಳ್ಳ ಅನುಭವವೂ ಪ್ರತಿಕೂಲವಾಗಿರುತ್ತದೆ. ಆ ಪರಿಶುದ್ಧತ್ವವು ಸಮಸ್ತ ಒಳ್ಳೇದಕ್ಕೆ ಆಧಾರವೂ ಸಂಕಲ್ಪಿತ ಗುಣವೂ ಆಗಿತ್ತು. ಆದರೆ ಇದು ತನ್ನಿಂದ ತಾನೆ ಸ್ವಭಾವದ ಅವಶ್ಯತ್ವದಿಂದ (ಗಿಡದಲ್ಲಿಯೂ ಪಶುವಿನಲ್ಲಿಯೂ ಇರುವ ಆಧಾರವೂ ಸಂಕಲ್ಪಿತಗುಣವೂ ವಿಕಸಿತವಾಗುವ ಹಾಗೆ) ವಿಕಸಿತವಾಗುವದಿಲ್ಲಾ. ಇದು ಸ್ವತಂತ್ರವುಳ್ಳ ಅನುಮತಿಯಿಂದಲೂ ಸ್ವಂತ ಆತ್ಮಿಕ ಸಹಪ್ರಯತ್ನದಿಂದಲೂ ವಿಕಸಿತವಾಗ ಬೇಕು. (ಸಮ ನೋಡು **೧೯೬, ೧೯೭.**)

**೧೮೩.** ಸನಿರ್ಮಿತಜ್ಞಾನವೂ ತಿಳಿವಿಕೆಯೂ ಬರೇ ಮೂಲವಾಗಿಯೂ ಸಾಮರ್ಥ್ಯವಾಗಿಯೂ ಇತ್ತು. ಆದಕಾರಣ ವಿಕಸಿತವಾಗುವದು ಅವಶ್ಯವಾಗಿತ್ತು. ಪಶುಗಳನ್ನು ಮುಂದೆ ತರುವದರಿಂದಲೂ ಹೆಸರಿಡುವದರಿಂದಲೂ ಅದರ ಆರಂಭವಾಯಿತು. (ಉತ್ಪ. ೨, ೧೯. ೨೦.) ಇದರಿಂದ ಮನುಷ್ಯನಲ್ಲಿ, ಅಜ್ಞಾತ ಅವಿಕಸಿತವಾಗಿ, ಒಳಗಿರುವ ಪ್ರಕೃತಿಯ ತಿಳಿವಿಕೆಯು ಅವನಿಗೆ ಅರಿವು ಆಯಿತು, ವಿಕಸಿತವಾಯಿತು, ಮತ್ತು ಭಾಷಾಸಾಮರ್ಥ್ಯವು ಭಾಷಾಪ್ರಯೋಗವಾಯಿತು.

**೧೮೪.** ಪಶುಗಳನ್ನು ಮುಂದೆ ತಂದದರಿಂದಲೆ ಮನುಷ್ಯನ ಸನಿರ್ಮಿತ ಅಧಿಕಾರಬಲಕ್ಕೆ ಸಹಾ ವಿಕಸನದ ಆರಂಭವಾಯಿತು. ಈ ಕಾರ್ಯದಿಂದ ಪಶುರಾಶಿಯು ಮನುಷ್ಯನ ಅಧಿಕಾರಕ್ಕೆ ಒಪ್ಪಿಕೊಂಡ ಹಾಗೆ ಆಯಿತು. ಅವುಗಳು ಅವನನ್ನು ನಾಯಕನಾಗಿಯೂ, ಅವನು ಅವುಗಳನ್ನು ತನ್ನ ಪ್ರಜೆಯವರೆಂಬದಾಗಿಯೂ ತಿಳಿದ ಹಾಗೆ ಆಯಿತು.

**೧೮೫.** ಸಮಸ್ತ ಭೂಮಿಯಲ್ಲಿ ಅವನ ಅಧಿಕಾರಕ್ಕೆ ಪುಷ್ಟಿಯೂ ಅಭಿವೃದ್ಧಿಯೂ ಉಂಟಾಗ ಬೇಕಾದರೆ (**೧೮೦.**), ಮೊದಲಾಗಿ ಭೂಮಿಯನ್ನೆಲ್ಲಾ ತುಂಬಿಸಿ, ಏಕವಾಗಿರುವವನು ಬಹುಮಂದಿಯಾಗುವದು ಅವಶ್ಯವಾಗಿತ್ತು. ಇದಕ್ಕೋಸ್ಕರ ದೇವರು ಗಂಡನ ಎಲುಬಿನಿಂದ ಹೆಂಡತಿಯನ್ನು ನಿರ್ಮಿಸಿ, ವಿವಾಹವನ್ನು ಫಲವೃದ್ಧಿಯ ಆಶೀರ್ವಾದದೊಡನೆ[1] ಸ್ಥಾಪಿಸಿದನು. ಇದರ ಪರಿಮುಖವಾಗಿ "ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳನ್ನು ಭೂಮಿಯ ಮೇಲ್ಲಾಗದಲ್ಲೆಲ್ಲಾ ನಿವಾಸವಾಗಿರ ಮಾಡುವದು." (ಅ. ಕ್ರಿ. ೧೭, ೨೬. ೨೭.) ಸಾಧ್ಯವಾಯಿತು. ಅದರಿಂದಲೆ ಮನುಷ್ಯನು ಸಮಸ್ತ ಭೂಮಿಯನ್ನು ತುಂಬಿಸಿ ಆಳಲಿಕ್ಕೆ ಶಕ್ತನಾಗ ಬಹುದಾಯಿತು.

೧) "ದೇವರು ಅವರನ್ನು ಆಶೀರ್ವದಿಸಿದನು. ಅವರಿಗೆ ದೇವರು ಹೇಳಿದ್ದೇನಂದರೆ—ಅಭಿವೃದ್ಧಿಯಾಗಿ, ಹೆಚ್ಚಿರಿ; ಭೂಮಿಯನ್ನು ತುಂಬಿ, ವಶ ಮಾಡಿ ಕೊಳ್ಳಿರಿ." (ಉತ್ಪ. ೧, ೨೮.)

ಪರಿಶಿ. ೧. ಮನುಷ್ಯನು (ದೂತರ ಹಾಗೆ) ಆರಂಭದಲ್ಲಿಯೆ ಲಿಂಗ ಹೀನವಾದವರ ಕೂಟವಾಗಿ ನಿರ್ಮಿಸಲ್ಪಡಲಿಲ್ಲ, ಮನುಷ್ಯ ಸಂತತಿ ಎಲ್ಲಾ ರಕ್ತದ ಏಕತ್ವದಿಂದ (ಅ. ಕ್ರಿ. ೧೭, ೨೬.) ಸಂಬಂಧವುಳ್ಳ ಸಭೆಯಾಗಿ ಇರ ತಕ್ಕದ್ದು. ಆದರೆ ಅದು ಹೀಗಿರಲಾಗಿ, ಮೊದಲನೆ ಮನುಷ್ಯನು ಬಿದ್ದರೆ, ಪಾಪದ ಬಾಧ್ಯಸ್ಥಿಕೆಯೂ, ಎಲ್ಲಾ ಸಂತತಿಯು ಅಪರಾಧವೂ, ವಿನಾಶಯೋಗ್ಯತೆಯೂ, ಅದರಿಂದಲೆ ಉಂಟಾಯಿತು. (**೧೯೮.**) ಆದರೆ ಅದೆ ಸಮಯದಲ್ಲಿ ಈ ರಕ್ತಸಂಬಂಧದೊಳಗೆ ರಕ್ಷಕನು ಸೇರುವದರಲ್ಲಿ ಆಧಾರಗೊಂಡ ವಿಮೋಚನೆಯ ಸಾಧ್ಯತ್ವ ಸಹಾ ಸಿದ್ಧವಾಯಿತು. (**೨೨೬.**)

ಪರಿಶಿ. ೨. ವಿವಾಹವು ಮನುಷ್ಯನ ಅಪರಾಧದಿಂದ ಪಾಪಪತನದ ಆಧಾರವಾಗದೆ, ದೇವರ ಚಿತ್ತದ ಪ್ರಕಾರ, ಮನುಷ್ಯನ ಸ್ವಾಭಾವಿಕ ಮಾತ್ರವಲ್ಲ, ನ್ಯಾಯ ಸ್ಥಿತಿಯ ಮತ್ತು ಧರ್ಮಸ್ಥಿತಿಯ ವಿಕಾಸಕ್ಕೆ ಕಾರಣವಾಗಿರ ಬೇಕಾಗಿತ್ತು. (ಸಮ ನೋಡು **೯೭.**) ಈ ಸಂಕಲ್ಪವು ಕ್ರೈಸ್ತ ಧರ್ಮದಲ್ಲಿ ವಿಮೋಚನೆಯಿಂದ ತಿರಿಗಿ ಸಿದ್ಧವಾಯಿತು.

**೧೮೬.** ಪ್ರಕೃತಿಗೆ ಅಹಂಭಾವವೂ ಸ್ವತಂತ್ರವೂ ಇಲ್ಲ. ಅದರ ಪ್ರಯೋಜನವು ಅದಕ್ಕೆ ತನ್ನಲ್ಲಿಯೆ ಇರದೆ, ನಿರ್ಮಾಣಗುಣದ ಚೂರಿ ಆತ್ಮದಲ್ಲಿ ಉಂಟು. ಇದಕ್ಕೆ ಅದು ನಿವಾಸ ಸ್ಥಳವಾಗಿಯೂ ಪ್ರಯತ್ನ ಸ್ಥಳವಾಗಿಯೂ ಕೊಟ್ಟದೆ. ಆ ಆತ್ಮವು ಅದನ್ನು ಆಳಿ, ಶ್ರೇಷ್ಠವಾದ ಸಂಪೂರ್ತಿಗೆ ತಕ್ಕೊಂಡು ಬರ ತಕ್ಕದ್ದು. ಆದಕಾರಣ ಎರಡಕ್ಕೂ ಅತ್ಯಂತ ಜೀವಂತ ಸಂಬಂಧವೂ ಪರಸ್ಪರಯೋಗ್ಯತ್ವವೂ ಉಂಟು. ವಿಕಾಸವಾಗುವದರಲ್ಲಿ ಒಂದನ್ನು ಅಭಿವೃದ್ಧಿಸಿದರೆ, ಅಥವಾ ಅಭ್ಯಂತರಿಸಿದರೆ, ಮತ್ತೊಂದನ್ನು ಸಹಾ ಅಭಿವೃದ್ಧಿಸಿದ ಹಾಗೆ, ಅಥವಾ ಅಭ್ಯಂತರಿಸಿದ ಹಾಗೆ ಆಯಿತು.

**೧೮೭.** ಪ್ರಕೃತಿಯು, ಮುಖ್ಯವಾಗಿ ಭೂಸಂಬಂಧವಾದ ಪ್ರಕೃತಿಯು ಒಳ್ಳೇದಾಗಿ ನಿರ್ಮಿಸಲ್ಪಟ್ಟಿತು[೧]. ಆದರೆ ಅದೆ ಸಮಯದಲ್ಲಿ ಅದು ವಿಕಾಸಯೋಗ್ಯವಾಗಿಯೂ, ಸಹಾಯಾವಶ್ಯವಾಗಿಯೂ ಉಂಟಾಯಿತು. ಯಾಕಂದರೆ ಮನುಷ್ಯನು ಅದರಲ್ಲಿ ತನ್ನ ಸ್ವತಂತ್ರವನ್ನೂ, ತನ್ನ ಚಿತ್ತವನ್ನೂ ಅಭ್ಯಾಸಿಸ ಬೇಕು. ಹಾಗಾದರೆ ಅದರ ಈಗಿನ ಸ್ಥಿತಿಯಲ್ಲಿ ಏನು ಒಳ್ಳೆದಾಗಿರುವದಿಲ್ಲವೊ, ಅದೆಲ್ಲಾ ಮನುಷ್ಯನ ಅಪಯೋಗದಿಂದಲೂ ಆಲಸ್ಯದಿಂದಲೂ ಆದರ ಮೇಲೆ ಬಂದ ವಿನಾಶವೆಂದೂ, ಅಥವಾ ಅದರಿಂದ ಮನುಷ್ಯನಿಗೆ ತಗಲ ಬೇಕಾದ[೨] ಶಾಪವೆಂದೂ ಆಲೋಚಿಸ ತಕ್ಕದ್ದು. (**೨೧೩.**)

೧) "ದೇವರು ತಾನು ಮಾಡಿದ್ದೆಲ್ಲಾ ನೋಡಲಾಗಿ, ಇಗೋ, ಅದು ಬಹು ಒಳ್ಳೇದಾಗಿತ್ತು." (ಉತ್ಪ. ೧. ೩೧.)

೨) ಉತ್ಪ. ೩, ೧೭—೧೯. (**೨೦೩**) ರೋಮಾ. ೮, ೨೦. (**೨೦೫.** ಪರಿಶಿ.)

## ಉ.) ಲೋಕದ ಪಾಲನ ಮತ್ತು ಅಧಿಕಾರ.

**೧೮೮.** ಲೋಕದ ಉತ್ಪತ್ತಿ ಹ್ಯಾಗೊ, ಹಾಗೆಯೆ ಅದರ ಇರೋಣ ಸಹಾ ತಂದೆಯ ದೆಶೆಯಿಂದ ಮಗನ ಮುಖಾಂತರ ಆತ್ಮದಲ್ಲಿ ಉಂಟು[೧]. ದೇವರು ಏಳನೆ ದಿನದಲ್ಲಿ ತಾನು ಮಾಡಿದ ಕೆಲಸವೆಲ್ಲಾ ಬಿಟ್ಟು ವಿಶ್ರಮಿಸಿದನು. (ಉತ್ಪ. ೨, ೨. ೩.) ಹಾಗಂದರೆ ಹೊಸ ಲೋಕಗಳನ್ನು ನಿರ್ಮಿಸುವದನ್ನು ಬಿಟ್ಟನು. ಆದರೆ ನಿರ್ಮಿಸಲ್ಪಟ್ಟ ಲೋಕಗಳ

ಲ್ಲಿ ಯತ್ನೈಸುವದನ್ನೂ[೨], ಅವುಗಳಲ್ಲಿ ತಾನಿಟ್ಟ ಜೀವಶಕ್ತಿಗಳನ್ನು, ಯಾವಾಗಲೂ ಕಾಪಾಡುತ್ತಾ ನವೀಕರಿಸುತ್ತಾ ಇರುವದನ್ನೂ ಬಿಟ್ಟನೆಂದಲ್ಲ. ಲೋಕನಿರ್ಮಾಣಕ್ಕೆ ಲೋಕಪಾಲನವು ಬೇಕು. ಇದರಿಂದ ಅದನ್ನು ಮುಂದೆ ನಡಿಸಿದ ಹಾಗಾಯಿತು.

೧) "ಅವನ ದೆಸೆಯಿಂದಲೂ, ಅವನ ಮೂಲವಾಗಿಯೂ, ಅವನಿಗಾಗಿಯೂ, ಸಮಸ್ತವು." (ರೋಮಾ. ೧೧, ೩೬.) "ತನ್ನ ಬಲದ ವಾಕ್ಯದಿಂದ ಸರ್ವಕ್ಕೆ ಆಧಾರಕನಾಗಿ" ಇದ್ದಾನೆ. (ಇಬ್ರಿ. ೧, ೩.)

೨) "ನನ್ನ ತಂದೆಯು ಈ ವರಿಗೂ ಕೆಲಸ ಮಾಡುತ್ತಾನೆ; ಮತ್ತು ನಾನು ಕೆಲಸ ಮಾಡುತ್ತೇನೆ." (ಯೋಹಾ. ೫, ೧೭.)

**೧೮೯.** ಲೋಕಪಾಲನಕ್ಕೂ ಲೋಕಾಧಿಕಾರಕ್ಕೂ ಹೆಚ್ಚುಕಡಿಮೆಯುಂಟು. ಲೋಕಾಧಿಕಾರವೇನಂದರೆ, ದೇವರು ನಿರ್ಮಾಣದ ವಿಕಾಸವನ್ನು ಒಟ್ಟಿಗೆ ಹ್ಯಾಗೊ, ಹಾಗೆ ಒಂದೊಂದರಲ್ಲಿ ಸಹಾ ತನ್ನಷ್ಟಕ್ಕೆ ಆಗ ಬಿಡದೆ, ತಾನೆ ಪ್ರತ್ಯೇಕವಾಗಿ ಅದಕ್ಕೆ ನೋಡಿ ಕೊಂಡು, ಸ್ವತಂತ್ರವುಳ್ಳ ನಿರ್ಮಾಣದ ಕರಣೀಯ ಗತಿಯನ್ನೂ ಫಲವನ್ನೂ ವಿಶೇಷ ರೀತಿಯಾಗಿ ನಡಿಸಲಾಗಿ, ಎಷ್ಟು ಹಿಂದೆ ಮುಂದೆಯಾದರೂ ನ್ಯಾಯಸ್ಥಿತಿಯ ಲೋಕಕ್ರಮವು ಇನ್ನೂ ಸ್ಥಿರವಾಗಿ ನಿಂತು, ಲೋಕನಿರ್ಮಾಣದ ಪ್ರಯೋಜನವು (**೧೭೨.**) ಸಾಧ್ಯವಾಗುವದು.

"ನೀವು ನನಗೆ ವಿರೋಧವಾಗಿ ಕೇಡನ್ನು ಆಲೋಚಿಸಿದಿರಿ; ಆದರೆ ದೇವರು, ಈಗ ಮಾಡಿದ ಹಾಗೆ, ಬಹು ಜನರನ್ನು ಬದುಕಿಸುವದಕ್ಕೋಸ್ಕರ ಮೇಲಿಗಾಗಿ ಆಲೋಚನೆ ಮಾಡಿದ್ದಾನೆ." (ಉತ್ಪ. ೫೦, ೨೦.) "ನಿಜವಾಗಿ ನೀನು ಅಭಿಷೇಕಿಸಿದ ನಿನ್ನ ಪರಿಶುದ್ಧ ಮಗನಾದ ಯೇಸುವಿಗೆ ವಿರೋಧವಾಗಿ ಹೆರೋದನೂ ಪೊಂತ್ಯ ಪಿಲಾತನೂ, ಜನಾಂಗಗಳ ಸಂಗಡಲೂ, ಇಸ್ರಯೇಲಿನ ಜನರ ಸಂಗಡಲೂ, ನಿನ್ನ ಕೈಯೂ ನಿನ್ನ ಚಿತ್ತವೂ ಮುಂನೇ ಮಿಸಿದಂಥ ಆಗ ತಕ್ಕವುಗಳೆನ್ನೆಲ್ಲಾ ಮಾಡುವದಕ್ಕೆ ಕೂಡಿ ಕೊಂಡರು." (ಅ. ಕ್ರಿ. ೪, ೨೭. ೨೮.) (ಸಮ ನೋಡು. ಯೋಹಾ. ೧೧, ೪೯—೫೨. ಕೀರ್ತ. ೨, ೪.)

**೧೯೦.** ಆದಕಾರಣ ಲೋಕಾಧಿಕಾರವು ವಿಮೋಚನೆಯ ಸಂಕಲ್ಪಕ್ಕೆ ಅತ್ಯಂತ ಸಂಬಂಧವುಳ್ಳದ್ದಾಗಿರುತ್ತದೆ. ಮನುಷ್ಯನು ದೇವರಿಂದ ತಿರುಗಿ ಕೊಂಡಿದ್ದರೂ, ದೇವರು ಮನುಷ್ಯನ ಯೋಗ್ಯತಾನುಸಾರವಾಗಿ ಮಾಡದೆ, ತನ್ನ ಸಂಕಲ್ಪಕ್ಕಾಗಿ ಅವನಿಂದ ತಿರುಗಿ ಕೊಳ್ಳದೆ, ತಾಳ್ಮೆಯಿಂದ ಅವನನ್ನು ಹೊತ್ತು ಕೊಂಡು, ಶರೀರಕ್ಕೂ ಆತ್ಮಕ್ಕೂ ಬೇಕಾದ ವಸ್ತುಗಳಿಂದ ಅವನನ್ನು ಆಶೀರ್ವದಿಸಿ[೧], ಅವನು ತಾನೆ ಆದು ಕೊಂಡ ನಾಶನದ ಮಾರ್ಗಗಳಿಂದ ಅವನನ್ನು ತನ್ನ ಜ್ಞಾನದ ಪ್ರಕಾರವಾಗಿಯೂ, ಕೃಪೆಯ ಪ್ರಕಾರವಾಗಿಯೂ, ಬ

ಹು ವಿಧವಾದ ಶಿಕ್ಷೆಯಿಂದಲೂ, ದಯದಿಂದಲೂ, ತಿರುಗಿಸಲಿಕ್ಕೂ, ಅವನ ಪ್ರಾಣದ ರಕ್ಷಣೆಗೂ ಸಮಾಧಾನಕ್ಕೂ ಬೀಳುವಂಥಾದರ ಕಡೆಗೆ ತರಲಿಕ್ಕೂ ಪ್ರಯತ್ನ ಮಾಡುತ್ತಾನೆ[2]. ಇದನ್ನು ಒಟ್ಟಿಗೆ ಮನುಷ್ಯ ಸಂತತಿ ಎಲ್ಲಾದರ ವಿಷಯದಲ್ಲಿಯೂ ಒಬ್ಬೊಬ್ಬ ಮನುಷ್ಯನ ವಿಷಯದಲ್ಲಿಯೂ ಹೇಳ ಬೇಕು.

೧) ಉತ್ಪ. ೮, ೨೨. ಮತ್ತಾ. ೫, ೪೪. ಅ. ಕ್ರಿ. ೧೪, ೧೭. ೧೭, ೨೪—೨೭.

೨) "ಎಲ್ಲಾ ಶಿಕ್ಷೆಯು ತತ್ಕಾಲಕ್ಕೆ ಸಂತೋಷಕರವಾದದ್ದಲ್ಲ, ದುಃಖಕರವಾದದ್ದೆಂದು, ತೋಚುತ್ತದೆ. ಆದರೆ ತರುವಾಯ ಅದರಿಂದ ಸಾಧಿಸಲ್ಪಟ್ಟಿರುವವರಿಗೆ ಸಮಾಧಾನವುಳ್ಳ ನೀತಿ ಫಲವನ್ನು ಕೊಡುವದು." (ಇಬ್ರಿ. ೧೨, ೧೧.) "ದೇವರ ದಯವು ಮಾನಸಾಂತರಕ್ಕೆ ನಿನ್ನನ್ನು ಪ್ರೇರಣೆ ಮಾಡುತ್ತದೆ ಎಂದು ತಿಳಿಯದೆ, ಅವನ ದಯ, ತಾಳ್ಮೆ, ದೀರ್ಘಶಾಂತಿಗಳ ಐಶ್ವರ್ಯವನ್ನು ಅಸಡ್ಡೆ ಮಾಡುತ್ತೀಯೊ?" (ರೋಮಾ. ೨, ೪.) "ದೇವರನ್ನು ಪ್ರೀತಿ ಮಾಡುವವರಿಗೆ ಮೇಲಿಗಾಗಿ ಎಲ್ಲವುಗಳು ಕೈಕೂಡಿ ಬರುತ್ತವೆಂದು, ಬಲ್ಲೆವು." (ರೋಮಾ. ೮, ೨೮.)

## ಎ.) ಈ ಸೂತ್ರದಲ್ಲಿ ಸಮವಾದ ವಿಶ್ವಾಸ.

**೧೯೧.** ನಮಗೆ ಒಳ್ಳೆದು ಏನುಂಟೊ, ನಾವೇನಾಗಿರುತ್ತೇವೊ, ನಾವೇನು ಮಾಡ ಶಕ್ತರಾಗಿರುತ್ತೇವೊ, ಅದೆಲ್ಲಾ ದೇವರ ಕೃಪಾದಾನವೆಂದು ಬುದ್ಧಿಯಿಂದಲೂ ತುಟಿಗಳಿಂದಲೂ ಮಾತ್ರವಲ್ಲ, ಚನ್ನಾಗಿ ಚುರುಕಾಗಿ ಸಂತೋಷತೆಯ ಹೃದಯದಿಂದ ತಿಳಕೊಂಡು ಅರಿಕೆ ಮಾಡುವದು ಸಹಾ ಅದಕ್ಕೆ ಬೇಕು. ಮತ್ತು ಬಾಲಬೋಧನೆಯಲ್ಲಿರುವ ಪ್ರಕಾರ ಏನು ಹೇಳಲಾಗ ಬೇಕಂದರೆ: "ದೇವರು ನನಗೆ ಶರೀರ, ಕಣ್ಣು, ಕಿವಿ ಮೊದಲಾದ ಸಕಲ ಅವಯವಗಳನ್ನೂ ಬುದ್ಧಿಯನ್ನೂ ಪಂಚೇಂದ್ರಿಯಗಳನ್ನೂ ಕೊಟ್ಟು, ಈ ವರೆಗೆ ಕಾಪಾಡುತ್ತಾ ಇದ್ದಾನೆಂದೂ, ಮತ್ತು ವಸ್ತ್ರ ಹೊದಿಕೆ, ಅನ್ನಪಾನ, ಹೊಲ ಮನೆ, ಹೆಂಡತಿ ಮಕ್ಕಳು, ದನಕರ, ಮೊದಲಾದ ಸಮಸ್ತ ಉಪಕಾರಗಳನ್ನು ದಯಪಾಲಿಸಿ, ಆಹಾರಾದಿ ಬೇಕಾದದ್ದೆಲ್ಲಾ ನನ್ನ ಶರೀರಕ್ಕೋಸ್ಕರವೂ ಪ್ರಾಣಕ್ಕೋಸ್ಕರವೂ, ಅಧಿಕವಾಗಿ ದಿನಾಲೂ ಸಿದ್ಧ ಮಾಡಿ, ಸಕಲ ಸಂಕಟದಲ್ಲಿ ಸಂರಕ್ಷಿಸಿ, ಸಕಲ ಕೇಡಿನಿಂದ ತಪ್ಪಿಸಿ, ಆಶ್ರಯವಾಗಿದ್ದಾನೆಂದೂ, ಆತನು ಇವುಗಳನ್ನೆಲ್ಲಾ ಪುಣ್ಯವೂ ಯೋಗ್ಯತೆಯೂ ಇಲ್ಲದ ನನಗೆ ದಿವ್ಯ ದಯದಿಂದಲೂ ತಂದೆಗೆ ತಕ್ಕ ಕನಿಕರದಿಂದಲೂ ದಯಪಾಲಿಸುತ್ತಾನೆಂದೂ ನಂಬುತ್ತೇನೆ."

**೧೯೨.** ಇದಲ್ಲದೆ ಸಮಸ್ತ ಒಳ್ಳೇ ದಾನಗಳ ದಾತನಿಗೆ ಇಂಥಾ ಅಮಿತವಾದ, ನುಡಿಯ ಕೂಡದ ಉಪಕಾರಗಳಿಗೋಸ್ಕರ ಸಂಪೂರ್ಣ ಹೃದಯದಿಂದ ಸಮವಾದ, ದೇವರಿಗೆ

ಹಿತವಾದ ರೀತಿಯಿಂದ ಕೃತಜ್ಞಾಪಿಸಿ, ಆತನನ್ನು ಸ್ತುತಿಸಿ, ಸೇವಿಸಿ, ಶರೀರ ಪ್ರಾಣಗಳನ್ನೂ ಕಣ್ಣು ಕಿವಿ ಇತ್ಯಾದಿ ಸಮಸ್ತ ಅವಯವಗಳನ್ನೂ, ಬುದ್ಧಿಯನ್ನೂ, ಇಂದ್ರಿಯಗಳನ್ನೂ, ಮನೆ ಮಾರುಗಳನ್ನೂ, ಸಮಸ್ತ ಶರೀರಾತ್ಮಿಕ ವಸ್ತುಗಳನ್ನೂ, ಆತನು ನಮಗೆ ಕೊಟ್ಟ ಕಾರಣ, ಅವುಗಳನ್ನೆಲ್ಲಾ ಆತನ ಚಿತ್ತದ ಪ್ರಕಾರವಾಗಿಯೂ, ಆತನ ಸೇವೆಗಾಗಿಯೂ, ಮಹಿಮೆಗಾಗಿಯೂ ಪ್ರಯೋಗಿಸಿ, ವೆಚ್ಚ ಮಾಡುವದರಲ್ಲಿ, ಆತನಿಗೆ ವಿಧೇಯವಾಗಿರುವದು ಸಹಾ ಅದಕ್ಕೆ ಬೇಕು. ಅದೆ ಪ್ರಕಾರ ಬಾಲಕರಂತೆ ಪೂರ್ಣ ಚರವಸದಿಂದ ನಮ್ಮನ್ನು ಕೃಪೆಯುಳ್ಳ ದೇವರ ನಡಿಸೋಣಕ್ಕೆ ಒಪ್ಪಿಸಿ ಕೊಟ್ಟು, ಆತನ ಹತ್ತರ ಶರೀರ ಪ್ರಾಣಗಳ ಸಮಸ್ತ ಸಂಕಟಗಳಲ್ಲಿ ಸಹಾಯವನ್ನು ಹುಡುಕಿ, ಆತನು ನಮ್ಮ ಮೇಲೆ ಕಳುಹಿಸುವದೆಲ್ಲಾದರಿಂದ, ಅಂದರೆ ಸುಖ ದುಃಖಗಳಿಂದಲೂ, ಶಿಕ್ಷೆ, ಉಪಕಾರಗಳಿಂದಲೂ ಆತನ ಬಳಿಯಲ್ಲಿ ಎಳಿಯಲ್ಪಡುವದು ಸಹಾ ಅವಶ್ಯ.

---

## ೨ನೆ ಸೂತ್ರ.

### ವಿಮೋಚನೆಯ ಅಥವಾ ರಕ್ಷಣೆಯ ಸಂಪೂರ್ತಿಯ ವಿಷಯ.

ಯೇಸು ಕ್ರಿಸ್ತನೆಂಬ ದೇವರ ಏಕಜ ಮಗನಾಗಿರುವಂಥಾ, ಪರಿಶುದ್ಧಾತ್ಮನಿಂದ ಗರ್ಭಧರಿಸಿದಂಥಾ, ಮರೀಯಳೆಂಬ ಕನ್ಯೆಯಿಂದ ಹುಟ್ಟಿದ, ಪೊಂತ್ಯ ಪಿಲಾತನ ಕಾಲದಲ್ಲಿ ಶ್ರಮ ಕ್ರೂಜೆ ಮರಣಗಳನ್ನು ಅನುಭವಿಸಿ, ಹೂಣಲ್ಪಟ್ಟ, ಪಾತಾಳಕ್ಕೆ ಇಳಿದು ಮೂರನೆ ದಿವಸದಲ್ಲಿ ಸತ್ತವರೊಳಗಿಂದ ಎದ್ದ, ಪರಲೋಕಕ್ಕೇರಿ, ಸರ್ವತ್ರಾಣಿಯಾದ ತಂದೆಯಾಗಿರುವ ದೇವರ ಬಲಪಾರ್ಶ್ವದಲ್ಲಿ ಕೂತುಕೊಂಡ, ಅಲ್ಲಿಂದ ಜೀವಿತರನ್ನೂ ಸತ್ತವರನ್ನೂ ನ್ಯಾಯತೀರಿಸುವದಕ್ಕೆ ಬರಲಿಕ್ಕಿರುವ ನಮ್ಮ ಕರ್ತನಲ್ಲಿ ನಂಬುತ್ತೇನೆ.

ಹಾಗಂದರೇನು?

ಯೇಸು ಕ್ರಿಸ್ತನು ಅನಾದಿಯಲ್ಲಿ ತಂದೆಯಿಂದ ಹುಟ್ಟಿದ ನಿಜ ದೇವರೂ, ಮರೀಯಳೆಂಬ ಕನ್ಯೆಯಿಂದ ಹುಟ್ಟಿದ ನಿಜ ಮನುಷ್ಯನೂ ಆಗಿರುವ ನನ್ನ ಕರ್ತನಾಗಿದ್ದಾನೆಂದೂ, ಆತನು ನಾಶಕ್ಕೂ ಆಜ್ಞೆಗೂ ಒಳಗಾದ ನನ್ನನ್ನು ರಕ್ಷಿಸಿ, ಭಂಗಾರವನ್ನಾದರೂ ಬೆಳ್ಳಿಯನ್ನಾದರೂ ಕೊಟ್ಟು ಅಲ್ಲಾ, ತನ್ನ ಸ್ವಂತ ಪರಿಶುದ್ಧ ರಕ್ತವನ್ನು ಚೆಲ್ಲಿ, ನಿರಪರಾಧಿಯಾಗಿ ಶ್ರಮ ಮರಣವನ್ನು ಪಟ್ಟು, ನನ್ನನ್ನು ಕೊಂಡು ಕೊಂಡು, ಸಕಲ ಪಾಪಗಳಿಂದಲೂ ಮರಣದಿಂದಲೂ ಸೈತಾನನ ಕೈಯಿಂದಲೂ ಗೆದ್ದು, ಬಾಧ್ಯವಾಗಿ ಪಡಕೊಂಡಿದ್ದಾನೆಂದೂ

ನಂಬುತ್ತೇನೆ. ಆದ್ದರಿಂದ ಆತನು ಮರಣದಿಂದೆದ್ದು ಯುಗಗಳಲ್ಲಿ ಜೀವಿಸಿ ಆಳುವ ಪ್ರಕಾರ, ನಾನು ಆತನಿಗೆ ಸ್ವಕೀಯನಾಗಿ, ಆತನ ರಾಜ್ಯದಲ್ಲಿ ಆತನ ಸಂಗಡ ಜೀವಿಸಿ, ನಿತ್ಯ ನೀತಿಯಲ್ಲಿಯೂ, ನಿರ್ಮಲತ್ವದಲ್ಲಿಯೂ, ಆನಂದದಲ್ಲಿಯೂ, ಆತನನ್ನು ಸೇವಿಸ ತಕ್ಕವನಾಗಿದ್ದೇನೆ. ಇದು ಸತ್ಯವೇ ಸರಿ.

ಅ.) ವಿಮೋಚನೆಯ ಅವಶ್ಯತ್ವ ಮತ್ತು ಯೋಗ್ಯತ್ವಗಳ ವಿಷಯ.

**೧೯೩.** ಕ್ರಿಸ್ತನು ಕಳದು ಹೋದ, ಶಾಪ ನಿರ್ಣಯಿಸಲ್ಪಟ್ಟ, ಮನುಷ್ಯನಾದ ನನ್ನನ್ನು ವಿಮೋಚಿಸಿ, ಗೆದ್ದು, ಸಕಲ ಪಾಪಗಳಿಂದಲೂ, ಮರಣದಿಂದಲೂ, ಸೈತಾನನ ಅಧಿಕಾರದಿಂದಲೂ ಬಾಧ್ಯವಾಗಿ ಪಡಕೊಂಡನೆಂಬ ಕ್ರೈಸ್ತ ಅರಿವು ನಮ್ಮ ಬಾಲಬೋಧನೆಯಲ್ಲಿ ಉಚ್ಚರಿಸಿ ಇರುವದರಿಂದಲೇ — ಸಮಸ್ತ ಮನುಷ್ಯ ಸಂತತಿಯೂ ಒಬ್ಬೊಬ್ಬ ಮನುಷ್ಯನೂ ಸ್ವಭಾವದಿಂದ ಪಾಪದ ಶಾಪಕ್ಕೂ, ಶಾಪನಿರ್ಣಯಕ್ಕೂ ಒಳಗಾಗಿರಲಾಗಿ, ಈ ಸಂಕಷ್ಟದಲ್ಲಿ ವಿಮೋಚನೆಯು ಅತ್ಯವಶ್ಯವಾಗಿರುತ್ತದೆಂಬದು ಬೋಧಿಸಲ್ಪಟ್ಟ ಹಾಗಾಯಿತು.

**೧೯೪.** ಲೋಕದಲ್ಲಿರುವ ಸಮಸ್ತ ಕೇಡೂ ಅದೈವಿಕವಾದದ್ದೂ ಒಂದೇ ಒಂದು ಸರಪಣಿಯ ಹಾಗೆ ಇರುತ್ತದೆ. ನಿರ್ಮಾಣದಲ್ಲಿ ಪಾಪಪತನವು ದೂತಲೋಕದಲ್ಲಿ ಆರಂಭವಾಗಿ, ಅಲ್ಲಿಂದ ಮರುಳುಗೊಳಿಸುವದರಿಂದ ಮನುಷ್ಯಲೋಕಕ್ಕೆ ಸಹಾ ಬಂತು.

**೧೯೫.** ದೂತರಲ್ಲಿ ಪ್ರಾಮುಖ್ಯನಾದವನೊಬ್ಬನು (ಬಾಸ್‌ಚರನು — ಯೆಶಾ. ೧೪, ೧೨.) ತನ್ನನ್ನು ತಾನೆ ನಿಯಾಮಿಸಿ ಕೊಳ್ಳ ಬೇಕಾದ ಶೋಧದಲ್ಲಿ ನಿಲ್ಲದೆ (**೧೭೬.**) ತನ್ನ ಸ್ವತಂತ್ರವನ್ನು ಪತನಕ್ಕೂ, ದೇವರ ಚಿತ್ತ ಸಂಕಲ್ಪಗಳಿಗೆ ಪ್ರತಿಕೂಲವಾದ ಮಾರ್ಮಲೆಗೂ ಅಪಯೋಗಿಸಿ, ತನ್ನ ಸಂಗಡ ತನ್ನ ನಾಶನದಲ್ಲಿ ಅನೇಕ ಬೇರೆ ದೂತರನ್ನು ಸಹಾ ಎಳಕೊಂಡನು. ಇವರು ಈಗ ಅವನ ಕೈಕೆಳಗೆ ಅಂಧಕಾರದ ರಾಜ್ಯವಾದರು. ಅವನು ತಾನೆ ಸೈತಾನನೆಂದೂ (ವಿರೋಧಿ) ಚಾಡಿಗಾರನೆಂದೂ (ಸಮ ನೋಡು ಯೋಬ್. ೧, ೯. ಇತ್ಯಾದಿ; ೨, ೪. ೫. ಪ್ರಕ. ೧೨, ೧೦.) ಬೆಲಿಯಾಳನೆಂದೂ (ವ್ಯರ್ಥತ್ವ) ಹೆಸರು ಗೊಂಡಿದ್ದಾನೆ. ಅವನ ದೂತರಿಗೆ ದೆವ್ವಗಳೆಂಬ ಹೆಸರುಂಟು. ಉಭಯತರ ಸ್ಥಿತಿಯು ಪಾಪಪತನದಂದಿನಿಂದ ಅತ್ಯಂತ ದುಃಖಕರವಾಗಿರುತ್ತದೆ. ಆದಿ ಮಹಿಮೆಯನ್ನು ಕಳಕೊಂಡವರಾಗಿಯೂ, ಅಧಿಕಾರದಿಂದ ಒಡಿಸಲ್ಪಟ್ಟವರಾಗಿಯೂ, ದೇವರ ಸಮ್ಮುಖದಿಂದ ಹೊರಗೆ ಹಾಕಲ್ಪಟ್ಟವರಾಗಿಯೂ, ಈಗಲೆ ಅಂಧಕಾರದ ಸಂಕೋಲೆಗಳಿಂದ ಕಟ್ಟಲ್ಪ

ಟ್ಟವರಾಗಿಯೂ೧) ಇದ್ದು, ಕಡೇ ದಿನದಲ್ಲಿ ಬರುವಂಥಾ ಇನ್ನೂ ಮಹಾ ಜಯಂಕರವಾದ ನ್ಯಾಯತೀರ್ಪನ್ನು ಎದುರು ನೋಡುತ್ತಾ ಇದ್ದಾರೆ೨).

೧) "ತಮ್ಮ ಆದಿ ಸ್ಥಿತಿಯನ್ನು ಕಾಪಾಡದೆ, ಸ್ವಂತ ವಾಸಸ್ಥಾನವನ್ನು ಬಿಟ್ಟ ದೂತರನ್ನು ದೊಡ್ಡ ದಿನದ ನ್ಯಾಯತೀರ್ವಿಕೆಗೆ ನಿತ್ಯ ಬಂಧನಗಳಲ್ಲಿ ಅಂಧಕಾರದ ಕೆಳಗೆ ಇಟ್ಟಿದ್ದಾನೆ." (ಯೂದ. ೬.) "ದೇವರು ಪಾಪ ಮಾಡಿದ ದೂತರನ್ನು ಕನಿಕರಿಸದೆ, ಕತ್ತಲೆಯ ಸಂಕೋಲೆಗಳಿಂದ ನರಕದಲ್ಲಿ ತಳ್ಳಿ, ನ್ಯಾಯತೀರ್ವಿಕೆಗೆ ಇಡಲ್ಪಟ್ಟವರಾಗಿ ಒಪ್ಪಿಸಿ"ದ್ದಾನೆ. (೨ಪೇತ್ರ. ೨, ೪.) "ಅವನು (ಪಿಶಾಚನು) ಆದಿಯಿಂದ ಕೊಲೆಗಾರನಾಗಿದ್ದನು; ಅವನು ಸತ್ಯದಲ್ಲಿ ನೆಲೆಯಾಗಿರಲಿಲ್ಲ; ಯಾಕಂದರೆ ಅವನಲ್ಲಿ ಸತ್ಯವು ಇಲ್ಲ; ಅವನು ಸುಳ್ಳು ಮಾತಾಡುವಾಗ, ಸ್ವಂತವಾದವುಗಳಿಂದ, ಮಾತಾಡುತ್ತಾನೆ; ಯಾಕಂದರೆ ಸುಳ್ಳುಗಾರನೂ ಸುಳ್ಳಿನ ತಂದೆಯೂ ಆಗಿದ್ದಾನೆ." (ಯೋಹಾ. ೮, ೪೪.)

೨) "ಶಪಿಸಲ್ಪಟ್ಟವರೇ, ನನ್ನನ್ನು ಬಿಟ್ಟು, ಪಿಶಾಚನಿಗೂ ಅವನ ದೂತರಿಗೂ ಸಿದ್ಧಮಾಡಲ್ಪಟ್ಟ ನಿತ್ಯ ಬೆಂಕಿಗೆ ಹೋಗಿರಿ." (ಮತ್ತಾ. ೨೫, ೪೧.) "ಮತ್ತು ಅವರನ್ನು ಮೋಸಗೊಳಿಸಿದ ಪಿಶಾಚನು, . . . ಬೆಂಕಿ ಗಂಧಕಗಳ ಕೆರೆಯಲ್ಲಿ ಹಾಕಲ್ಪಟ್ಟನು. ಮತ್ತು ಎಂದೆಂದಿಗೂ ರಾತ್ರಿ ಹಗಲು ಪೀಡಿಸಲ್ಪಡುವರು." (ಪ್ರಕ. ೨೦, ೧೦.)

ಪರಿಶಿ. ಯಾವಾಗ್ಯೆ, ಹ್ಯಾಗೆ, ಎಲ್ಲಿ, ಸೈತಾನನ ಮತ್ತು ಅವನ ದೂತರ ಪತನವು ಆಯಿತೆಂಬದು ಪರಿಶುದ್ಧ ಬರಹದಲ್ಲಿ ಸ್ಪಷ್ಟವಾಗಿ ಹೇಳಿರುವದಿಲ್ಲಾ. (ನಮಗೆ ದೂತರ ಒಳ್ಳೆ ಸ್ವಭಾವದ ಮತ್ತು ವಿಶೇಷವಾದ ಸ್ಥಿತಿಗಳ ಅನುಭವವೂ ಕೂಲಂಕುಶವಾದ ತಿಳಿವಿಕೆಯೂ ಇಲ್ಲದೆ ಇರುವದರಿಂದ) ಅದೆಲ್ಲಾ ಹೇಳಿದರೂ ಗ್ರಹಿಸ ಕೂಡದಾಗಿರುವ ಕಾರಣ, ಒಂದು ವೇಳ್ಯೆ ಹೇಳಿರುವದಿಲ್ಲಾ. ಆದರೂ ದೇವರ ಹೊರ್ತು ದೇವರ ಹಾಗೆ ಇರಲಿಚ್ಛೈಸುವಂಥಾ ಗರ್ವವೆ ದೂತರ ಪತನಕ್ಕೆ ಸಹಾ ಕಾರಣವಾಯಿತೆಂಬದಕ್ಕೆ ಸಂಶಯವಿರದು. ಹ್ಯಾಗಂದರೆ: ಈ ಗರ್ವವು ಎಲ್ಲಾ ಪಾಪದ ಬೇರಾಗಿರುತ್ತದೆ. ಮತ್ತು ತನ್ನನ್ನೂ ತನ್ನ ದೂತರನ್ನೂ ಬೀಳ ಮಾಡಿದ ಕರಣವನ್ನೇ ಮನುಷ್ಯರ ಶೋಧನೆಗೆ ಸಹಾ ಸೈತಾನನು ಪ್ರಯೋಗಿಸಿದನೆಂದು ತೋರುತ್ತದೆ. (ಉತ್ಪ. ೩, ೫.)

**೧೯೬.** ದೂತಲೋಕದಲ್ಲಿ ಆಗಲೆ ಇದ್ದ ಕೆಟ್ಟದ್ದಕ್ಕೆ ಮನುಷ್ಯನು ಸಮೀಪವಾಗಿ ಇಡಲ್ಪಟ್ಟನು. ಆದರೆ ಅವನು ಅದನ್ನು ತಿರಸ್ಕರಿಸಿ ಜಯಿಸ ಬೇಕಾಗಿ ಇತ್ತು. ಇದರಲ್ಲಿ ಅವನ ಸ್ವಸಂಕಲ್ಪದ ಪರೀಕ್ಷೆಯು ಆಗ ತಕ್ಕದ್ದಾಗಿತ್ತು. ಮೇಲು ಕೀಳುಗಳ ತಿಳಿವಿಕೆಯ ಮರವೂ (ಉತ್ಪತ್ತಿ. ೨, ೯.) ದೇವರ ಬೆದರಿಸುವಿಕೆಯೂ೧) ಸೈತಾನನ ವಿಮೋಹನವೂ೨) ಈ ಪರೀಕ್ಷೆಗೆ ವಿಷಯಗಳೂ ಕರಣಗಳೂ ಆಗಿದ್ದವು.

೧) "ನೀನು ಅದರಿಂದ ತಿನ್ನುವ ದಿವಸದಲ್ಲಿ ಸಾಯಲೇ ಸಾಯುವಿ." (ಉತ್ಪ. ೨, ೧೭.)

೨) "ನೀವು ಸಾಯಲೇ ಸಾಯುವದಿಲ್ಲ; ಆದರೆ ಅದನ್ನು ತಿಂದ ದಿವಸದಲ್ಲಿ ನಿಮ್ಮ ಕಣ್ಣುಗಳು ತೆರೆಯಲ್ಪಡುವವೆಂದೂ, ನೀವು ಮೇಲೂ ಕೇಡೂ ಅರಿತವರಾಗಿ, ದೇವರುಗಳ ಹಾಗಿರುವಿರಿ." (ಉತ್ಪ. ३, ४. ೫.)

ಪರಿಶಿ. ೧. ತೋಟವನ್ನು ಕಾಯ ಬೇಕೆಂಬ (ಉತ್ಪ. ೨, ೧೫.) ಅಪ್ಪಣೆಯಿಂದ, ಕೆಟ್ಟ ಚಿತ್ತವುಳ್ಳವನು ಇದ್ದನೆಂಬದು ಸೂಚಿಸಿದ ಹಾಗಾಯಿತು. ಪರೀಕ್ಷೆಯು ಇಂಥಾದ್ದನ್ನು ಮಾಡ ಬೇಕೆಂದಲ್ಲ, ಇಂಥಾದ್ದನ್ನೆ ಮಾಡ ಬಾರದೆಂದು ಇದ್ದದ್ದು ಅಕಸ್ಮಾತ್ತಾಗಿಯೂ ಮನಸೋಇಚ್ಛೆಯಾಗಿಯೂ ಇರಲಿಲ್ಲ. ಇದರಿಂದ ಕೆಟ್ಟದ್ದು ಮುಂಚೆಯೆ ಇತ್ತೆಂದು ಕಾಣ ಬರುತ್ತದೆ. ಇದಕ್ಕೆ ಮನುಷ್ಯನು ಅನುಕೂಲವಾಗಿ ಅಥವಾ ಪ್ರತಿಕೂಲವಾಗಿ ಇರುವದು ಅವಶ್ಯವಾಗಿತ್ತು.

ಪರಿಶಿ. ೨. ದೇವರು ಸೈತಾನನಿಂದ ಶೋಧನೆಯಾಗಲಿಕ್ಕೆ ಬಿಟ್ಟದ್ದು ಯಾಕಂದರೆ: ಅದು ಮನುಷ್ಯನಿಗೆ ಸ್ವಸಂಕಲ್ಪಕ್ಕೂ ವಿಕಾಸಕ್ಕೂ ಕಾರಣವಾಗುವದರಿಂದ ಅವಶ್ಯವಾಗಿತ್ತು, ಕ್ಷೇಮಕರವಾಗಿರ ಬೇಕಾಗಿತ್ತು. ದೇವರು ತಾನೆ ಮನುಷ್ಯನನ್ನು ಶೋಧಿಸುತ್ತಾನೆ, ಆದರೆ ಕೇಡುಗಳಿಂದ ಶೋಧಿಸುವದಿಲ್ಲ. (ಯಾಕೊ. ೧, ೧३.) ಆತನು ಶೋಧಿಸಿದರೆ ಮನುಷ್ಯನು ಪರಿಶುದ್ಧತ್ವದಲ್ಲಿ ಬೆಳಿಯುವ ಹಾಗೆ ಉಪಾಯವಾಗ ಬೇಕೆಂಬದಕ್ಕಾಗಿ ಮಾತ್ರವೆ ಶೋಧಿಸುತ್ತಾನೆ. ಆತನು ಶೋಧಿಸಿದರೆ, ಜಯಕ್ಕೆ ಬೇಕಾದ ಸಮಸ್ತ ಕರಣಗಳನ್ನೂ ತ್ರಾಣಗಳನ್ನೂ ಕೊಡುತ್ತಾನೆ. (೧ಕೊರಿ. ೧೦, ೧३.) ಆದರೆ ಸೈತಾನನು ಕೇಡಿಗೆ ಶೋಧಿಸುತ್ತಾನೆ.—ದೇವರು ತನ್ನ ಸರ್ವಜ್ಞತೆಯಿಂದ ಪತನವನ್ನು ಮುಂಕಂಡನು. ಆದರೆ ಲೋಕದ ಅಸ್ತಿವಾರ ಹಾಕುವ ಮುಂಚೆಯೆ ವಿಮೋಚನೆಯ ಯೋಜನೆಯನ್ನು ಸಹಾ ಮಾಡಿ ಇದ್ದನು. (**೨೦೬.**)

**೧೯೭.** ಮನುಷ್ಯನು ಶಕ್ತನಾಗಿದ್ದ ಪ್ರಕಾರವೂ ಮಾಡ ಬೇಕಾಗಿದ್ದ ಪ್ರಕಾರವೂ ಈ ಶೋಧನೆಯನ್ನು ಜೈಸಿ, ದೇವರು ಅಪೇಕ್ಷಿಸಿದ ವಿಕಾಸಗತಿಯಲ್ಲಿ ಆರಂಭ ಮಾಡಿ, ಮುಂದೆ ಮುಂದೆ ಬಂದದ್ದಾದರೆ (ಒಳ್ಳೇ ದೂತರ ಹಾಗೆ) ಪಾಪ ಮಾಡ ಕೂಡದಂಥಾ ಪರಿಶುದ್ಧತ್ವವನ್ನು ಹೊಂದುತ್ತಿದ್ದನು. ಆದರೆ ಕೆಟ್ಟ ಅಭಿಲಾಷೆಯನ್ನು ಮನುಷ್ಯನ ಹೃದಯದಲ್ಲಿ ನೆಡಲಿಕ್ಕೆ ಶೋಧಕನಿಗೆ ಉಪಾಯವಾಯಿತು. ಇದಾದ ಮೇಲೆ, ಮತ್ತೆ ಸಂಭವಿಸಿದ ಸಮಸ್ತ ಪಾಪಗಳ ಹಾಗೆಯೆ ಮೊದಲನೆ ಪಾಪದ ಗತಿ ಸಹಾ ಯಾವದಂದರೆ (ಯಾಕೊ. ೧, ೧४. ೧೫.) (**೧೨೭.**) ಸ್ತ್ರೀಯು, ಆ ಮರವು ತಿನ್ನುವದಕ್ಕೆ ಒಳ್ಳೇದೂ ಕಣ್ಣುಗಳಿಗೆ ಇಷ್ಟವೂ, ಆ ಮರವು ಬುದ್ಧಿ ಹೊಂದುವದಕ್ಕೆ ರಮ್ಯವೂ ಎಂದು ನೋಡಿದಳು. (ಕಣ್ಣುಗಳ ಅಭಿಲಾಷೆ, ಮಾಂಸದ ಅಭಿಲಾಷೆ, ಬದುಕಿನ ಹಮ್ಮು—೧ಯೋಹಾ. ೨,೧೬. ಸಮ ನೋಡು **೨೮.**) ಆ ಮೇಲೆ ಅಭಿಲಾಷೆಯು ಗರ್ಭವನ್ನು

ಧರಿಸಿ ಪಾಪವನ್ನು ಹೆರುತ್ತದೆ. ಪಾಪವು ಸಂಪೂರ್ಣವಾದ ಮೇಲೆ ಮರಣವನ್ನು ಹಡಿಯುತ್ತದೆ.

**೧೯೮.** ಈ ಮೊದಲನೆ ಪಾಪದ ತ್ರಾಣವೂ ಫಲವೂ ಮೊದಲನೆ ಮನುಷ್ಯನಿಗೆ ಮಾತ್ರವಲ್ಲಾ, ಅವನಲ್ಲಿಯೂ ಅವನ ಪರಿಮುಖವಾಗಿಯೂ ಅವನ ಎಲ್ಲಾ ಸಂತಾನಕ್ಕೆ ಸಹಾ ಬಂತು (ಜನ್ಮಪಾಪ). ಪಾಪವು ಆದಮನ ಪೂರ್ಣ ಸ್ವಭಾವವನ್ನು ಹಿಡಿದು, ಕೆಡಿಸಿ ಇತ್ತು. ಹ್ಯಾಗೆ ಶರೀರದ ರೋಗ ಹಿಡಿದ ಮನುಷ್ಯಸ್ವಭಾವವು ಜನನದಿಂದ ಮಕ್ಕಳಲ್ಲಿ ಬರುತ್ತದೊ, ಹಾಗೆಯೆ ಪಾಪದಿಂದ ಬಂದ ಆತ್ಮಿಕ ರೋಗದಿಂದ ಗುಂಡಿಯಲ್ಲಿ ಕೆಟ್ಟು ಹೋದ ಆದಮನ ಸ್ವಭಾವವು ಅವನ ಸಮಸ್ತ ಸಂತಾನಕ್ಕೆ ಬರುತ್ತದೆ. ಹೀಗಾಗಿ ಎಲ್ಲರಲ್ಲಿಯೂ ಪಾಪತ್ವವೂ ನ್ಯಾಯಸ್ಥಿತಿಯ ಕೊಳೆಯೂ ಒಡ ಹುಟ್ಟಿಯದೆ[೧]. ಮತ್ತು ಆದಮನಲ್ಲಿ ಹ್ಯಾಗೊ, ಹಾಗೆಯೆ ಸಮಸ್ತರಲ್ಲಿಯೂ ಅದೇ ಶಾಪನಿರ್ಣಯವು ಉಂಟು[೨].

೧) "ಇಗೋ, ಅಕ್ರಮದಲ್ಲಿ ಹುಟ್ಟಿದೆನು; ಪಾಪದಲ್ಲಿ ನನ್ನ ತಾಯಿ ನನ್ನನ್ನು ಗರ್ಭದೊಳಗೆ ಧರಿಸಿ ಕೊಂಡಳು." (ಕೀರ್ತ. ೫೧, ೫.) "ಮನುಷ್ಯನ ಹೃದಯದ ಕಲ್ಪನೆ ಅವನ ಚಿಕ್ಕತನದಾರಭ್ಯ ಕೆಟ್ಟದ್ದು." (ಉತ್ಪ. ೮, ೨೧.) "ಮಾಂಸದಿಂದ ಹುಟ್ಟಿದ್ದು ಮಾಂಸವೇ." (ಯೋಹಾ. ೩, ೬.)

ಟೀಕು. ೧. ಪರಿಶುದ್ಧ ಬರಹದಲ್ಲಿ ಮಾಂಸವು ಅಂದರೆ ಮನುಷ್ಯನ ಪೂರ್ಣ ಪಾಪ ಸ್ವಭಾವವು; ದೇವರು ಮನುಷ್ಯನಲ್ಲಿ ಇಡದೆ, ಪಾಪದಿಂದ ವಿಕಸಿತವಾದ ಸಮಸ್ತ ಅಪೇಕ್ಷೆ ತ್ರಾಣಗಳ ಸಾರವು. ಆದರೆ ಆತ್ಮವು ಮಾಂಸಕ್ಕೆ ಪ್ರತಿಕಾರವಾಗಿರುವಷ್ಟಕ್ಕೆ ಏನಂದರೆ: ಮನುಷ್ಯನಲ್ಲಿ ದಿವ್ಯವಾದದ್ದೆಲ್ಲಾ, ಅಂದರೆ, ಆದಿಯಲ್ಲಿ ಅವನಿಗಿದ್ದಂಥಾ ಮತ್ತು ವಿಮೋಚನೆಯಿಂದ ನವೀಕರಿಸಲ್ಪಟ್ಟಂಥಾ ದಿವ್ಯವಾದದ್ದು.

೨) "ಸ್ವಭಾವದಿಂದ ಕೋಪದ ಮಕ್ಕಳಾಗಿದ್ದೆವು." (ಎಫೆ. ೨, ೩.) "ಒಬ್ಬ ಮನುಷ್ಯನಿಂದ ಪಾಪವೂ, ಪಾಪದಿಂದ ಮರಣವೂ, ಲೋಕದಲ್ಲಿ ಪ್ರವೇಶಿಸಿ, ಈ ಪ್ರಕಾರ ಎಲ್ಲರು ಪಾಪ ಮಾಡಿದ್ದಲ್ಲಿ, ಮರಣವು ಎಲ್ಲರ ಮೇಲೆ ವ್ಯಾಪಿಸಿದ ಹಾಗಿರುವದು." (ರೋಮಾ. ೫, ೧೨.)

ಟೀಕು. ೨. ಜನ್ಮ ಪಾಪದ ಬೋಧನೆಯನ್ನು ಒಂದೇಯಾಗಿ ಅಲ್ಲ, ವಿಮೋಚನೆಯ ಬೋಧನೆಯ ಸಂಗಡ ಆಲೋಚಿಸ ತಕ್ಕದ್ದು. ಅಗ್ಯೆ ಒಂದಕ್ಕೊಂದು ಆಧಾರವಾಗಿರುವದು. ಕ್ರಿಸ್ತನು ಎರಡನೆ ಆದಮನು. (**೨೨೦—೨೨೨.**) ಆದಮನ ಪಾಪವೂ ಶಾಪವೂ ಶರೀರ ಪ್ರಕಾರದ ಜನ್ಮದಿಂದ ಹ್ಯಾಗೊ, ಹಾಗೆಯೆ ಕ್ರಿಸ್ತನ ಪುಣ್ಯವೂ ಪರಿಶುದ್ಧತ್ವವೂ ಆತ್ಮಿಕ ಹುಟ್ಟಿಸೋಣದಿಂದ ಅಂದರೆ ಪುನರ್ಜನ್ಮದಿಂದ ನಮಗೆ ಬರುತ್ತದೆ. "ಒಬ್ಬನ

ಅಕ್ರಮದಿಂದ ಎಲ್ಲಾ ಮನುಷ್ಯರಿಗೆ ಹ್ಯಾಗೆ ಆಜ್ಞೆನಿರ್ಣಯಕ್ಕಾಯಿತೊ, ಹಾಗೆಯೆ ಒಬ್ಬನ ನೀತಿಯಿಂದ ಎಲ್ಲಾ ಮನುಷ್ಯರಿಗೆ ಜೀವದ ನೀತಿನಿರ್ಣಯಕ್ಕಾಯಿತು. ಹ್ಯಾಗಂದರೆ ಯಾವ ಪ್ರಕಾರ ಒಬ್ಬನೆ ಮನುಷ್ಯನ ಅವಿಧೇಯತ್ವದಿಂದ ಅನೇಕರಾದವರು ಪಾಪಿಗಳಾಗಲ್ಪಟ್ಟರೊ, ಅದೆ ಪ್ರಕಾರ ಒಬ್ಬನಾದವನ ವಿಧೇಯತ್ವದಿಂದ ಅನೇಕರಾದವರು ನೀತಿವಂತರಾಗಲ್ಪಡುವರು." (ರೋಮಾ. ೫, ೧೮. ೧೯.) (ಸಮ ನೋಡು **೨೭೫.** ಪರಿಶಿ.)

ಪರಿಶಿ. ೩. ಒಂದೊಂದು ಕುಲದ, ಒಟ್ಟಾರೆ ಸಮಸ್ತ ಮನುಷ್ಯ ಸಂತತಿಯ ಏಕತ್ವವೂ ನಿರಂತರತೆಯೂ ಇದಕ್ಕೆ ಸಾಕ್ಷಿ. ಕುಲರೋಗಗಳು. ಕುಲಪಾಪಗಳು. ಕುಲಮಾನಾವಮಾನ.—ಯಾರು ಹೆತ್ತವರಿಂದ ಕ್ಷಯ ರೋಗವನ್ನು ಹೊಂದುತ್ತಾನೊ, ಅದರ ಸಮಸ್ತ ಫಲಗಳನ್ನು ಸಹಾ ಹೊಂದುತ್ತಾನೆ. ಅದೆ ಪ್ರಕಾರ ಪಾಪತ್ವದ ಸಂಗಡ ಅದಕ್ಕೆ ಅವಶ್ಯವಾಗಿ ಕೂಡಿರುವಂಥಾದ್ದೆಲ್ಲಾ ಸಹಾ ಬಾರದೆ ನಿಲ್ಲದು.

ಪರಿಶಿ. ೪. ಮನುಷ್ಯ ಸ್ವಭಾವದ ಪರಂಪರಾಗತ ಕೇಡನ್ನೂ ಮನುಷ್ಯನು ನಿಜವಾದ ಒಳ್ಳೇದಕ್ಕೆ ಸ್ವಭಾವದಿಂದ ಅಶಕ್ತನಾಗಿರುತ್ತಾನೆಂಬದನ್ನೂ ಅಲ್ಲಗಳದು, ಪ್ರತಿ ಮನುಷ್ಯನು ದೇವರು ಮೊದಲನೆ ಮನುಷ್ಯನನ್ನು ನಿರ್ಮಿಸಿದಾಗ ಹ್ಯಾಗೊ, ಹಾಗೆಯೆ ಈಗ ಸಹಾ ಒಳ್ಳೆಯವನಾಗಿಯೂ ಪರಿಶುದ್ಧನಾಗಿಯೂ ಹುಟ್ಟುತ್ತಾನೆಂಬದನ್ನೂ, ಅದೆ ಕಾರಣದಿಂದ ಸ್ವಸಾಮರ್ಥ್ಯ ಸದ್ಗುಣಗಳಿಂದ ಪಾಪವನ್ನು ಬಿಟ್ಟು, ಸದಾನಂದವನ್ನು ದುಡಿಯ ಶಕ್ತನಾಗಿರುತ್ತಾನೆಂಬದನ್ನೂ ಸಾಧಿಸುವ ಬೋಧನೆಗೆ ಪೆಲಾಗ್ಯಮತವೆಂದು ಹೇಳುತ್ತಾರೆ. ಇದರ ಮತಸ್ಥಾಪಕನು ಬ್ರಿತ್ತ ದೇಶದ ಬೈರಾಗಿಯಾಗಿರುವ (ಶುಮಾರು ೪೧೧ನೆ ವರ್ಷ) ಪೆಲಾಗ್ಯನು. ಅವನಿಗೆ ಪ್ರತಿವಾದಿಯಾಗಿ ಉತ್ತರ ಅಫ್ರಿಕದ ಹಿಪ್ಪೋವಿನ ಅಧ್ಯಕ್ಷನಾಗಿರುವ ಔಗುಸ್ತೀನನು ಸಭಾಬೋಧನೆಯನ್ನು ವಿಕಸಿಸಿದನು. ಆದರೆ ಈತನ ಪುಸ್ತಕದಲ್ಲಿ ವಿಪರೀತವಾದ ಸಂಗತಿಗಳು ಸಹಾ ಬಂದ ಕಾರಣ, ಮತ್ತೊಬ್ಬರು ಪೆಲಾಗ್ಯನ ಬೋಧನೆಯನ್ನು ಖಂಡಿಸುವಾಗ್ಯೆ, ಔಗುಸ್ತೀನನ ಬೋಧನೆಯನ್ನು ಸಹಾ ಖಂಡಿಸಿದರು. ಹ್ಯಾಗಂದರೆ ಅರ್ಧ ಪೆಲಾಗ್ಯಮತಸ್ಥರು ಔಗುಸ್ತೀನನ ಬೋಧನೆಗೂ ಪೆಲಾಗ್ಯನ ಬೋಧನೆಗೂ ಮಧ್ಯ ಮಾರ್ಗವನ್ನು ಹುಡುಕಿದರು. ಆದರೆ ಇದನ್ನು ಮಾಡುವಾಗ್ಯೆ ದೇವರ ವಾಕ್ಯಕ್ಕೆ ವಿರೋಧವಾಗಿರುವ ಲಘು ಮನಸ್ಸಿನಲ್ಲಿ ಬಿದ್ದರು. ಇವರು, ಆದಮನ ಪತನದಿಂದ ಅವನ ಸಂತಾನವೆಲ್ಲಾದರ ಮೇಲೆ ಪಾಪದ ಕಡೆಗೆ ಎಳಿಯುವ ಗುಣವು ಬಂತೆಂತಾ ಒಪ್ಪಿಕೊಂಡರು. ಆದರೆ ಅದರಿಂದ ಮನುಷ್ಯನು ಸ್ವಭಾವದ ಪ್ರಕಾರ ಎಲ್ಲಾ ಒಳ್ಳೇದಕ್ಕೆ ಅಸಮರ್ಥನಾಗದೆ, ಸ್ವಂತ ಬಲದಿಂದಲೂ ಸ್ವತಂತ್ರದಿಂದಲೂ ಒಳ್ಳೇದನ್ನು ಹಿಡಿಯ ಶಕ್ತನೆಂತಲೂ ಹಿಡಿಯ ಬೇಕೆಂತಲೂ ಹೇಳಿದರು. ಆದಾಗ್ಯೂ ಹುಟ್ಟಿಕೊಳ್ಳೆಯ ದೆಶೆಯಿಂದ ಮನುಷ್ಯನು ಸ್ವಂತ ಕರಣಗಳಿಂದ ತಾನೆ ರಕ್ಷಣೆಯನ್ನೂ ಭಾಗ್ಯವ

ನ್ನೂ ಪಡ ಕೊಳ್ಳುವ ಹಾಗೆ ಸ್ವಂತ ಬಲ ಸಾಕಾಗುವದಿಲ್ಲಾ, ಇದಕ್ಕೆ ಕ್ರಿಸ್ತನಲ್ಲಿ ದೇವರ ಕೃಪೆಯ ಸಾರ್ವಕಾಲಿಕ ಸಹಾಯವು ಅವಶ್ಯ ಅಂದರು. ಈ ಬೋಧನೆಯು ಮೇಲಕ್ಕೆ ಅಜ್ಞಾತವಾಗಿ ರೋವಿಾಯ ಸಭೆಯಲ್ಲಿ ಪ್ರಬಲವಾಯಿತು. ಪುನಃಸ್ಥಾಪಕರು ಕಡೆಯಲ್ಲಿ ಹಳೆ ಸಭಾಬೋಧನೆಯನ್ನು ನವೀಕರಿಸಿ, ಸುವಾರ್ತಾಪಕ್ಷದವರ ಅರಿಕೆಯಲ್ಲಿ ಅದನ್ನು ಮುಖ್ಯಸ್ಥಾನದಲ್ಲಿಟ್ಟರು. (೮.)

**೧೯೯.** ಸಮಸ್ತ ಮನುಷ್ಯರು, ಹೆಚ್ಚುಕಡಿಮೆ ಇಲ್ಲದೆ ಒಳಗಾಗಿರುವ ಸರ್ವಸಾಧಾರಣವಾದ ಪಾಪತ್ವದ ಫಲಗಳಾಗಿ ಬಾಲಬೋಧನೆಯಲ್ಲಿ ಹೇಳಿರುವವುಗಳು ಯಾವವೆಂದರೆ: ಪಾಪದ, ಮರಣದ ಮತ್ತು ಸೈತಾನನ ಅಧಿಕಾರ.

**೨೦೦.** ಪಾಪದ ಅಧಿಕಾರವೇನಂದರೆ: ಪಾಪದ ಅಧಿಕಾರವು ಮನುಷ್ಯನಲ್ಲಿ ಪೂರ್ಣವಾಗಿ ಬೇರೂರಿ ಬಲಗೊಂಡಿರುವದರಿಂದ, ಅದನ್ನು ಎಷ್ಟು ಜಾಗ್ರತೆಯಿಂದ ನಡಿಸಿದ ಬುದ್ಧಿ ಶಿಕ್ಷೆಯಾಗಲಿ, ಎಚ್ಚರಿಸುವಿಕೆಯಾಗಲಿ, ಬೆದರಿಸುವಿಕೆಯಾಗಲಿ, ದಂಡನೆಯಾಗಲಿ, ಶಿಕ್ಷೆಯಾಗಲಿ, ಯಥಾರ್ಥವಾದ ಚಿತ್ತವಾಗಲಿ, ಹೃದಯಪೂರ್ವಕವಾದ ಪ್ರಯತ್ನಗಳಾಗಲಿ, ಕೇಳುವದಕ್ಕೂ, ಆಲೋಚನೆ ಮಾತು ಕ್ರಿಯೆ ಇತ್ಯಾದಿಗಳಲ್ಲಿ ಅದರ ಉತ್ಪಾತಗಳನ್ನು ಸ್ತಬ್ಧ ಮಾಡಲಿಕ್ಕೂ ಶಕ್ತವಾಗಿರುವದಿಲ್ಲಾ. ಮತ್ತು ಒಂದೊಂದು ಹೊಸ ಪಾಪದಿಂದ ಪಾಪದ ಬಲವು ಯಾವಾಗಲೂ ಬೆಳೆಯುತ್ತಾ ಬರುತ್ತದೆ. (**೧೩೮.** ಸಮ ನೋಡು **೧೩೦**ರಲ್ಲಿ ಬರುವ ಉದಾಹರಣೆಯ ಶ್ಲೋಕಗಳನ್ನು.)

**೨೦೧** ಹಾಗೆಯೆ ಮರಣದ ಅಧಿಕಾರವು ಸರ್ವಸಾಧಾರಣವಾಗಿಯೂ ಅಜೇಯವಾಗಿಯೂ ಇರುತ್ತದೆ. ಮರಣದಿಂದ, ಒಟ್ಟಿಗೆ ಇರುವಂಥಾದ್ದು ಬೇರೆಯಾಗುತ್ತದೆ, ದೂರವಾಗುತ್ತದೆ. ಪಾಪವು ಈ ಬೇರೆ ಮಾಡುವಂಥಾದ್ದೂ ದೂರ ಮಾಡುವಂಥಾದ್ದೂ ಆಗಿರುತ್ತದೆ. ಪಾಪವಿದ್ದಲ್ಲಿ ಮರಣವುಂಟು[೧]. ಪಾಪವು ಮೊದಲಾಗಿ ಸಮಸ್ತ ಜೀವಕ್ಕೂ ಸಮಸ್ತ ಆನಂದಕ್ಕೂ ನಿತ್ಯ ಝರಿಯಾಗಿರುವ ದಿವ್ಯ ಆತ್ಮದಿಂದ ಮನುಷ್ಯಾತ್ಮವನ್ನು ಬೇರೆ ಮಾಡುತ್ತದೆ. ಮತ್ತದೇ ಆತ್ಮಿಕಮರಣವು. ಇದು ಇಹದಲ್ಲಿ ತೆಗಿಯಲ್ಪಡದಿದ್ದರೆ ನಿತ್ಯವಾದ ಎರಡನೆ ಮರಣವಾಗುತ್ತದೆ. ಆದರೆ ಪಾಪವು ಶರೀರವನ್ನೂ ಪ್ರಾಣವನ್ನೂ ಬೇರೆ ಬೇರೆ ಮಾಡಿ, ಈ ಪ್ರಕಾರ ಶರೀರದ ಮರಣವನ್ನು ಉಂಟು ಮಾಡುತ್ತದೆ. ಹ್ಯಾಗಂದರೆ ಮನುಷ್ಯನ ಪ್ರಾಣವು ದೇವರಿಂದ ಬೇರೆಯಾದ್ದಾಗಿ ಅತ್ಯಂತ ಬಲಹೀನವಾಗಿರಲಾಗಿ, ತನ್ನ ಶರೀರದ ಸಂಗಡಲಿರುವ ಸಂಬಂಧವನ್ನು ಬಹು ಕಾಲ ವರೆಗೆ ಹಿಡ ಕೊಳ್ಳಲಿಕ್ಕೆ ಶಕ್ತಿ ಇಲ್ಲದ್ದಾಗಿರುತ್ತದೆ.

೧) "ಪಾಪವು ಸಂಪೂರ್ಣವಾದ ಮೇಲೆ ಮರಣವನ್ನು ಹಡಿಯುತ್ತದೆ." (ಯಾಕೊ. ೧, ೧೫.) "ಪಾಪದ ಸಂಬಳವು ಮರಣವು." (ರೋಮಾ. ೬, ೨೩.) "ಮರಣದ ಕೊಂಡಿಯು ಪಾಪವೆ." (೧ಕೊರಿ. ೧೫, ೫೬.) "ಒಬ್ಬ ಮನುಷ್ಯನಿಂದ ಪಾಪವು," ಇತ್ಯಾದಿ. (ರೋಮಾ. ೫, ೧೨.) (**೧೯೮,** ೨.)

ಪರಿಶಿ. ಶರೀರದ ಮರಣಕ್ಕೆ ಮನುಷ್ಯಶರೀರವು ಒಳಗಾಗಿರುವ ಅಸಂಖ್ಯಾತವಾದ ರೋಗಗಳೂ ಬೇನೆಗಳೂ ಶೇರಿದ್ದಾವೆ. ಪ್ರತಿ ರೋಗವೂ ಪ್ರತಿ ಬೇನೆಯೂ ಮರಣದ ಆರಂಭವಾಗಿರುತ್ತದೆ. ನಮ್ಮ ಜೀವ ತಾನೆ ನಿರಂತರವಾಗಿ ನಡಿಯುವ ಮರಣವಾಗಿರುತ್ತದೆ. ಹ್ಯಾಗೆ ಬೆಳಕು ಉರಿಯುವದರಿಂದ ತನ್ನನ್ನು ತಾನೆ ತೀರಿಸುತ್ತದೊ, ಹಾಗೆಯೆ ನಮ್ಮ ಜೀವವು ಪ್ರತಿ ಶ್ವಾಸದಿಂದ ತನ್ನನ್ನು ತಾನೆ ತೀರಿಸುತ್ತದೆ.

**೨೦೨.** ನಮ್ಮ ಪಾಪತ್ವದಿಂದ ಸೈತಾನನ ಅಧಿಕಾರದೊಳಗೆ ನಾವು ದಾಸರಾದೆವು. ಪಾಪದಿಂದ ಲೋಕವು ದೇವರ ಕೈಯೊಳಗಿಂದ ಕೆಳಗೆ ಬಿದ್ದು, ಸೈತಾನನ ಕೈಯಿಗೆ ಒಳಗೆ ಬಿತ್ತು. (ಎಫೆ. ೨, ೨.) ಹ್ಯಾಗಂದರೆ ದೇವರ ಚಿತ್ತಕ್ಕೆ ಅವಿಧೇಯವಾಗಿರುದೆಲ್ಲಾ ಸೈತಾನನ ಚಿತ್ತಕ್ಕೆ ವಿಧೇಯವಾಗಿರುವದಾಗಿರುತ್ತದೆ. ಆದಕಾರಣ ಈತನು ಈ ಲೋಕದ ಅರಸನೆಂದೂ (ಯೋಹಾ. ೧೪, ೩೦. ಎಫೆ. ೬, ೧೨.) ಈ ಲೋಕದ ದೇವರೆಂದು ಸಹಾ ಹೆಸರು ಗೊಂಡಿದ್ದಾನೆ. (೨ಕೊರಿ. ೪, ೪.) ಮತ್ತು ಪಾಪ ಮಾಡುವವನು ಪಿಶಾಚಿಯ ಮಗು[೧]. ಸೈತಾನನ ಅಧಿಕಾರವು ನಮ್ಮ ಮೇಲೆ ಯಾವದಂದರೆ: ಅವನು ನಮ್ಮಲ್ಲಿ ಉಂಟಾಗುವ, ದೇವರಿಗೆ ಹಿತವಾದ ಅಪೇಕ್ಷೆಗಳನ್ನೂ ಯತ್ನಗಳನ್ನೂ ಸಂಕಲ್ಪಗಳನ್ನೂ ರಹಸ್ಯವಾದ ಆತ್ಮಿಕ ಪ್ರಯತ್ನದಿಂದ ಹಾಳು ಮಾಡಿ, ಅಡ್ಡಗಟ್ಟಿ, ನಮ್ಮನ್ನು ಪಾಪಕ್ಕೆ ಎಳಿಯುತ್ತಾನೆ, ಮೋಹಿಸುತ್ತಾನೆ[೨]. ಹಾಗೆಯೆ ನಾವು ನಮ್ಮಲ್ಲಿ ಬೇಕಾದ ಬುದ್ಧಿಯೂ ಜಯಪ್ರದವಾಗಿ ಎದುರು ನಿಲ್ಲುವಪಕ್ಕೆ ಬೇಕಾದ ತ್ರಾಣವೂ ಇಲ್ಲದವರೆಂದು ನೋಡಿ, ಪಾಪಕರವಾದ ಆಲೋಚನೆಗಳನ್ನೂ ಅಭಿಲಾಷೆಗಳನ್ನೂ ನಮ್ಮಲ್ಲಿ ಎಬ್ಬಿಸಿ ಹೆಚ್ಚಿಸುತ್ತಾನೆ[೩]. ಅತ್ತಕಡೆಯಲ್ಲಿ ದೇವರ ಮುಂದೆ ನಮ್ಮ ಪಾಪಗಳಿಗೋಸ್ಕರ ನಮ್ಮ ಮೇಲೆ ದೂರು ಹೇಳಿ[೪], ತನಗಾದ ಹಾಗೆಯೆ ನಮಗೆ ಸಹಾ ವಿನಾಶವು ಪೂರ್ಣವಾಗಿ ಬರಬೇಕೆಂದು ದೇವರ ನೀತಿಯ ಪ್ರಕಟಣೆಯನ್ನು ಅಪೇಕ್ಷಿಸುತ್ತಾನೆ.

೧) "ನೀವು ನಿಮ್ಮ ತಂದೆಯಾದ ಪಿಶಾಚನಿಂದ ಉಂಟಾಗಿ ನಿಮ್ಮ ತಂದೆಯ ಇಚ್ಛೆಗಳನ್ನು ಮಾಡ ಬೇಕೆಂದಿದ್ದೀರಿ. ಅವನು . . . ಸುಳ್ಳುಗಾರನೂ ಸುಳ್ಳಿನ ತಂದೆಯೂ ಆಗಿದ್ದಾನೆ." (ಯೋಹಾ. ೮, ೪೪.) (**೧೯೫.**) "ಪಾಪ ಮಾಡುವವನು ಪಿಶಾಚನವನಾಗಿದ್ದಾನೆ; ಯಾಕಂದರೆ ಆದಿಯಿಂದ ಪಿಶಾಚನು ಪಾಪ ಮಾಡುತ್ತಾನೆ." ಇತ್ಯಾದಿ. (೧ಯೋಹಾ. ೩, ೮.) "ಸಮಸ್ತ ಜಗತ್ತನ್ನು ಮೋಸಗೊಳ್ಳಿಸುವ ಪಿಶಾಚನು." (ಪ್ರಕ. ೧೨, ೯.)

೨) "ಹೃದಯದಲ್ಲಿ ಬಿತ್ತಿದ್ದನ್ನು ದುಷ್ಟನು ಬಂದು ಕಿತ್ತು ಕೊಳ್ಳುತ್ತಾನೆ." (ಮತ್ತಾ. ೧೩, ೧೯.) "ದೇವರ ಹೋಲಿಕೆಯಾದ ಕ್ರಿಸ್ತನ ಮಹಿಮೆಯ ಸುವಾರ್ತೆಯ ಕಾಂತಿಯು ಅವರಿಗೆ ಹೊಳೆಯದ ಹಾಗೆ ಅವರಲ್ಲಿ ಈ ಲೋಕದ ದೇವರು ಅವಿಶ್ವಾಸಿಗಳ ಬುದ್ಧಿಯನ್ನು ಕುರುಡು ಮಾಡಿದ್ದಾನೆ." (೨ ಕೊರಿ. ೪, ೪.)

೩) ಉದಾಹರಣೆಗಳು: ಉತ್ಪ. ೩, ೪—೬. ೧ ದಿನವ. ೨೧, ೧. ಮತ್ತಾ. ೧೬, ೨೩. ಯೋಹಾ. ೧೩, ೨. ಅ. ಕ್ರಿ. ೫, ೩. "ಅವುಗಳನ್ನು (ಗೋಧಿಯೊಳಗೆ ಊದರೆಯನ್ನು ಅಂದರೆ ದುಷ್ಟನ ಮಕ್ಕಳನ್ನು) ಬಿತ್ತುವ ಶತ್ರುವು ಪಿಶಾಚನು." (ಮತ್ತಾ. ೧೩, ೩೯.) "ಅವಿಧೇಯತ್ವದ ಮಕ್ಕಳಲ್ಲಿ ಈಗ ಯತ್ನೈಸುವ ಆತ್ಮ." (ಎಫೆ. ೨, ೨.)

೪) ಉದಾಹರಣೆಗಳು: ಯೋಬ್. ೧, ೨. ಜಕ. ೩, ೧. "ಸೈತಾನನು ನಿಮ್ಮನ್ನು ಗೋಧಿಯು ಹಾಗೆ ಕೇರುವದಕ್ಕೆ ಇಚ್ಛೈಸಿದ್ದಾನೆ." (ಲೂಕ. ೨೨, ೩೧.) "ನಮ್ಮ ಸಹೋದರರ ಮೇಲೆ ದೇವರ ಮುಂದೆ ರಾತ್ರಿ ಹಗಲು ಚಾಡಿ ಹೇಳುವಂಥಾ ನಮ್ಮ ಸಹೋದರರ ಚಾಡಿಗಾರನು." (ಪ್ರಕ. ೧೨, ೧೦.)

**೨೦೩.** ಪ್ರಕೃತಿಗೂ ಆತ್ಮಕ್ಕೂ ಇರುವ ಅತ್ಯಂತ ಸಂಬಂಧದ ಕಾರಣದಿಂದ (**೧೮೬.**) ಪಾಪವು ಮನುಷ್ಯ ಸಂತತಿಯಲ್ಲಿ ತಂದ ಬಲಾತ್ಕಾರ ಸಹಿತವಾದ ಪರಿವ್ಯಾಪಿಸುವ ಗಲಿಬಿಲಿಯಿಂದ ಚೂಸಂಬಂಧವಾದ ಪ್ರಕೃತಿಯಲ್ಲಿ ಸಹಾ ವಿನಾಶಕರವಾದ ಫಲಗಳು ಬಾರದೆ ನಿಲ್ಲವು. ಸೂಕ್ಷ್ಮದೃಷ್ಟಿಯಿಂದ ನೋಡುವವರಿಗೆ ಪ್ರತ್ಯಕ್ಷವಾಗಿರುವಂಥಾ ಪ್ರಕೃತಿಯ ವಿನಾಶವು ಅಹಂಭಾವವಿಲ್ಲದ ಪ್ರಕೃತಿಯನ್ನಲ್ಲಾ, ಅದರಲ್ಲಿ ವಾಸವಾಗಿರುವ ಮನುಷ್ಯನನ್ನು ಶಿಕ್ಷಿಸ ತಕ್ಕ ದಿವ್ಯ ಶಾಪದಿಂದಲೂ೧), ಮನುಷ್ಯನು ಅದನ್ನು ಆಳಿ ಪೂರ್ಣ ಮಾಡ ಬೇಕಾಗಿ ಇದ್ದರೂ (**೧೮೦—೧೮೬.**) ಈ ಉದ್ಯೋಗವನ್ನು ಪೂರ್ಣವಾಗಿ ಪೂರೈಸಲಿಕ್ಕೆ ಪಾಪದಿಂದ ಅಶಕ್ತನಾಗಲಾಗಿ, ಕಾಡುತನದಿಂದಲೂ ಹಾಳು ಬೀಳುವದರಿಂದಲೂ ಪ್ರಕೃತಿಯು ಮೇಲೆ ಬಂತು.

೧) "ನಿನಗೋಸ್ಕರ ಭೂಮಿ ಶಪಿಸಲ್ಪಟ್ಟದ್ದಾಗಲಿ; ನಿನ್ನ ಜೀವದ ದಿವಸಗಳೆಲ್ಲಾ ಸಂಕಟ ಪಟ್ಟು, ಅದರ ಫಲ ತಿನ್ನುವಿ. ಮತ್ತು ಮುಳ್ಳುಗಳನ್ನೂ ದತ್ತೂರಿಗಳನ್ನೂ ನಿನಗೆ ಮೊಳಿಸುವದು; ಹೊಲದ ಪಲ್ಯಗಳನ್ನು ತಿನ್ನುವಿ. ಮಣ್ಣಿಗೆ ತಿರುಗುವ ತನಕ ನಿನ್ನ ಮುಖದ ಬೆವರಿನಿಂದ ರೊಟ್ಟಿ ತಿನ್ನುವಿ." (ಉತ್ಪ. ೩, ೧೭—೧೯.) (ರೊಮಾ. ೮, ೧೯—೨೨.) (**೨೦೫.** ಪರಿಶಿ.)

**೨೦೪.** ಅ. ದೇವರು ತನ್ನ ಸಮಸ್ತ ನಿರ್ಮಾಣಗಳನ್ನು ಆನಂದಕ್ಕೆ ನಿರ್ಮಿಸಿ. ಯಾರೂ ನಾಶವಾಗ ಬೇಕೆಂದು ಮನಸ್ಸಿಲ್ಲದೆ (೨ ಪೇತ್ರ. ೩, ೯.), ಎಲ್ಲರೂ ಮಾನಸಾಂತರಕ್ಕೆ

ತಿರುಗ ಬೇಕೆಂದು ಮನಸ್ಸಾಗಿರಲಾಗಿ, ಬಿದ್ದ ದೂತರಿಗೋಸ್ಕರ ಸಹಾ, ಅವರು ವಿಮೋಚಿಸಲ್ಪಡ ಯೋಗ್ಯರಾಗಿದ್ದರೆ, ವಿಮೋಚನೆಯನ್ನು ಮುಂದಾಗಿ ಯೋಜಿಸುತ್ತಿದ್ದನು. ಆದರೆ ಅವರು ಪರಿಶುದ್ಧ ಬರಹದಲ್ಲಿ ಎಲ್ಲಾ ಕಡೆಯಲ್ಲಿಯೂ ನಿತ್ಯ ಶಿಕ್ಷೆಗೆ ಎಂದಿಗೂ ರಕ್ಷಣೆ ಇಲ್ಲದೆ ಒಳಗಾದವರಾಗಿ ಕಾಣ ಬರುತ್ತಾರೆ. (**೧೯೫.**) ಹಾಗಾದರೆ ಅವರು ರಕ್ಷಿಸಲ್ಪಡುವದು ಅಶಕ್ಯ. ಆದಕಾರಣ ಅವರ ಪತನವು ಅವರ ಚಿತ್ತದ ಪೂರ್ಣ ಕಠಿಣತ್ವದಿಂದ ಬಂದದ್ದಾಗಿ, ಅವರ ಸ್ವಭಾವವು ಎಂದೆಂದಿಗೂ ಒಳ್ಳೇದಾಗ ಕೂಡದ ಹಾಗೆ ಕೆಟ್ಟು ಹೋಗಿರ ಬೇಕು. ಅವರು ಕೆಟ್ಟದ್ದಕ್ಕೆ ಮೋಹಿಸಲ್ಪಡದೆ, ಸ್ವಸಾಮರ್ಥ್ಯದಿಂದಲೂ ಸ್ವಬುದ್ಧಿಯಿಂದಲೂ ಅದನ್ನು ತಮ್ಮಲ್ಲಿ ಉಂಟು ಮಾಡಿದ ಕಾರಣ ಹೀಗಾಯಿತೊ ಏನೊ.

**೨೦೪.** ಇ. ಆದರೆ ಮನುಷ್ಯನ ವಿಧ್ಯಮಾನವು ಬೇರೆ. ಈತನು ಪಾಪದಿಂದ ಅತ್ಯಧಮನಾಗಿ ಹೋದರೂ, ಇನ್ನೂ ವಿಮೋಚಿಸಲ್ಪಡ ಶಕ್ತನಾಗಿರುತ್ತಾನೆ. ಈ ವಿಮೋಚನಾ ಯೋಗ್ಯತ್ವದ ಆಧಾರವೇನಂದರೆ: ಅವನಲ್ಲಿರುವ ದಿವ್ಯ ಹೋಲಿಕೆಯು, ಅವನು ಮೋಹಿತನಾಗಿ ಪಾಪ ಮಾಡಿದರಿಂದ, ಬಲಹೀನವಾಗಿಯೂ ಕಳಂಕವಾಗಿಯೂ ಕತ್ತಲಾಗಿಯೂ ಹೋಗಿದೆ ಸರಿ, ಆದರೆ ಪೂರ್ಣವಾಗಿ ನಿರ್ಮೂಲವಾಗಿಯೂ ಕಳ ಕೊಂಡದ್ದಾಗಿಯೂ ಇರುವದಿಲ್ಲಾ[1].

೧) ಉತ್ಪ. ೯, ೬. (**೮೮, ೨.**) ಯಾಕೊ. ೩, ೯. (**೪೫.**) "ನಾವು ದೇವರ ವಂಶದವರಾಗಿದ್ದೇವೆ." (ಅ. ಕ್ರಿ. ೧೭, ೨೮. ೨೯.)

ಪರಿಶಿ. ೧. ಮನುಷ್ಯನು ಸೈತಾನನ ಹಾಗೆ ಪಾಪವನ್ನು ಸ್ವಬುದ್ಧಿಯಿಂದ ತನ್ನಲ್ಲಿ ತಾನೆ ಹುಟ್ಟಿಸಿ ಕೊಳ್ಳಲಿಲ್ಲಾ. ಅದು (ಅವನು ಪ್ರತಿಯಾಗಿ ನಿಲ್ಲ ಬೇಕಾಗಿದ್ದರೂ ನಿಲ್ಲ ಶಕ್ತನಾಗಿದ್ದರೂ), ಹ್ಯಾಗೂ ಹೊರಗಿನಿಂದ ವಿಮೋಹನದ ಪರಿಮುಖವಾಗಿ ಅನ್ಯವಾಗಿ ಅವನಲ್ಲಿ ಬಂತು. ಅವನ ಸ್ವಭಾವವೆಲ್ಲಾ ಪಾಪದಿಂದ ವ್ಯಾಪಿಸಲ್ಪಟ್ಟು ಕೆಟ್ಟು ಹೋಗಿಯದೆ ಸರಿ. ಆದರೂ ತಾನೆ ಪಾಪವಾಗಿ ಇರುವದಿಲ್ಲ. ಅವನಲ್ಲಿ ಪಾಪಕ್ಕೆ ಎದುರು ಮಾತಾಡಿ, ಅದರಲ್ಲಿ ಸಂತೋಷ ಪಡದೆ (ರೋಮಾ. ೭, ೧೫. ಇತ್ಯಾದಿ.) ಪಾಪ ದೂರ ಮಾಡುವದಕ್ಕೋಸ್ಕರ ಬುದ್ಧಿ ಹೇಳಿ, ಪಾಪ ಮಾಡಿದಾಗ ಅವನನ್ನು ಗದರಿಸುವಂಥಾದ್ದೊಂದು ಉಂಟು. ಇದೆ ಮನಸ್ಸಾಕ್ಷಿ. (**೧೨—೧೪.**) ದೇವರಲ್ಲಿಯೂ ದೇವಾರಾಧನೆಯಲ್ಲಿಯೂ ಸಂತೋಷ ಪಡದ ಮನಸ್ಸು ಪತಿತ ಮನುಷ್ಯನ ಹೃದಯದಲ್ಲಿ ಕಾಣ ಬಂದರೂ, ಅದರಲ್ಲಿಯೆ, ತಿಳಿಯಲ್ಪಡದಿದ್ದರೂ ಬಹು ಘಟ್ಟಿಯಾಗಿ ಬೇರೂರಿ ಕೊಂಡಿರುವ ದೇವರ ಮೇಲಿನ ಅಭಿಲಾಷೆಯುಂಟು. ಮತ್ತು ಅವನ ಹೃದಯವು ದೇವರಲ್ಲಿ ವಿಶ್ರಮಿಸಿ ಕೊಳ್ಳುವ ಪ

ರ್ಯಂತಕ್ಕೂ ವಿಶ್ರಾಂತಿ ಪಡಲಾರದು. ಎರಡೂ ಬೇರೂರಿಗೊಂಡಿರುವ ಸ್ಥಳವು ನಮ್ಮಲ್ಲಿ ರುವ ದಿವ್ಯ ಪ್ರತಿಬಿಂಬವಾಗಿರುತ್ತದೆ. ಇದು ಪಾಪದ ಕಡೆಗೆ ಪ್ರತಿಯಾಗಿ ನಿಲ್ಲುವ ಮನಸ್ಸಾಕ್ಷಿಯಾಗಿಯೂ, ದೇವರ ಕಡೆಗೆ ಆದಿಸ್ವರೂಪದೊಡನೆ ಅನ್ಯೋನ್ಯವನ್ನು ಹೊಂದಬೇಕೆಂದು ಅಭಿಲಾಷಿಸುತ್ತಾ ಅಪೇಕ್ಷಿಸುತ್ತಾ ಇದ್ದರೂ, ಇನ್ನೂ ಸಂತೃಪ್ತಿ ಹೊಂದದ ಅವಶ್ಯತ್ವವಾಗಿಯೂ ಕಾಣ ಬರುತ್ತದೆ. ಈ ಅಭಿಲಾಷೆಯು ಮನುಷ್ಯನು ವಿಮೋಚಿಸಲ್ಪಡ ಶಕ್ತನಾಗಿರುತ್ತಾನೆಂಬದಕ್ಕೆ ಸಾಕ್ಷಿಯಾಗಿರುತ್ತದೆ. ಹ್ಯಾಗಂದರೆ, ಹಶಿವೆ ಇರುವ ಮಟ್ಟಿಗೆ ಉಣ್ಣುವ ಶಕ್ತಿ ಸಹಾ ಉಂಟು.

ಪರಿಶಿ. ೨. ಮನುಷ್ಯನು ವಿಮೋಚಿಸಲ್ಪಡ ಶಕ್ತನಾಗಿರುತ್ತಾನೆಂದು ಹೇಳಿದರೆ, ಅವನು ವಿಮೋಚಿಸಲ್ಪಡುವನು, ಅಥವಾ ಪಡ ಬೇಕು, ಎಂದಾಗುವದಿಲ್ಲ. ಅವನು ಮುಂದಿಟ್ಟ ವಿಮೋಚನೆಯ ಕಡೆಗೆ ತನ್ನ ಮನಸ್ಸನ್ನು ಕಠಿಣ ಮಾಡಿ ಕೊಂಡು (**೨೮೫.**) ಸೈತಾನನು ಆರಂಭದಲ್ಲಿ ದೇವರಿಗೆ ಮಾರ್ಮಲತು ಮಾಡಿ ಕೊಂಡಂಥಾ ವಿಮೋಚಿಸಲ್ಪಡ ಕೂಡದ ಸ್ಥಿತಿಯಲ್ಲಿ ಬರ ಬಹುದು.

**೨೦೫.** ಮನುಷ್ಯನು ಮೊದಲಿದ್ದ ಮಹಿಮೆಯ ಗುರ್ತುಗಳನ್ನು ಪತನದ ಮೇಲೆ ಸಹಾ ಹ್ಯಾಗೆ ಧರಿಸುವವನಾಗಿರುತ್ತಾನೋ (ಸಮ ನೋಡು ಉತ್ಪ. ೯, ೧. ೨.) ಹಾಗೆಯೆ ಜೊತೆಸಂಬಂಧವಾದ ಪ್ರಕೃತಿ ಸಹಾ ತನ್ನ ಸಮಸ್ತ ಒಡ ಹುಟ್ಟಿದ ಮಹಿಮೆಯನ್ನು ಕಳ ಕೊಂಡು ಇರುವದಿಲ್ಲಾ. ಅದು ಇನ್ನೂ ದೇವರ ಜ್ಞಾನ ಒಳ್ಳೇತನ ಬಲಗಳ ಪ್ರಸಂಗಿಯಾಗಿಯೂ[೧] ಮನುಷ್ಯರಿಗೆಲ್ಲಾ ದಿವ್ಯ ಆಶೀರ್ವಾದದ ಆರ ಕೂಡದ ಬುಗ್ಗೆಯಾಗಿಯೂ ಇರುತ್ತದೆ[೨].

೧) "ಆಕಾಶಗಳು ದೇವರ ಘನವನ್ನು ಸಾರುತ್ತವೆ; ಅಂತರಿಕ್ಷವು ಅವನ ಕೈಕೆಲಸವನ್ನು ತಿಳಿಸುತ್ತದೆ. ದಿವಸವು ದಿವಸಕ್ಕೆ ಮಾತನ್ನು ಉಕ್ಕಿಸಿ, ರಾತ್ರಿಯು ರಾತ್ರಿಗೆ ತಿಳಿವಿಕೆಯನ್ನು ಅರುಹುತ್ತದೆ." (ಕೀರ್ತ. ೧೯, ೧. ೨.) "ಲೋಕಸೃಷ್ಟಿಯಿಂದ ಅವನ ಅದೃಶ್ಯವಾದವುಗಳು, ಅವನ ನಿತ್ಯ ಬಲವೂ ದೈವತ್ವವೂ ನಿರ್ಮಾಣಗಳಿಂದ ಗ್ರಹಿಸಲ್ಪಟ್ಟು, ಪ್ರತ್ಯಕ್ಷವಾಗಿವೆ." (ರೋಮಾ. ೧, ೨೦.) (**೨೪.** ಪರಿಶಿ. ೧.)

೨) "ಭೂಮಿಯು ಇರುವ ಮಟ್ಟಿಗೂ ಬಿತ್ತುವ ಕಾಲವೂ, ಕೊಯ್ಯುವ ಕಾಲವೂ, ತಂಪೂ, ಶೆಖೆಯೂ, ಬೇಸಿಗೆ ಕಾಲವೂ, ಹಿಮಕಾಲವೂ, ಹಗಲೂ, ರಾತ್ರಿಯೂ, ನಿಂತು ಹೋಗವು." (ಉತ್ಪ. ೮, ೨೨.) (ಮತ್ತಾ. ೫, ೪೫. ಅ. ಕ್ರಿ. ೧೪, ೧೭.)

ಪರಿಶಿ. ಮನುಷ್ಯಹೃದಯದಲ್ಲಿ ವಾಸ ಮಾಡುವ ಅಭಿಲಾಷೆಯ ಧ್ವನಿಯು ಅರಿವು ಇದಲ್ಲದೆ ಎಲ್ಲಾ ಪ್ರಕೃತಿಯಲ್ಲಿ ಸಹಾ ಕೇಳುತ್ತದೆ. ಹ್ಯಾಗೆ ಪ್ರಕೃತಿಯು ಮನುಷ್ಯನ ನಿಮಿತ್ತ ಶಾಪದಲ್ಲಿಯೂ ನಾಶದಲ್ಲಿಯೂ ಬಿತ್ತೊ, ಹಾಗೆಯೆ ಅದು ಮನುಷ್ಯನ ನಿಮಿ

ತ್ತ ಶಾಪದಿಂದಲೂ ನಾಶದಿಂದಲೂ ತಿರಿಗಿ ಬಿಡುಗಡೆಯಾಗಿ, ಅವನ ಮುಂದಿನ ಮಹಿಮೆಯಲ್ಲಿ ಪಾಲು ಹೊಂದ ಬೇಕು. "ಯಾಕಂದರೆ ಸೃಷ್ಟಿಯ ಅಭಿಲಾಷೆಯು ದೇವರ ಮಕ್ಕಳು ಪ್ರತ್ಯಕ್ಷವಾಗುವದನ್ನು ಎದುರು ನೋಡುತ್ತದೆ. ಯಾಕಂದರೆ ಸೃಷ್ಟಿಯು ಮಾಯೆಗೆ ಅಧೀನವಾಯಿತು; ಸ್ವಯಿಚ್ಛೆಯಿಂದಲ್ಲ, ಅಧೀನ ಮಾಡಿದವನ ಮುಖಾಂತರ, ನಿರೀಕ್ಷೆಯಲ್ಲಿಯೇ. ಏನಂದರೆ, ಸೃಷ್ಟಿಯು ತಾನೇ ಕ್ಷಯದ ದಾಸತ್ವದೊಳಗಿಂದ ದೇವರ ಮಕ್ಕಳ ಮಹಿಮೆಯಾದ ಬಿಡುಗಡೆಗೋಸ್ಕರ ಬಿಡುಗಡೆ ಮಾಡಲ್ಪಡುವದು. ಯಾಕಂದರೆ ಸರ್ವ ಸೃಷ್ಟಿಯು ಈಗಿನ ಮಟ್ಟಿಗೂ ಕೂಡಾ ನರಳಿ, ಪ್ರಸವವೇದನೆ ಪಡುತ್ತದೆ." (ರೋಮಾ. ೮, ೧೯—೨೨.)

## ಇ.) ವಿಮೋಚನೆ ಸಿದ್ಧ ಮಾಡುವ ಸಂಧಾನಗಳು.

**೨೦೬.** ದೇವರು ಮನುಷ್ಯರನ್ನು ತನ್ನ ಏಕಜ ಮಗನಿಂದ ವಿಮೋಚಿಸಲಿಕ್ಕೆ ಸ್ವತಂತ್ರವಾದ ಕೃಪೆಯ ಪ್ರಕಾರವಾಗಿಯೂ ಅಪಾರವಾದ ಕರುಣೆಯ ಪ್ರಕಾರವಾಗಿಯೂ ಅನಾದಿಯಿಂದ ನಿಶ್ಚೈಸಿ ಇದ್ದನು[೧]. ಆದಕಾರಣ ಪಾಪಪತನದ ತರುವಾಯ ಹಳೆ ಒಡಂಬಡಿಕೆಯಲ್ಲೆಲ್ಲಾ ಸರಪಣಿಯಂತೆ ನಡಿಯುವ ಸಂಧಾನಗಳನ್ನು ಸಹಾ ಅದಕ್ಕೋಸ್ಕರ ಮಾಡಿಟ್ಟನು.

೧) "ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾದ ದೇವರಿಗೆ ಸ್ತೋತ್ರವಾಗಲಿ. ಅವನು ಆತ್ಮಭಾವವಾದ ಸಕಲ ಆಶೀರ್ವಾದದಿಂದ, ಪರಲೋಕದವುಗಳಲ್ಲಿ ಕ್ರಿಸ್ತನಲ್ಲಿ ನಮ್ಮನ್ನು ಆಶೀರ್ವದಿಸಿದ್ದಾನೆ. ಹ್ಯಾಗಂದರೆ ಪ್ರಿಯವಾದವನಲ್ಲಿ, ನಮಗೆ ದಯ ಮಾಡಿದ ತನ್ನ ಕೃಪೆಯ ಮಹಿಮೆಯ ಸ್ತೋತ್ರಕ್ಕಾಗಿ, ನಾವು ಪ್ರೀತಿಯಲ್ಲಿ ತನ್ನ ಮುಂದೆ ಪರಿಶುದ್ಧರೂ, ನಿರ್ಮಲರೂ ಆಗಿರುವ ಹಾಗೆ, ನಮ್ಮನ್ನು ಅವನಲ್ಲಿ ಜಗದುತ್ಪತ್ತಿಗೆ ಮುಂಚೆ ಆದು ಕೊಂಡು, ತನ್ನ ಚಿತ್ತದ ಸುಯೋಚನೆಯ ಪ್ರಕಾರ, ಪುತ್ರಸ್ವೀಕಾರಕ್ಕಾಗಿ ತನಗೋಸ್ಕರ ನಮ್ಮನ್ನು ಯೇಸು ಕ್ರಿಸ್ತನ ಮುಖಾಂತರ ಮುಂನೇಮಿಸಿದ್ದಾನೆ." (ಎಫೆ. ೧, ೩—೬.)

ಪರಿಶಿ. ರಕ್ಷಣೆಯು ತಾನೆ ನಾಲ್ಕು ಸಾವಿರ ವರುಷದ ಸಿದ್ಧ ಕಾಲದ ಮೊದಲು ಬರಲಿಕ್ಕೆ ಆಗಲಿಲ್ಲಾ. ಯಾಕಂದರೆ ಮನುಷ್ಯನು ರಕ್ಷಣೆಗೋಸ್ಕರವೂ ರಕ್ಷಣೆಯು ಮನುಷ್ಯನಿಗೋಸ್ಕರವೂ ಸಿದ್ಧವಾಗ ಬೇಕಾಯಿತು.— ಹ್ಯಾಗೆ ಪ್ರಕೃತಿಯಲ್ಲಿರುವ ಸಮಸ್ತ ಜೀವವೊ, ಹಾಗೆಯೆ ರಕ್ಷಣೆ ಸಹಾ ಮೆಲ್ಲಕ್ಕೆ ಅಂಕುರದಿಂದ ಮೊಗ್ಗೆಯಾಗುವದೂ ಫಲವಾಗುವದೂ ಅವಶ್ಯವಾಗಿತ್ತು.—ಮತ್ತು ಹ್ಯಾಗೆ ಮನುಷ್ಯನು ಸ್ವತಂತ್ರದಿಂದ ಪಾಪಕ್ಕೆ ತನ್ನನ್ನು ಒಪ್ಪಿಸಿ ಕೊಟ್ಟನೊ, ಹಾಗೆಯೆ ಬಲಾತ್ಕಾರದಿಂದ ಅವನಲ್ಲಿ ಬರ ಕೂಡದ ರಕ್ಷಣೆಯನ್ನು ಸಹಾ ಸ್ವತಂತ್ರದಿಂದ ತಕ್ಕೊಳ್ಳಬೇಕು. ಆದರೆ ಇದಕ್ಕೆ ಶಕ್ತನಾಗುವ ಹಾಗೆಯೂ ಮನಸ್ಸುಳ್ಳವನಾಗುವ ಹಾಗೆಯೂ ಆಗಬೇಕಾದರೆ, ಅವನಲ್ಲಿ ಪಾಪದ ತಿಳಿವಿಕೆಯೂ

ವಿಮೋಚನೆಯ ಅಭಿಲಾಷೆಯೂ ಚನ್ನಾಗಿ ಎಬ್ಬಿಸಲ್ಪಡ ಬೇಕು. ಆದರೂ ಇದು ಯೆಹೂದ್ಯರಲ್ಲಿ ಒಂದು ಮಾರ್ಗವಾಗಿಯೂ, ಜನಾಂಗಗಳಲ್ಲಿ ಮತ್ತೊಂದು ಮಾರ್ಗವಾಗಿಯೂ ಸಾಧಿಸಲ್ಪಟ್ಟಿತು.

**೨೦೭.** ದೇವರು ಜನಾಂಗಗಳನ್ನು, ಮನುಷ್ಯನು ಸ್ವಂತ ಜ್ಞಾನದಿಂದಲೂ ಬಲದಿಂದಲೂ ರಕ್ಷಣೆಯನ್ನೂ ಆನಂದವನ್ನೂ ಪಡಕೊಳ್ಳ ಕೂಡದೆಂಬ ತಿಳಿವಿಕೆಗೆ ಬಂದು ಈ ಪ್ರಕಾರ ಅಡ್ಡ ಮಾರ್ಗವಾಗಿ ವಿಮೋಚನೆಗೆ ಸಿದ್ಧವಾಗುವ ಹಾಗೆ, ಸ್ವಂತ ಮಾರ್ಗಗಳಲ್ಲಿ ನಡಿಯ ಬಿಟ್ಟರೂ[೧], ಆತನು ಅಬ್ರಹಾಮನಲ್ಲಿಯೂ ಅವನ ಬೀಜದಲ್ಲಿಯೂ ಒಂದು ಸ್ವಜನಾಂಗವನ್ನು ಆದು ಕೊಂಡು, ಅದರಲ್ಲಿ ರಕ್ಷಣೆಯನ್ನು ಸಮಮಾರ್ಗದಲ್ಲಿ ಸಿದ್ಧ ಮಾಡಿ ಸಾಧಿಸಿದನು. ಈ ಜನಾಂಗವು ಸಾಧನಾಕಾಲದಲ್ಲಿ ದೇವರ ಸಮಸ್ತ ಪ್ರಕಟಣೆಗಳನ್ನು ಧರಿಸುವದಾಗಿಯೂ (ಯಾಜಕಜನಾಂಗವಾಗಿ) ಸಮಸ್ತ ಜನಾಂಗಗಳಿಗೆ ಸಂಪೂರ್ಣವಾದ ರಕ್ಷಣೆಯ ಮಧ್ಯಸ್ಥನಾಗಿಯೂ ಇರ ಬೇಕಾಗಿತ್ತು[೨]. ನಿಯಮವೂ ವಾಗ್ದತ್ತವೂ ಸಿದ್ಧ ಮಾಡುವದಕ್ಕೆ ಕರಣಗಳಾಗಿದ್ದವು.

೧) "ಅವನು ಹೋದ ತಲಾಂತರಗಳಲ್ಲಿ ಜನಾಂಗಗಳನ್ನೆಲ್ಲಾ ತಮ್ಮ ತಮ್ಮ ಮಾರ್ಗಗಳಲ್ಲಿ ನಡೆಯಗೊಡಿಸಿದನು." (ಅ. ಕ್ರಿ. ೧೪, ೧೬.) "ಅವನು ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳನ್ನು ಉಂಟು ಮಾಡಿ, ಮುನ್ನೇಮಿಸಿದ ಕಾಲಗಳನ್ನೂ ಅವರ ನಿವಾಸದ ಮೇರೆಗಳನ್ನೂ ಗೊತ್ತು ಮಾಡಿ, ಅವರು ತಡವಿ, ಕರ್ತನನ್ನು ಕಂಡು ಕೊಂಡಾರೇನೋ ಎಂದು, ಅವನನ್ನು ಹುಡುಕುವ ಹಾಗೆ ಭೂಮಿಯ ಮೇಲ್ಭಾಗದಲ್ಲೆಲ್ಲಾ ನಿವಾಸವಾಗಿರ ಮಾಡಿದ್ದಾನೆ." (ಅ. ಕ್ರಿ. ೧೭, ೨೬. ೨೭.)

೨) "ಭೂಮಿಯ ಜನಾಂಗಗಳೆಲ್ಲಾ ನಿನ್ನ ಬೀಜದಿಂದ ಆಶೀರ್ವದಿಸಲ್ಪಡುವವು." (ಉತ್ಪ. ೨೨, ೧೮.) "ನೀವು ನನಗೆ ಯಾಜಕರ ರಾಜ್ಯವೂ ಪರಿಶುದ್ಧ ಜನವೂ ಆಗಿರುವಿರಿ." (ಹೊರ. ೧೯, ೬.) "ರಕ್ಷಣೆಯು ಯೆಹೂದ್ಯರಿಂದ ಉಂಟಾಗಿದೆ." (ಯೋಹಾ. ೪, ೨೨.)

**೨೦೮.** ಮುಂದಿನ ರಕ್ಷಣೆಯ ವಾಗ್ದತ್ತವು ಪರದೈಸಿನಲ್ಲಿಯೆ ಮೂಲಸುವಾರ್ತೆಯಲ್ಲಿ ಆರಂಭವಾಗಿ[೧], ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗುತ್ತಾ, ಅಬ್ರಹಾಮನ ಬೀಜಕ್ಕೂ[೨], ಯೂದ ಗೋತ್ರಕ್ಕೂ[೩], ದಾವೀದನ ಕುಲಕ್ಕೂ ಪ್ರಾಪ್ತಿಯಾಯಿತು[೪].

೧) "ನಿನಗೂ ಸ್ತ್ರೀಗೂ, ನಿನ್ನ ಬೀಜಕ್ಕೂ ಸ್ತ್ರೀಯ ಬೀಜಕ್ಕೂ ಹಗೆ ಇಡುವೆನು; ಅವನು ನಿನ್ನ ತಲೆಯನ್ನು ಬಡಿಯುವನು, ಆದರೆ ನೀನು ಅವನ ಹಿಮ್ಮಡಿಯನ್ನು ಬಡಿಯುವಿ." (ಉತ್ಪ. ೩, ೧೫.)

೨) "ಭೂಮಿಯ ಕುಲಗಳೆಲ್ಲಾ ನಿನ್ನಲ್ಲಿ ಆಶೀರ್ವದಿಸಲ್ಪಡುವವು." (ಉತ್ಪ. ೧೨, ೩.) (ಸಮ ನೋಡು ಉತ್ಪ. ೨೨, ೧೮. ೨೬, ೪. ೨೮, ೧೪.)

೩) "ಯೆಹೂದನೇ, ನಿನ್ನನ್ನು ನಿನ್ನ ಸಹೋದರರು ಹೊಗಳುವರು. . . ಯೆಹೂದನೇ ಸಿಂಹದ ಮರಿಯಾಗಿದ್ದಾನೆ. . . ದಂಡವು ಯೆಹೂದನಿಂದಲೂ, ಮುದ್ರೆಯ ಕೋಲು ಅವನ ಕಾಲುಗಳ ನಡುವೆಯಿಂದಲೂ, ಶೀಲೋ ಬರುವ ಪರ್ಯಂತರ, ತೊಲಗದು. ಜನಗಳ ವಿಧೇಯತ್ವವು ಅವನದಾಗಿರುವದು." (ಉತ್ಪ. ೪೯, ೮—೧೦.)

೪) "ನಿನ್ನ ಮನೆಯೂ ನಿನ್ನ ರಾಜ್ಯವೂ ನಿನ್ನ ಮುಂದೆ ಯುಗಯುಗಾಂತರಕ್ಕೆ ಸ್ಥಿರಮಾಡಲ್ಪಡುವವು; ನಿನ್ನ ಸಿಂಹಾಸನವು ಯುಗಯುಗಾಂತರಕ್ಕೆ ಶಾಶ್ವತವಾಗಿರುವದು." (೨ ಸಮು. ೭, ೧೬.)

**೨೦೯.** ಬರಲಿಕ್ಕಿದ್ದ ರಕ್ಷಕನ ಜನ್ಮದ ವಿಷಯದಲ್ಲಿ, ಆತನು ಬೆತ್ಲೆಹೇಮಿನಲ್ಲಿಯೂ[೧], ಕನ್ನಿಕೆಯಲ್ಲಿಯೂ[೨], ದಾವೀದನ ದರಿದ್ರವಾದ ಸಂತಾನದಿಂದಲೂ[೩], ಹುಟ್ಟುತ್ತಾನೆಂಬದಾಗಿ ವಾಗ್ದತ್ತ ಮಾಡಿಯದೆ.

೧) "ಎಫ್ರಾತದ ಬೇತ್ಲೆಹೇಮೇ, ನೀನು ಯೆಹೂದದ ಸಾವಿರಗಳಲ್ಲಿ ಸಣ್ಣದಾಗಿದ್ದರೂ, ಇಸ್ರಯೇಲಿನಲ್ಲಿ ದೊರೆತನ ಮಾಡ ತಕ್ಕವನು, ನಿನ್ನಿಂದ ನನಗೆ ಹೊರಡುವನು; ಅವನ ಹೊರಡೋಣಗಳು ಪೂರ್ವದಿಂದಲೂ, ಅನಾದಿ ದಿವಸಗಳಿಂದಲೂ, ಅವೆ." (ಮೀಕ. ೫, ೨.)

೨) "ಇಗೋ ಕನ್ಯಾಸ್ತ್ರೀ ಬಸುರಾಗಿ, ಮಗನನ್ನು ಹೆತ್ತು, ಅವನಿಗೆ ಇಮ್ಮಾನುವೇಲನೆಂದು ಹೆಸರಿಡುವಳು." (ಯೆಶಾ. ೭, ೧೪.) (ಇಮ್ಮಾನುವೇಲ್ ಅಂದರೆ ನಮ್ಮ ಸಂಗಡ ದೇವರು.)

೩) "ಇಶಾಯನ ಬುಡದಿಂದ ಕೊಂಬೆ ಹೊರಡುವದು; ಅವನ ಬೇರಿನಿಂದ ಚಿಗುರು ಫಲಿಸುವದು. ಯೆಹೋವನ ಆತ್ಮವು, ಜ್ಞಾನ ಗ್ರಹಿಕೆಗಳ ಆತ್ಮವು, ಆಲೋಚನೆ ಬಲಗಳ ಆತ್ಮವು, ತಿಳುವಿಕೆಯ, ಯೆಹೋವನ ಭಯದ ಆತ್ಮವು ಅವನ ಮೇಲೆ ನಿಲ್ಲುವದು." (ಯೆಶಾ. ೧೧, ೧. ೨.)

**೨೧೦.** ಆತನ ಪ್ರತ್ಯಕ್ಷತೆಯ ಕಾಲದ ವಿಷಯದಲ್ಲಿ, ಯಾಕೋಬನು ಸಾಯುವಾಗ್ಗೆ ಪ್ರವಾದಿಸಿದ್ದೇನಂದರೆ: ಯೂದನಲ್ಲಿ ಮುದ್ರೇ ಕೋಲು ಇರುತ್ತಿರುವಾಗ, ಆತನು ಬರುವನು. (ಉತ್ಪ. ೪೯, ೮—೧೦.) ಪ್ರವಾದಿಯಾದ ದಾನಿಯೇಲನು ಯೆರೂಸಲೇಮವನ್ನು ಕಟ್ಟಲಿಕ್ಕೆ ಅಪ್ಪಣೆ ಆದಂದಿನಿಂದ ಹಿಡಿದು ಎಪ್ಪತ್ತು (ವರ್ಷ=) ಸಪ್ತಕಗಳನ್ನು (ಅಂದರೆ ೪೯೦ ವರ್ಷ) ಪ್ರವಾದಿಸಿದನು. (ದಾನಿ. ೯, ೨೪.) ಮಲೆಯಾಖಿಯೂ ಹಗ್ಗಾಯಿಯೂ ಎರಡನೆ ದೇವಾಲಯವಿರುವಾಗ ಬರುವನೆಂದು ಹೇಳಿದರು[೧].

೧) "ಇಗೋ ನನ್ನ ದೂತನನ್ನು ಕಳುಹಿಸುತ್ತೇನೆ; ಅವನು ನನ್ನ ಮುಂದೆ ಮಾರ್ಗವನ್ನು ಸಿದ್ಧ ಮಾಡುವನು; ಮತ್ತು ನೀವು ಹುಡುಕುವ ಕರ್ತನು ಫಕ್ಕನೆ ತನ್ನ ದೇವಾಲಯಕ್ಕೆ ಬರುವನು; ನೀವು ಸಂತೋಷ ಪಡುವ ಒಡಂಬಡಿಕೆಯ ದೂತನೇ, ಇಗೋ ಬರುತ್ತಾನೆ." (ಮಲಕಿ. ೩, ೧.) "ಹೌದು, ಎಲ್ಲಾ ಜನಾಂಗಗಳನ್ನು ಅದರಿಸುತ್ತೇನೆ; ಮತ್ತು ಎಲ್ಲಾ ಜನಾಂಗಗಳ ಅಪೇಕ್ಷೆ ಬರುವದು; ಮತ್ತು ಈ ಮನೆಯನ್ನು ಮಹಿಮೆಯಿಂದ ತುಂಬಿಸುತ್ತೇನೆ. . . ಈ ಕಡೇ ಮನೆಯ ಮಹಿಮೆ, ಮೊದಲನೆದಕ್ಕಿಂತ ದೊಡ್ಡದಾಗಿರುವದು." (ಹಗ್ಗಾ. ೨, ೭. ೯.)

**೨೧೧.** ರಕ್ಷಕನ ಸ್ವಭಾವದ ವಿಷಯದಲ್ಲಿ ತಿಳಿಸಲ್ಪಡುವದೇನಂದರೆ, ಆತನು ನಿಜ ಮನುಷ್ಯನೂ (ಉತ್ಪ. ೩, ೧೫. ೧೨, ೩. ೪೯, ೮. ೨ ಸಮು. ೭, ೧೬. ಯೆಶಾ. ೭, ೧೪. ಇತ್ಯಾದಿ.) ಅದೇ ಸಮಯದಲ್ಲಿ ನಿಜ ದೇವರೂ ಆಗಿರುವನು. ಅವನ ಹೆಸರು ಇಮ್ಮಾನುವೇಲ್, ನಮ್ಮ ಸಂಗಡ ದೇವರು, ಅಂದರೆ ದೇವರೂ ಮನುಷ್ಯನೂ, (ಯೆಶಾ. ೭, ೧೪.) ನಿತ್ಯ ಪಿತನು, ಬಲವಂತ ದೇವರು (ಯೆಶಾ. ೯, ೬.) ಯೆಹೋವ ಚಿದ್ಕೇನು, ಅಂದರೆ ನಮ್ಮ ನೀತಿಯಾಗಿರುವ ಯೆಹೋವನು (ಯೆರೆ. ೨೩, ೬.), ಆತನ ಹೊರಡೋಣವು ಯುಗದಿಂದ ಅದೆ. (ಮೀಕ. ೫, ೧.) ಇತ್ಯಾದಿ.

**೨೧೨.** ಮೆಸ್ಸೀಯನ ಉದ್ಯೋಗದ ಕರಣಿಯ ವಿಷಯದಲ್ಲಿ ಪ್ರವಾದಿಸುವದೇನಂದರೆ: ಆತನು ಮೋಶೆಯ ಹಾಗೆ ಪ್ರವಾದಿಯೂ[೧], ಮೆಲ್ಕೀಚೆದೆಕನ ಹಾಗೆ ಯಾಜಕನೂ[೨], ದಾವೀದನ ಹಾಗೆ ಅರಸನೂ[೩], ಆಗಿರುವನು; ಎಲೀಯನಂತೆ ಒಬ್ಬ ಅಗ್ರಗಾಮಿಯು ಅವನಿಗೆ ಮಾರ್ಗವನ್ನು ಸಿದ್ಧ ಮಾಡುವನು[೪].

೧) "ನಿನ್ನ ಹಾಗಿರುವ ಪ್ರವಾದಿಯನ್ನು ಅವರ ಸಹೋದರರಲ್ಲಿಂದ ಅವರಿಗೆ ಎಬ್ಬಿಸುವೆನು; ನನ್ನ ವಾಕ್ಯಗಳನ್ನು ಅವನ ಬಾಯಿಯಲ್ಲಿ ಕೊಡುವೆನು; ನಾನು ಅವನಿಗೆ ಆಜ್ಞಾಪಿಸುವದನ್ನೆಲ್ಲಾ ಅವನು ಅವರಿಗೆ ಹೇಳುವನು. ಅವನು ನನ್ನ ಹೆಸರಿನಿಂದ ಹೇಳುವ ನನ್ನ ವಾಕ್ಯಗಳನ್ನು ಕೇಳದ ಮನುಷ್ಯನು ಯಾವನೋ, ಅವನನ್ನು ನಾನು ವಿಚಾರಿಸುವೆನು." (ದ್ವಿತಿ. ೧೮, ೧೮. ೧೯.)

೨.) "ನೀನು ಮೆಲ್ಕೀಚೆದೆಕನ ತರದ ಪ್ರಕಾರ ಯುಗಯುಗಕ್ಕೂ ಯಾಜಕನಾಗಿದ್ಧೀ ಎಂದು, ಯೆಹೋವನು ಆಣೆ ಇಟ್ಟು, ಪಶ್ಚಾತ್ತಾಪ ಪಡನು." (ಕೀರ್ತ. ೧೧೦, ೪.) (ಸಮ ನೋಡು ಇಬ್ರಿ. ೭.)

೩) "ಯೆಹೋವ ನನ್ನ ಕರ್ತನಿಗೆ ಹೇಳಿದ್ದೇನಂದರೆ—ನಾನು ನಿನ್ನ ಶತ್ರುಗಳನ್ನು ನಿನ್ನ ಪಾದ ಪೀಠವಾಗಿ ಇಡುವ ಪರ್ಯಂತರ, ನನ್ನ ಬಲ ಪಾರ್ಶ್ವದಲ್ಲಿ ಕೂತುಕೋ." ಇತ್ಯಾದಿ. (ಕೀರ್ತ. ೧೧೦, ೧—೩.)

೪) "ಅರಣ್ಯದಲ್ಲಿ ಕೂಗುವವನ ಶಬ್ದವದೆ, ಏನಂದರೆ—ಯೆಹೋವನಿಗೆ ಮಾರ್ಗವನ್ನು ಸಿದ್ಧ ಮಾಡಿರಿ, ಅಡವಿಯಲ್ಲಿ ನಮ್ಮ ದೇವರಿಗೆ ರಾಜಮಾರ್ಗವನ್ನು ನೆಟ್ಟಗೆ ಮಾಡಿರಿ." (ಯೆಶಾ. ೪೦, ೩.) (ಮಲಕಿ. ೩, ೧.) (**೨೧೦.**)

**೨೧೩.** ಆತನ ಜೀವದ ಗತಿಯ ವಿಷಯವಾಗಿ ಹೇಳಿದ್ದೇನಂದರೆ: ಆತನು ಬಡತನದಿಂದಲೂ ಅಲ್ಪತ್ವದಿಂದಲೂ, ಅಪಹಾಸ್ಯದಿಂದಲೂ ತುಚ್ಛೀಕಾರದಿಂದಲೂ, ಶ್ರಮಗಳಿಂದಲೂ ಮರಣದಿಂದಲೂ (ಜೆಕ. ೯, ೯. ೧೧, ೧೨. ೧೩. ಯೆಶಾ. ೫೩. ಕೀರ್ತ. ೨೨. ಯೆಶಾ. ೫೦, ೬. ಇತ್ಯಾದಿ.) ಉತ್ಥಾನಕ್ಕೂ (ಕೀರ್ತ. ೧೬, ೯. ೧೦.) ನಿತ್ಯ ಮಹಿಮೆಗೂ (ಯೆಶಾ. ೫೩, ೧೨. ಕೀರ್ತ. ೧೧೦. ೨.) ಬರುವನು.

**೨೧೪.** ಅ. ವಾಕ್ಯದಿಂದಲೂ ಬೋಧನೆಯಿಂದಲೂ ಆದ ಈ ಪ್ರವಾದನೆಗಳ ಹೊರ್ತು ಮತ್ತೊಂದು ತರದ ಪ್ರವಾದನೆಗಳುಂಟು. ಇವು ಇಸ್ರಯೇಲ್ಯರ ಸಮಸ್ತ ಕಥೆಯಲ್ಲಿ ಕಾಣ ಬರುವಂಥಾ ಗುರ್ತುಗಳಿಂದಲೂ ನಡದ ಕಾರ್ಯಗಳಿಂದಲೂ ಪ್ರತ್ಯಕ್ಷವಾಗುತ್ತವೆ. ಇದೆ ಮುಂಗುರ್ತುಗಳು. ಯಾವವಂದರೆ ಕ್ರಮಗಳು, ಸಂಸ್ಥಾನಗಳು, ಮನುಷ್ಯರು ಅಥವಾ ನಡದ ಕಾರ್ಯಗಳು. ಇವುಗಳಲ್ಲಿ ಆಯಾ ವಿಕಾಸಸ್ಥಾನಕ್ಕೆ ಸರಿಯಾಗಿ ರಕ್ಷಣೆಯು ಮುಂದಿಟ್ಟದೆ. ಮತ್ತು ರಕ್ಷಣೆಯ ವಸ್ತುಗಳ ಸಂಪೂರ್ಣತೆಯು ಸೂಚಿಸಿ ಅದೆ.

ಪರಿಶಿ. ಸಿದ್ಧವಾಗುವಂಥಾ, ಹಾಗೆಯೆ ಸಂಪೂರ್ಣವಾಗುವಂಥಾ ರಕ್ಷಣೆಯು, ಆಯಾ ವಿಕಾಸಸ್ಥಾನವು ಬೇರೆ ಬೇರೆಯಾಗಿದ್ದರೂ, ಅದೆ ಸಂಕಲ್ಪದಿಂದ ಬರುವದಾಗಿಯೂ, ಅದೆ ಆತ್ಮದಿಂದ ಆಧಾರಗೊಂಡು ನಡಿಸಲ್ಪಡುವದಾಗಿಯೂ, ಒಂದೇಯಾಗಿರುವ ಕಾರಣ, ಅಲ್ಲಿ ವಿಕಾಸಗತಿಯ ಸ್ಥಾನದಲ್ಲಿ ಸಹಾ ಮುಂದಿನ ಸಂಪೂರ್ಣತೆಯು ಮುಂಗುರ್ತಾಗಿಯೂ ಸೂಚನೆಯಾಗಿಯೂ ಪ್ರಕಟವಾಗ ಬೇಕು. ಮುಂಗುರ್ತುಗಳ ಪ್ರಯೋಜನವು, ಒಂದು ಕಡೆಯಲ್ಲಿ, ಮುಂದಿನ ಸಂಪೂರ್ಣತೆಗೆ ಬೆರಳು ತೋರಿಸಿ, ತನ್ನ ಅಪೂರ್ಣತೆಯಿಂದ ಸಂಪೂರ್ಣತೆಗೋಸ್ಕರ ಅಭಿಲಾಷೆಯನ್ನು ಎಬ್ಬಿಸುವದೂ, (ಈ ಸಮಯದಲ್ಲಿ ವಾಕ್ಯದ ಪ್ರವಾದನೆಗಳೂ ವಸ್ತುಗಳ ಪ್ರವಾದನೆಗಳೂ ಪರಸ್ಪರ ಟೀಕಿಸಿ ಮುಂದೆ ನಡಿಸುತ್ತವೆ,) ಮತ್ತೊಂದು ಕಡೆಯಲ್ಲಿ, ಸೂಚಿಸುವ ಸಂಪೂರ್ಣ ರಕ್ಷಣೆಯ ವಸ್ತುಗಳ ಬದಲಿಗೆ ಸದ್ಯಕ್ಕೆ ತಕ್ಕಷ್ಟು ಪ್ರಾಪ್ತಿಯಾಗ ಮಾಡುವದೂ ಆಗಿತ್ತು.

**೨೧೪.** ಇ. ಮೊದಲಾಗಿ ಮುಂದಿನ ರಕ್ಷಣೆಯ ಕಾರ್ಯಗಳ ಈ ಮುಂಗುರ್ತುಗಳಿಗೆ ಹಳೆ ಒಡಂಬಡಿಕೆಯ ಸಮಸ್ತ ದೇವಪ್ರತ್ಯಕ್ಷತೆಗಳು, ಸ್ವಪ್ನದಲ್ಲಿ ಆಗಲಿ ದರ್ಶನ

ದಲ್ಲಿಯಾಗಲಿ ಅಥವಾ ಜಾಗರವಾಗಿ ಇಂದ್ರಿಯಗಳ ನೋಟದಲ್ಲಿಯಾಗಲಿ, ಎಲ್ಲಾ ಶೇರಿ ಅವೆ. ಆದರೂ ಬಹಳ ಸರ್ತಿ ಪ್ರತ್ಯಕ್ಷವಾಗುವ ಯೆಹೋವನ ದೂತನ ವಿಷಯದಲ್ಲಿ ಮುಖ್ಯವಾಗಿ ಅದನ್ನು ಹೇಳ ಬೇಕು. (**೧೭೭.** ಪರಿಶಿ.) ಈತನು ದೇವರ (ಅಂದರೆ ಮಗನ—**೧೩೮.**) ಪ್ರತ್ಯಕ್ಷತೆಯಾಗಿ ಮನುಷ್ಯರೂಪದಲ್ಲಿ ಕಾಣ ಬಂದು, ಕ್ರಿಸ್ತನಲ್ಲಿ ಆಗುವ ಮನುಷ್ಯಾವತಾರವನ್ನು ಪ್ರವಾದನೆಯಾಗಿ ಮುಂದಿಟ್ಟ ಹಾಗಾಯಿತು. ಕ್ರಿಸ್ತನಲ್ಲಿ ಆತನು ಮನುಷ್ಯರೂಪವನ್ನು ಮಾತ್ರವಲ್ಲಾ, ಮನುಷ್ಯಸ್ವಭಾವವನ್ನೆ ನಿಜವಾಗಿಯೂ ಯಥಾರ್ಥವಾಗಿಯೂ ನಿತ್ಯಕಾಲಕ್ಕೆ ಧರಿಸಿ ಕೊಂಡನು.

**೨೧೩.** ಅದೆ ಪ್ರಕಾರ ಹಳೆ ಒಡಂಬಡಿಕೆಯಲ್ಲಿ ಯಾರಾದರೂ ದೇವರ ಮನುಷ್ಯನೊಬ್ಬನು ದೇವರ ತ್ರಾಣದಲ್ಲಿ ಬಲವಂತನಾಗಿ, ದೇವರ ರಾಜ್ಯದ ವಿಕಾಸಗತಿಯನ್ನು ಮುನ್ನಡಿಸುವ ಪ್ರಯತ್ನ ಮಾಡಿದರೆ, ಸಮಸ್ತವನ್ನು ಅತಿಶ್ರೇಷ್ಠವಾದ ಕಡೆ ಸಂಪೂರ್ಣತೆಗೆ ತಕ್ಕೊಂಡು ಹೋಗುವಂಥಾ, ದೈವತ್ವದ ಸಮಸ್ತ ಸಂಪೂರ್ಣತೆಯು ಶಾರೀರವಾಗಿ ವಾಸ ಮಾಡುವವನಿಗೆ (ಕೊಲೊ. ೨, ೯.) ಅಂಥಾ ದೇವರ ಮನುಷ್ಯನು ಸಹಾ ಅವನ ಕಾಲಕ್ಕೂ ಅವನ ಸ್ಥಾನಕ್ಕೂ ಅವನ ತ್ರಾಣಕ್ಕೂ ಸರಿಯಾಗಿ ಮುಂಗುರ್ತಾಗಿದ್ದನು. — ಅದೆ ಪ್ರಕಾರ ದೇವರ ರಾಜ್ಯದ ವಿಕಾಸಗತಿಯಲ್ಲಿ ಬಹಳ ವಿಶೇಷವಾಗಿರುವ, ಕಥೆಯಾಗಿ ನಡದ ಸಮಸ್ತ ಕಾರ್ಯಗಳು ಸಹಾ, ರಕ್ಷಣೆಯನ್ನು ಪೂರ್ಣ ಮಾಡುವ, ಅದೆ ಪ್ರಕಾರದ ಕಾರ್ಯಗಳಿಗೆ ಮುಂಗುರ್ತುಗಳಾಗಿ ಅವೆ.

ಪರಿಶಿ. ಮುಂಗುರ್ತುಗಳಾದ ಮನುಷ್ಯರು ಮುಖ್ಯವಾಗಿ ಯಾರಂದರೆ: ಆದಮು, (ರೋಮಾ. ೫, ೧೪.) ಈತನು ಮನುಷ್ಯ ಸಂತತಿಯನ್ನು ಆರಂಭಿಸುವವನಾಗಿರುವದರಿಂದ, ನವೀಕರಿಸಲ್ಪಟ್ಟ ಮನುಷ್ಯ ಸಂತತಿಯನ್ನು ಆರಂಭಿಸುವ ಎರಡನೆ ಆದಮನಾದ ಕ್ರಿಸ್ತನಿಗೆ ಮುಂಗುರ್ತು. (**೧೯೮.** ಪರಿಶಿ. ೨. **೨೨೦.** ಇತ್ಯಾದಿ.) — ಮೆಲ್ಕೀಚೆದೆಕ್, (ಕೀರ್ತ. ೧೧೦, ೪. ಇಬ್ರಿ. ೭.) ಈತನು ಕ್ರಿಸ್ತನಲ್ಲಿ ಏಕವಾದ ರಾಜತ್ವ ಯಾಜಕತ್ವಗಳ್ಗೆ ಮುಂಗುರ್ತು; ಯೋಸೆಫನು, ಈತನು ಕ್ರಿಸ್ತನ ಹಾಗೆಯೆ ತಗ್ಗಿಸುವಿಕೆಯಿಂದಲೂ ಶ್ರಮಗಳಿಂದಲೂ ಶ್ರೇಷ್ಠತ್ವಕ್ಕೂ ಮಹಿಮೆಗೂ ಬಂದು ತನ್ನ ಸಹೋದರರಿಗೋಸ್ಕರ ಮಾತ್ರವಲ್ಲಾ, ಜನಾಂಗಗಳಿಗೋಸ್ಕರ ಸಹಾ ರಕ್ಷಣೆ ತರುವವನಾದನು. ಅದೆ ಪ್ರಕಾರ ಕ್ರಿಸ್ತನ ಹಾಗೆಯೆ ಸಹೋದರರ ಹಗೆಯನ್ನೂ ಹಿಂಸೆಯನ್ನೂ ತಾಳಿ ಕೊಂಡು, ಕಡೆಯಲ್ಲಿ ಅವರನ್ನು ತನ್ನ ಬಳಿಗೆ ತಂದು, ರಕ್ಷಿಸಿ ಕರುಣಿಸಿದನು; ಮೋಶೆಯು, (ದ್ವಿತಿ. ೧೮, ೧೮. ೧೯.) ಈತನು ಜನಾಂಗದ ರಕ್ಷಕನೂ ಹಳೆ ಒಡಂಬಡಿಕೆಯ ಸ್ಥಾಪಕನೂ ಆಗಿ ಮುಂಗುರ್ತಾದನು; **ಯೋಷುವನು,** (ಇಬ್ರಿ. ೪, ೮—೧೦.) ಏಕನಾಮವುಳ್ಳ ಮೂಲ ಗುರ್ತು ಆಗಿ, ನಿತ್ಯ ವಿ

ಶ್ರಾಂತಿಯ ವಾಗ್ದತ್ತದ ದೇಶದೊಳಗೆ ತರುವವನಿಗೆ ಮುಂಗುರ್ತು; ದಾವೀದನು, (ಕೀರ್ತ. ೨. ೧೧೦.) ಕ್ರಿಸ್ತನ ಜಯವುಳ್ಳ ರಾಜ್ಯಕ್ಕೆ ಮುಂಗುರ್ತು; ಸೊಲೊಮೋನನು, (೨ ಸಮು. ೭, ೧೨—೧೫.) ಆತ್ಮದ ನಿತ್ಯ ದೇವಾಲಯವನ್ನು (ಯೋಹಾ. ೨, ೧೯.೪, ೨೩.) ಕಟ್ಟಿದ ನಿತ್ಯನಾದ ಸಮಾಧಾನ ರಾಜನಿಗೆ ಮುಂಗುರ್ತು; ಯೋನನು, (ಮತ್ತಾ. ೧೨, ೪೦.) ಕ್ರಿಸ್ತನ ಉತ್ಥಾನಕ್ಕೂ, ತರುವಾಯ ಅನ್ಯ ಜನಾಂಗಗಳಲ್ಲಿ ನಡಿಯುವ ಪ್ರಸಂಗಕ್ಕೂ ಮುಂಗುರ್ತು. ಹಾಗೇ ಬೇರೆ ಮಂದಿ. ಮುಂಗುರ್ತಾಗಿರುವ ಕಾರ್ಯಗಳು ಮುಖ್ಯವಾಗಿ ಯಾವವಂದರೆ: ಇಸಾಕನ ಬಲಿಯರ್ಪಣೆ (ಇಬ್ರಿ. ೧೧, ೧೯.) ತಂದೆಯ ಏಕಜಮಗನ ಬಲಿಯರ್ಪಣೆಯ ಮುಂಗುರ್ತು. ಅರಣ್ಯದಲ್ಲಿ ಏರಿಸಿದ ಸರ್ಪವು, (ಯೋಹಾ. ೩, ೧೪.) ಕ್ರಿಸ್ತನು ರಕ್ಷಣೆ ತರುವವನಾಗಿ ಕ್ರೂಜೆಗೆ ಏರಿಸಲ್ಪಟ್ಟದ್ದಕ್ಕೆ ಮುಂಗುರ್ತು. ಹಾಗೆಯೆ ಆದುಕೊಂಡ ಜನಾಂಗದ ತಗ್ಗಿಸುವಿಕೆಯೂ, ಮಹಿಮೆಯೂ, ಶ್ರಮಗಳೂ, ಯುದ್ಧಗಳೂ, ಜಯಗಳೂ ಇತ್ಯಾದಿ ಮುಂಗುರ್ತುಗಳಾಗಿರುತ್ತವೆ.

**೨೧೬.** ದೇವರ ರಾಜ್ಯವನ್ನು ಸಮವಾಗಿಟ್ಟು ಮುಂದೆ ನಡಿಸುವದಕ್ಕೆ ಬೇಕಾದ ಹಳೆ ಒಡಂಬಡಿಕೆಯ ದೇವಾಧಿಕಾರದ ಕ್ರಮಗಳೂ ಸಂಧಾನಗಳೂ ಮುಂಗುರ್ತುಗಳಾಗಿರುತ್ತವೆ. ಕ್ರಮಗಳಲ್ಲಿ, ಮುಖ್ಯವಾಗಿ ಪ್ರವಾದನೆಯ, ಯಾಜಕತ್ವದ ಮತ್ತು ರಾಜ್ಯದ ಉದ್ಯೋಗ ಸಹಿತವಾದ ದೇವಾಧಿಕಾರದ ರಾಜವಿಧಾನವೆಲ್ಲಾ ಬಂತು; ಸಂಧಾನಗಳಲ್ಲಿ ದೇವಾರಾಧನೆ ಎಲ್ಲಾ ಬಂತು.

**೨೧೭.** ಹಳೆ ಒಡಂಬಡಿಕೆಯ ದೇವಾರಾಧನೆಯು ಪೂರ್ಣವಾಗಿ ಮುಂಗುರ್ತಿನದಾಗಿರುತ್ತದೆ[೧], ಮತ್ತು ಮುಖ್ಯವಾಗಿ ಅದರ ಮಧ್ಯಮಣಿಯಾದ ಬಲಿಯು. ಇದು ಬಲಿ ಅರ್ಪಿಸುವವನಿಗೆ ಅವನ ಪಾಪಗಳ ಪರಿಹಾರವನ್ನು ಚದ್ರ ಪಡಿಸಿತು. (ಲೇವಿ. ೧೭, ೧೧. ಇಬ್ರಿ. ೯, ೨೨.) ಆದರೂ ಸ್ವಂತ ಬಲದಿಂದಲ್ಲ (ಇಬ್ರಿ. ೧೦, ೪.) ಕ್ರಿಸ್ತನ ಬಲಿಯ ನೆರಳೂ ಮುಂಗುರ್ತೂ ಆಗಿದ್ದದರಿಂದ ಮಾತ್ರವೆ ಅದನ್ನು ಮಾಡಿತು. ಇದು ಸ್ವಂತ ನ್ಯೂನತ್ವದಿಂದ (ಇಬ್ರಿ. ೧೦, ೧—೪.) ಆ ಬಲಿಯ ಕಡೆಗೆ ತೋರಿಸಿ, ಅದರ ಮೇಲೆ ಅಭಿಲಾಷೆಯನ್ನು ಹುಟ್ಟಿಸಿತು.

೧) "ಆದದರಿಂದ, ಇನ್ನು ಯಾವನಾದರೂ ಅನ್ನಪಾನಗಳಲ್ಲಿಯಾದರೂ, ಹಬ್ಬ ಅಮಾವಾಸಿ ಸಬ್ಬತುಗಳ ವಿಷಯದಲ್ಲಿಯಾದರೂ, ನಿಮಗೆ ನ್ಯಾಯತೀರಿಸದಿರಲಿ. ಇವು ಮುಂದಿನವುಗಳ ನೆರಳಾಗಿವೆ, ಆದರೆ ಶರೀರವು ಕ್ರಿಸ್ತನದೇ." (ಕೊಲೊ. ೨, ೧೬. ೧೭.) "ನ್ಯಾಯಪ್ರಮಾಣವು ಕಾರ್ಯಗಳ ಸ್ವರೂಪವಲ್ಲ, ಆಗುವ ಒಳ್ಳೆಯವುಗಳ ನೆರಳು ಉಳ್ಳದ್ದಾಗಿದೆ." (ಇಬ್ರಿ. ೧೦, ೧.)

ಪರಿಶಿ. ಹಳೆ ಒಡಂಬಡಿಕೆಯ ದೇವಾರಾಧನೆಯ ನಿಯಮವು ಮುಂಗುರ್ತಾಗಿಯೂ ನೆರಳಾಗಿಯೂ ಕಾಣಿಸಿದ್ದನ್ನು ಕ್ರೈಸ್ತತ್ವದಲ್ಲಿ ನಿಜವಾಗಿಯೂ ಯಥಾರ್ಥವಾಗಿಯೂ ಮುಂದಿಟ್ಟ ಕೂಡಲೆ, ತನ್ನ ಪ್ರಯೋಜನವನ್ನೂ ಅವಶ್ಯತ್ವವನ್ನೂ ಕಳಕೊಂಡಿತು. ಈ ಗದು ತೆಗದು ಹಾಕಲ್ಪಟ್ಟದೆ. ಆದರೆ ಸಂಪೂರ್ಣವಾಗುವದರಿಂದಲೆ ತೆಗದು ಹಾಕಲ್ಪಟ್ಟಿತು. ಹಾಗೇ ಫಲವಾದಾಗ ಹೂವು ಹೋಗುತ್ತದೆ; ಆದರೆ ಫಲವು ಹೂವಿಗೆ ಪ್ರತೀಕಾರವಾಗಿರುವದಿಲ್ಲ, ಅದರ ಸ್ವಾಭಾವಿಕವಾದ ಸಂಪೂರ್ಣತೆಯಾಗಿರುತ್ತದೆ.

**೨೧೮.** ವಾಗ್ದತ್ತಕ್ಕೂ ಈಡೇರುವಿಕೆಗೂ ಮಧ್ಯದಲ್ಲಿ ನಿಯಮವು (ರೋಮಾ. ೫, ೨೦.) ಕ್ರಿಸ್ತನಿಗೋಸ್ಕರ ಉಪಾಧ್ಯಾಯನಾಗಿ (ಗಲಾ. ೩, ೨೪.) ಒಳಗೆ ಸೇರಿತು. ನಿಯಮದ ಪ್ರಯೋಜನವು, ಸ್ವಾಭಾವಿಕವಾದ ಪಾಪತ್ವದ ಮತ್ತು ಶಾಪತ್ವದ ತಿಳಿವಿಕೆಯನ್ನೂ, ಅದರಿಂದ ವಿಮೋಚನೆಯ ಅಭಿಲಾಷೆಯನ್ನೂ ಹುಟ್ಟಿಸುವಂಥಾದ್ದಾಗಿರುತ್ತದೆ. ಇದು ನೀತಿ ನಿಯಮದ ವಿಷಯದಲ್ಲಿ ಮಾತ್ರವಲ್ಲ (ಸಮ ನೋಡು **೧೪೪.**) ದೇವಾರಾಧನೆಯ ಮತ್ತು ನಾಗರಿಕ ನಿಯಮದ ವಿಷಯದಲ್ಲಿ ಸಹಾ ಸರಿ. ನಿಯಮವು ಎಲ್ಲಾ ಸಮಸ್ತ ಕ್ರಮಗಳಲ್ಲಿಯೂ ವಿಧಿಗಳಲ್ಲಿಯೂ (ತೊಳೆಯುವದರಲ್ಲಿ, ಶುದ್ಧ ಮಾಡುವದರಲ್ಲಿ, ಪ್ರತ್ಯೇಕಿಸುವದರಲ್ಲಿ, ಬಲಿಯರ್ಪಿಸುವದರಲ್ಲಿ, ಇತ್ಯಾದಿ.) ದೇವರ ಪರಿಶುದ್ಧತ್ವವನ್ನೂ ಮನುಷ್ಯನ ಪಾಪತ್ವವನ್ನೂ ಪ್ರಸಂಗಿಸಿತು. ಪಾಪದಿಂದ ದೇವರಿಗೂ ಮನುಷ್ಯರಿಗೂ ಬಂದ ಭೇದವನ್ನು ಎಲ್ಲಾ ಕಡೆಯಲ್ಲಿಯೂ ಬೇಕೆಂದು ತೋರಿಸಿತು. ಜೀವವನ್ನು ಸಮಸ್ತ ವಿಷಯಗಳಲ್ಲಿಯೂ, ಹಾಗೆ ಜನ್ಮ, ರೋಗ, ಮರಣ, ಅನ್ನ ಪಾನ, ಕೆಲಸ ವಿಶ್ರಾಂತಿ, ನಿದ್ರೆ ಜಾಗರ ಇತ್ಯಾದಿಗಳನ್ನೆಲ್ಲಾ ಪಾಪದ ಶಾಪಕ್ಕೊಳಗಾಗಿಯೂ ವಿಮೋಚನೆಯ ಕೋರಿಕೆಗೊಳಗಾಗಿಯೂ ಇಟ್ಟಿತು.

## ಉ.) ರಕ್ಷಕನ ಉದ್ಯೋಗ.

**೨೧೯.** ರಕ್ಷಕನ ಉದ್ಯೋಗವು ಯಾವದಂದರೆ: ಕೆಟ್ಟ ಶಾಪಗ್ರಸ್ತ ಮನುಷ್ಯರಾದ ನಮ್ಮನ್ನು ಸಮಸ್ತ ಪಾಪಗಳಿಂದಲೂ, ಮರಣದಿಂದಲೂ, ಪಿಶಾಚನ ಅಧಿಕಾರದಿಂದಲೂ ವಿಮೋಚಿಸುವದರಿಂದ, ನಾವು ರಕ್ಷಕನ ಸ್ವಂತರಾಗಿ, ಅವನ ರಾಜ್ಯದಲ್ಲಿ ಅವನ ಕೈಕೆಳಗೆ ಬದುಕಿ, ನಿತ್ಯ ನೀತಿಯಲ್ಲಿಯೂ, ನಿರ್ಮಲತ್ವದಲ್ಲಿಯೂ, ಆನಂದದಲ್ಲಿಯೂ ಅವನನ್ನು ಸೇವಿಸುವ ಹಾಗೆ ಮಾಡುವದೆ.

**೨೨೦.** ಹ್ಯಾಗೆ ಮೊದಲನೆ ಆದಮನಿಂದ ಪಾಪವೂ ಮರಣವೂ ಶಾಪವೂ ಸಮಸ್ತ ಮನುಷ್ಯರ ಮೇಲೆ ಬಂತೊ, ಹಾಗೆಯೆ ಎರಡನೆ ಆದಮನಾದ (ರೋಮಾ.

೫, ೧೪. ೧ ಕೊರಿ. ೧೫, ೪೫.) ರಕ್ಷಕನಿಂದ ನೀತಿಯೂ ಜೀವವೂ ನಿತ್ಯಾನಂದವೂ ಸಮಸ್ತ ಮನುಷ್ಯಸಂತತಿಗೆ ಬರ ಬೇಕು. (ರೋಮಾ. ೫, ೧೮. ೧೯.) (**೧೯೮.** ಪರಿಶಿ. ೨.)

**೨೨೧.** ಮೊದಲನೆ ಆದಮನಿಗೆ ಆದಿಯಲ್ಲಿ ಒಂದೆ ಉದ್ಯೋಗವಿತ್ತು. ಯಾವದಂದರೆ, ಸ್ಥಾಪಕಾರ್ಥವಾದದ್ದು, (ಸಮ ನೋಡು **೧೮೦—೧೮೫.**) ಆದರೆ ಎರಡನೆ ಆದಮನ ಉದ್ಯೋಗವು ಇಮ್ಮಡಿಯಾದದ್ದು. ಅಂದರೆ ನಕಾರಕಾರ್ಥವಾದದ್ದು, ಮತ್ತು ಸ್ಥಾಪಕಾರ್ಥವಾದದ್ದು. ಅವನು ಮೊದಲನೆ ಆದಮನಿಂದ ಲೋಕದಲ್ಲಿ ಬಂದ ಪಾಪವನ್ನೂ, ಎಲ್ಲಾ ಕೇಡನ್ನೂ ತೆಗದು ಹಾಕ ಬೇಕು; ಮತ್ತು ಅವನ ಅಪರಾಧದಿಂದ ಮಾಡದೆ ಬಿಟ್ಟ ಒಳ್ಳೇದನ್ನೆಲ್ಲಾ ಮುಂದಿಡ ಬೇಕು. ಮರಣಕ್ಕೂ ವಿನಾಶಕ್ಕೂ ಕೊಂಡು ಹೋದ ಸುಳ್ಳು ವಿಕಾಸಗತಿಯು ತೆಗದು ಹಾಕಲ್ಪಟ್ಟು, ಕದಲ ಕೂಡದ ಪರಿಶುದ್ಧತ್ವಕ್ಕೂ ಆನಂದಕ್ಕೂ ಕೊಂಡು ಹೋಗುವಂಥಾ ಉಳಿದು ಹೋದ ದೇವರು ಅಪೇಕ್ಷಿಸಿದ ವಿಕಾಸಗತಿಯು ತಿರಿಗಿ ಆರಂಭವಾಗಿ, ಕಡೇ ಸಂಪೂರ್ತಿಗೆ ಒಯ್ಯಲ್ಪಡ ಬೇಕು.

**೨೨೨.** ಆರಂಭವಾದ ಸುಳ್ಳು ವಿಕಾಸಗತಿಯನ್ನು ತೆಗದು ಹಾಕುವದಕ್ಕೆ, ರಕ್ಷಕನು ಯಥಾರ್ಥವಾಗಿಯೂ ನಿಜವಾಗಿಯೂ ನಮ್ಮ ಸ್ಥಾನದಲ್ಲಿ ಬಂದು, ನಾವು ಬಿಡುಗಡೆಯಾಗುವ ಹಾಗೆ, ಮರಣವನ್ನೂ ವಿನಾಶವನ್ನೂ ನಮಗೋಸ್ಕರ ತಾಳ ಬೇಕಾಯಿತು೧). ಉಳಿದು ಹೋದ ದೇವರು ಅಪೇಕ್ಷಿಸಿದ ವಿಕಾಸಗತಿಯನ್ನು ಮುಂದಿಡುವದಕ್ಕೆ, ಅವನು ತನ್ನ ಮಾನುಷಸ್ವಭಾವದಲ್ಲಿ ಬೆಳಸಿ ಮುಂದಿಟ್ಟು ಅದೇ ಸಂಪೂರ್ತಿಗೆ ನಮ್ಮನ್ನು ಸಹಾ ಕೊಂಡು ಹೋಗುವ ಹಾಗೆ, ನಮ್ಮನ್ನು ತನ್ನ ಜೀವದ ಅನ್ಯೋನ್ಯದಲ್ಲಿ ಅಂಗೀಕರಿಸ ಬೇಕಾಯಿತು೨). ಈ ಪ್ರಕಾರ ಕ್ರಿಸ್ತನು ನಕಾರಕಾರ್ಥಭಾವದ ಉದ್ಯೋಗವನ್ನು ಶ್ರಮದಿಂದಲೂ ಮರಣದಿಂದಲೂ, ಸ್ಥಾಪಕಾರ್ಥವಾದದ್ದನ್ನು ಜೀವದಿಂದಲೂ, ಉತ್ಥಾನದಿಂದಲೂ ದಿವಾರೋಹಣದಿಂದಲೂ ನಡಿಸ ಬೇಕಾಯಿತು.

೧) "ನಾವು ಅವನಲ್ಲಿ ದೇವರ ನೀತಿಯಾಗುವ ಹಾಗೆ, ಪಾಪವನ್ನರಿಯದವನನ್ನು ನಮಗೋಸ್ಕರ ಪಾಪವಾಗ ಮಾಡಿದನು." (೨ ಕೊರಿ. ೫, ೨೧.)

೨) "ಅಕ್ರಮಗಳಲ್ಲಿ ಸತ್ತವರಾಗಿದ್ದ ನಮ್ಮನ್ನು ಕ್ರಿಸ್ತನ ಸಂಗಡ ಬದುಕಿಸಿದ್ದಾನೆ. . . . ಮತ್ತು ಕ್ರಿಸ್ತ ಯೇಸುವಿನಲ್ಲಿ ನಮ್ಮನ್ನು ಕೂಡ ಎಬ್ಬಿಸಿ, ಪರಲೋಕದವುಗಳಲ್ಲಿ ಕೂಡ ಕುಂದ್ರಿಸಿದ್ದಾನೆ." (ಎಫೆ. ೨, ೫. ೬.)

## ಎ.) ರಕ್ಷಕನ ಮೂರ್ತಿ.

**೨೨೩.** ಈ ಉದ್ಯೋಗಕ್ಕೆ ಪೂರ್ಣ ಸಾಕಾಗಿರುವ ಹಾಗೆ, ರಕ್ಷಕನು ಯಥಾರ್ಥ ದೇವರೂ, ಅದೆ ಸಮಯದಲ್ಲಿ ಯಥಾರ್ಥ ಮನುಷ್ಯನೂ ಆಗಿರ ಬೇಕಾಯಿತು. ಆದಕಾರಣ

ಬಾಲಬೋಧನೆಯಲ್ಲಿ ಸಹಾ ನಮ್ಮ ರಕ್ಷಕನಾದ ಯೇಸು ಕ್ರಿಸ್ತನು "ತಂದೆಯಿಂದ ನಿತ್ಯತ್ವದಲ್ಲಿ ಹುಟ್ಟಿದ ನಿಜ ದೇವರೂ, ಕನ್ನಿಕೆಯಾದ ಮರೀಯಳಿಂದ ಹುಟ್ಟಿದ ನಿಜ ಮನುಷ್ಯನೂ ಆಗಿರುತ್ತಾನೆ" ಎಂದು ಹೇಳಿ ಅದೆ.

**೨೨೪.** ರಕ್ಷಕನು ನಿಜ ದೇವರು ಆಗಿರುವದು ಅವಶ್ಯ. ಒಂದು ಕಡೆಯಲ್ಲಿ ಆತನ ಪ್ರತಿಸ್ಥಾನೀಯ ಶ್ರಮ ಮರಣಗಳ ಪುಣ್ಯಕ್ಕೆ (ಆತನ ದೈವತ್ವವು ಅದರಲ್ಲಿ ಸಂಬಂಧಿಸಿರುವ ಕಾರಣ) ಅನಂತ ಮೌಲ್ಯವೂ ನಿತ್ಯ ಬಾಳ್ವೆಯೂ ಇರುತ್ತಿರಲಾಗಿ, ಸಮಸ್ತ ಮನುಷ್ಯ ಸಂತತಿಯ ಅನಂತ ಪಾಪದ ರುಣಕ್ಕೂ ನಿತ್ಯ ವಿನಾಶಕ್ಕೂ ಆ ಪುಣ್ಯವು ಅತಿ ಜಾರವಾಗ ತಕ್ಕದ್ದು[೧]. ಮತ್ತೊಂದು ಕಡೆಯಲ್ಲಿ ಆತನು ತನ್ನಲ್ಲಿ ವಾಸವಾಗಿರುವ ದೈವತ್ವದ ಪರಿಪೂರ್ತಿಯಿಂದ ಪಾಪವನ್ನೂ ಮರಣವನ್ನೂ ಸೈತಾನನನ್ನೂ ಪರಾಜಯ ಪಡಿಸಿ, ಎಲ್ಲಾದರ ಕಡೇ ನಿತ್ಯ ಸಂಪೂರ್ತಿಯನ್ನು ಬರ ಮಾಡುವದಕ್ಕೆ ಸಾಮರ್ಥ್ಯವುಳ್ಳವನಾಗ ತಕ್ಕದ್ದು. (ಸಮ ನೋಡು **೨೨೧. ೨೨೨.**)

೧) "ತನ್ನ ಸಹೋದರನನ್ನು ಮನುಷ್ಯನು ವಿಮೋಚಿಸೇ ವಿಮೋಚಿಸಲಾರನು; ಅವನ ಅಪರಾಧದ ಹಣವನ್ನು ದೇವರಿಗೆ ಕೊಡಲಾರನು. ಯಾಕಂದರೆ ಅವರ ಪ್ರಾಣವಿಮೋಚನೆಯ ಹಣವು ಅಮೂಲ್ಯವಾಗಿದೆ; ಯುಗಯುಗಕ್ಕೂ ಆಗದು." (ಕೀರ್ತ. ೪೯, ೮. ೯.) (ಯೆಶಾ. ೪೫, ೧೭.) ಅವನ "ಸ್ವಂತ ರಕ್ತದಿಂದಲೇ, ನಿತ್ಯ ವಿಮೋಚನೆಯನ್ನು ಸಂಪಾದಿಸಿ ಕೊಂಡು, ಒಂದೇ ಸಾರಿ ಪರಿಶುದ್ಧ ಸ್ಥಳದಲ್ಲಿ ಪ್ರವೇಶಿಸಿದನು." (ಇಬ್ರಿ. ೯, ೧೨.) "ನಿತ್ಯ ಆತ್ಮದಿಂದ ತನ್ನನ್ನು ದೇವರಿಗೆ ಕಳಂಕವಿಲ್ಲದವನಾಗಿ ಅರ್ಪಿಸಿದನು." (ಇಬ್ರಿ. ೯, ೧೪.)

ಪರಿಶಿ. ಬರೇ ಮನುಷ್ಯನಾದ ರಕ್ಷಕನ ಶ್ರಮಗಳು, ಅವನು ಎಷ್ಟು ಪರಿಶುದ್ಧನೂ ನಿರ್ಮಲನೂ ಆಗಿದ್ದರೂ, ಒಬ್ಬನೇ ಪಾಪಿಯ ಅಪರಾಧಕ್ಕೆ ಅತಿ ಭಾರವಾಗಲಿಕ್ಕೆ ಆದರೆ ಬಹಳವಾಯಿತು. ಆದರೆ ಇದು ಸಹಾ ಆಗದು. ಯಾಕಂದರೆ: ದುಡಿದ ಶಿಕ್ಷೆಯು ನಿತ್ಯವಾಗಿಯೂ, ತಾಳ್ದ ಶಿಕ್ಷೆಯು ತಾತ್ಕಾಲಿಕವಾಗಿಯೂ ಇರುವದಲ್ಲಾ!— ಕ್ರಿಸ್ತನು ಸಹಾ ತಾತ್ಕಾಲಿಕ ಮರಣವನ್ನೂ, ತಾತ್ಕಾಲಿಕ ಶಿಕ್ಷೆನಿರ್ಣಯವನ್ನೂ ತಾಳ್ದನೆಂಬುವದು ಸರಿ. ಆದರೂ ನಾವು ದುಡಿದ ನಿತ್ಯ ಮರಣಕ್ಕಿಂತಲೂ, ನಿತ್ಯ ಶಿಕ್ಷೆನಿರ್ಣಯಕ್ಕಿಂತಲೂ ಅದು ಸಮಮೌಲ್ಯವಾಗಿ ಮಾತ್ರವಲ್ಲ, ಅನಂತ ಮೌಲ್ಯವಾಗಿ ಇರುತ್ತದೆ. ಯಾಕಂದರೆ ಶ್ರಮ ಪಡುವ ಮಾನುಷ ಸ್ವಭಾವದೊಡನೆ ಮೂರ್ತಿವತ್ತಾಗಿ ಒಂದೇಯಾದ ದಿವ್ಯ ಸ್ವಭಾವವು ಸಹಾ ಒಡ ಶ್ರಮ ಪಟ್ಟಿತು, ಒಡ ತಾಳಿತು. ಈ ಪ್ರಕಾರ ಅವನ ಶ್ರಮಕ್ಕೆ ಅನಂತ ಮೌಲ್ಯವೂ ನಿತ್ಯ ಬಾಳ್ವೆಯೂ ಉಂಟಾಯಿತು.

**೨೨೫.** ಮನುಷ್ಯ ಯೇಸುವಿನಲ್ಲಿ ನಿತ್ಯವಾಕ್ಯದ ದೈವತ್ವದ ಅನಂತ ಪರಿಪೂರ್ತಿಯು ವಾಸವಾಗಿತ್ತೆಂಬದಕ್ಕೆ ಸಾಕ್ಷಿಗಳು: ೧. ಹಳೆ ಒಡಂಬಡಿಕೆಯ ಮೆಸ್ಸೀಯನ ವಿಷಯವಾದ ವಾಗ್ದತ್ತಗಳು (**೨೧೧.**) ಮತ್ತು ಸ್ನಾನಿಕನಾದ ಯೋಹಾನನ ಸಾಕ್ಷಿ[೧]; ೨. ಅವನು ತಾನೆ ಸ್ಪಷ್ಟವಾಗಿಯೂ, ಅಪ್ರತರ್ಕ್ಯವಾಗಿಯೂ, ತನ್ನ ಸ್ವಂತ ವಿಷಯದಲ್ಲಿ ಉಚ್ಚರಿಸಿದ ಮಾತುಗಳು. ಇವುಗಳಲ್ಲಿ ಅವನು ತನಗೆ ನಿತ್ಯತ್ವವನ್ನೂ, ಸರ್ವತ್ರಾಣವನ್ನೂ, ಸರ್ವತ್ರತ್ವವನ್ನೂ, ದಿವ್ಯ ಸ್ವಾಮಿತ್ವವನ್ನೂ, ತಂದೆಯ ಸಂಗಡ ಪೂರ್ಣ ಸ್ವಭಾವೈಕ್ಯತ್ವವನ್ನೂ ಆರೋಪಿಸಿ ಕೊಳ್ಳುತ್ತಾನೆ[೨]; ೩. ಪರಲೋಕದಿಂದಾದ ತಂದೆಯ ಸಾಕ್ಷಿ. ಹ್ಯಾಗಂದರೆ, ತಂದೆಯು ಸ್ನಾನದ ಸಮಯದಲ್ಲಿಯೂ (ಮತ್ತಾ. ೩, ೧೭.) ರೂಪಾಂತರದ ಸಮಯದಲ್ಲಿಯೂ (ಮತ್ತಾ. ೧೭, ೫.) ಅವನ ಪುತ್ರತ್ವಕ್ಕೆ ಸಾಕ್ಷಿ ಕೊಟ್ಟನು, ಅದ್ಭುತಗಳಿಂದಲೂ ಲಕ್ಷಣಗಳಿಂದಲೂ ಅವನ ದಿವ್ಯ ಪ್ರೇಷಿತತ್ವವನ್ನು ವಿಶ್ವಾಸಯೋಗ್ಯ ಮಾಡಿದನು, ಉತ್ಥಾನದಿಂದಲೂ ದಿವಾರೋಹಣದಿಂದಲೂ ಅವನ ಬೋಧನೆಗೂ ಕರಣಿಗೂ ಮುದ್ರೆ ಹಾಕಿದನು[೩]. ೪. ಆತನ ಅಪೊಸ್ತಲರ ಸಾಕ್ಷಿ. ಇವರು ಸ್ವಂತ ಅನುಭವದಿಂದಲೂ, ಅಂತರ್ಜ್ಞಾನದಿಂದಲೂ, ಹಾಗೆಯೆ ಪರಿಶುದ್ಧಾತ್ಮದ ಪ್ರಕಾಶೀಕರಣದಿಂದಲೂ ಅವನ ವಿಷಯದಲ್ಲಿ ಸಾಕ್ಷಿ ಕೊಟ್ಟರು[೪]. ಮತ್ತು ಕಡೆಯಲ್ಲಿ ೫. ಪರಿಶುದ್ಧಾತ್ಮದ ಸಾಕ್ಷಿ. ಇದು ಲೋಕವನ್ನು ಮಾರ್ಪಡಿಸುವ ಕರಣಿಗಳಲ್ಲಿಯೂ, ಸಮಸ್ತ ವರ್ಷಶತಗಳಲ್ಲಿರುವ ವಿಶ್ವಾಸಿಗಳ ಜೀವವುಳ್ಳ ಆನಂದಕರವಾದ ಅನುಭವದಲ್ಲಿಯೂ ಪ್ರತ್ಯಕ್ಷವಾಗುತ್ತದೆ[೫].

೧) "ಅವನು ನನ್ನ ಹಿಂದೆ ಬಂದು, ನನಗೆ ಮುಂದಿನವನಾಗಿದ್ಧಾನೆ; ಅವನ ಕೆರದ ಬಾರನ್ನು ಬಿಚ್ಚುವದಕ್ಕೆ ನಾನು ಯೋಗ್ಯನಲ್ಲ." (ಯೋಹಾ. ೧, ೨೭.) "ಇಗೋ, ಲೋಕದ ಪಾಪವನ್ನು ಹೊತ್ತು ಕೊಂಡು ಹೋಗುವ ದೇವರ ಕುರಿಮರಿಯು! ನನ್ನ ಹಿಂದೆ ಒಬ್ಬ ಮನುಷ್ಯನು ಬರುತ್ತಾನೆ; ಅವನು ನನಗೆ ಮುಂದಿನವನಾಗಿದ್ಧಾನೆ; ಯಾಕಂದರೆ ನನಗೆ ಮುಂಚೆ ಇದ್ದನು ಎಂದು, ನಾನು ಹೇಳಿದವನು ಇವನೇ." (ಯೋಹಾ. ೧, ೨೯. ೩೦.)

೨) "ಅಬ್ರಹಾಮನು ಇರುವದಕ್ಕಿಂತ ಮುಂಚೆ ನಾನು ಇದ್ಧೇನೆ." (ಯೋಹಾ. ೮, ೫೮.) "ತಂದೆಯೇ, ಲೋಕವಿರುವದಕ್ಕಿಂತ ಮುಂಚೆ ನಿನ್ನ ಬಳಿಯಲ್ಲಿ ನನಗಿದ್ದ ಮಹಿಮೆಯಿಂದ, ನಿನ್ನ ಬಳಿಯಲ್ಲಿ ನೀನು ನನ್ನನ್ನು ಮಹಿಮೆ ಪಡಿಸು." (ಯೋಹಾ. ೧೭, ೫.) "ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಸಮಸ್ತ ಅಧಿಕಾರವು ನನಗೆ ಕೊಡಲ್ಪಟ್ಟದೆ." (ಮತ್ತಾ. ೨೮, ೧೮.) "ಇಬ್ಬರಾದರೂ, ಮೂವರಾದರೂ, ನನ್ನ ಹೆಸರಿನಲ್ಲಿ ಎಲ್ಲಿ ಕೂಡಿ ಇದ್ಧಾರೋ, ಅಲ್ಲಿ ಅವರ ಮಧ್ಯದಲ್ಲಿ ಇದ್ಧೇನೆ." (ಮತ್ತಾ. ೧೮, ೨೦.) "ಇಗೋ, ನಾನು ಲೋಕಾಂತದವರಿಗೂ, ಎಲ್ಲಾ ದಿವಸಗಳಲ್ಲಿ, ನಿಮ್ಮ ಸಂಗಡ ಇದ್ಧೇನೆ." (ಮತ್ತಾ. ೨೮, ೨೦.) "ಎಲ್ಲರು ತಂದೆಯನ್ನು ಸನ್ಮಾನಿಸುವ ಪ್ರಕಾರವೇ ಮಗನನ್ನು ಸನ್ಮಾನಿಸುವ ಹಾಗೆ, ನ್ಯಾಯತೀರ್ವಿಕೆಯನ್ನೆಲ್ಲಾ ಮ

ಗನಿಗೆ ಕೊಟ್ಟಿದ್ದಾನೆ." (ಯೋಹಾ. ೫, ೨೨. ೨೩.) "ತಂದೆಯು ತನ್ನಲ್ಲಿ ಹ್ಯಾಗೆ ಜೀವ ಉಂಟಾದವನಾಗಿದ್ದಾನೋ, ಹಾಗೆಯೇ ಮಗನಿಗೆ ತನ್ನಲ್ಲಿ ಜೀವ ಉಂಟಾದವನಾಗಿರ ಕೊಟ್ಟಿದ್ದಾನೆ." (ಯೋಹಾ. ೫, ೨೬.) (**೧೫೧.**) "ಫಿಲಿಪ್ಪನೇ, ಇಷ್ಟು ಕಾಲ ನಿಮ್ಮ ಸಂಗಡ ಇದ್ದ ಮೇಲೆ ನೀನು ನನ್ನನ್ನು ತಿಳಿಯಲಿಲ್ಲವೋ? ನನ್ನನ್ನು ನೋಡಿದವನು ತಂದೆಯನ್ನು ನೋಡಿದ್ದಾನೆ. ಹಾಗಾದರೆ, ತಂದೆಯನ್ನು ನಮಗೆ ತೋರಿಸೆಂದು ನೀನು ಹೇಳುವದೇನು?" (ಯೋಹಾ. ೧೪, ೯.) (೧೨, ೪೫.) "ನಾನೂ ತಂದೆಯೂ ಒಂದೇ." (ಯೋಹಾ. ೧೦, ೨೯.) (ಅವನು ತಿರಿಗಿ ತಿರಿಗಿ ತಾನು ದೇವರ ಒಬ್ಬನೇ ಹುಟ್ಟಿದ ಮಗನೆಂದು ಹೇಳಿದನು. ಮತ್ತು ಪ್ರಧಾನಯಾಜಕನ ಮುಂದೆ ಪ್ರಮಾಣದಿಂದ ಅದನ್ನು ಸ್ಥಿರ ಪಡಿಸಿದನು. — ಮತ್ತಾ. ೨೬, ೬೩.) "ದೇವರು ಸ್ವಂತ ತಂದೆ ಎಂದು ಹೇಳಿ, ತನ್ನನ್ನು ದೇವರಿಗೆ ಸಮಾನ ಮಾಡಿದ ಕಾರಣ, ಯೆಹೂದ್ಯರು ಅವನನ್ನು ಕೊಲ್ಲ ಹೆಚ್ಚಾಗಿ ಹುಡುಕಿದರು." (ಯೋಹಾ. ೫, ೧೮.) (ಯೋಹಾ. ೧೦, ೩೧.)

೩) "ನಾನು ತಂದೆಯಲ್ಲಿ ಇದ್ದೇನೆ, ತಂದೆ ನನ್ನಲ್ಲಿ ಇದ್ದಾನೆ, ಎಂದು ನನ್ನನ್ನು ನಂಬಿರಿ; ಇಲ್ಲದಿದ್ದರೆ, ಕ್ರಿಯೆಗಳ ನಿಮಿತ್ತವೇ ನನ್ನನ್ನು ನಂಬಿರಿ." (ಯೋಹಾ. ೧೪, ೧೧.) "ಯೋಹಾನನ ಸಾಕ್ಷಿಗಿಂತ ದೊಡ್ಡ ಸಾಕ್ಷಿ ನನಗುಂಟು. ಹ್ಯಾಗಂದರೆ ತೀರಿಸುವದಕ್ಕೆ ತಂದೆಯು ನನಗೆ ಕೊಟ್ಟ ಕ್ರಿಯೆಗಳು — ನಾನು ನಡಿಸುವ ಕ್ರಿಯೆಗಳೇ, ತಂದೆಯು ನನ್ನನ್ನು ಕಳುಹಿಸಿದನೆಂಬುವದಕ್ಕೆ ನನ್ನನ್ನು ಕುರಿತು ಸಾಕ್ಷಿ ಕೊಡುತ್ತವೆ. ಮತ್ತು ನನ್ನನ್ನು ಕಳುಹಿಸಿದ ತಂದೆಯು ತಾನೇ ನನ್ನನ್ನು ಕುರಿತು ಸಾಕ್ಷಿ ಕೊಟ್ಟಿದ್ದಾನೆ." (ಯೋಹಾ. ೫, ೩೬. ೩೭.)

೪) "ಇದಲ್ಲದೆ ವಾಕ್ಯವು ಮಾಂಸವಾಯಿತು. ಕೃಪೆಯಿಂದಲೂ ಸತ್ಯದಿಂದಲೂ ತುಂಬಾಗಿ, ನಮ್ಮಲ್ಲಿ ವಾಸ ಮಾಡಿತು. ಮತ್ತು ತಂದೆಯಿಂದ ಒಬ್ಬನೇ ಹುಟ್ಟಿದವನ ಮಹಿಮೆಯ ಹಾಗೆ ಅವನ ಮಹಿಮೆಯನ್ನು ನೋಡಿದೆವು." (ಯೋಹಾ. ೧, ೧೪.) (೨ ಪೇತ್ರ. ೧, ೧೬. ೧೭. ೧ ಯೋಹಾ. ೧, ೧ — ೩.) "ಅವನು ಎಂದೆಂದಿಗೂ ಸ್ತುತಿಸ ತಕ್ಕ ಸರ್ವಕ್ಕೂ ಮೇಲಾದ ದೇವರೇ." (ರೋಮಾ. ೯, ೫.) "ಅವನಲ್ಲಿ ದೈವತ್ವದ ಸಮಸ್ತ ಸಂಪೂರ್ಣತೆಯು ಶರೀರವಾಗಿ ವಾಸ ಮಾಡುತ್ತದೆ." (ಕೊಲೊ. ೨, ೯.) "ದೇವರು ಕ್ರಿಸ್ತನಲ್ಲಿದ್ದು, ಲೋಕವನ್ನು ತನಗೆ ಅನ್ಯೋನ್ಯ ಮಾಡಿ" ಕೊಂಡನು. (೨ ಕೊರಿ. ೫, ೧೯.) "ಇವನೇ ಸತ್ಯ ದೇವರೂ, ನಿತ್ಯ ಜೀವವೂ, ಆಗಿದ್ದಾನೆ." (೧ ಯೋಹಾ. ೫, ೨೦.) ಇತ್ಯಾದಿ ವಾಕ್ಯಗಳು.

೫) "ಪರಿಶುದ್ಧತ್ವದ ಆತ್ಮದ ಪ್ರಕಾರ ದೇವರ ಮಗನೆಂದು ಸತ್ತವರ ಪುನರುತ್ಥಾನದಿಂದ ಬಲವಾಗಿ ನಿರ್ಣಯಿಸಲ್ಪಟ್ಟ ನಮ್ಮ ಕರ್ತನಾದ ಯೇಸು ಕ್ರಿಸ್ತನು." (ರೋಮಾ. ೧, ೧. ೨.)

**೨೨೬.** ರಕ್ಷಕನು ನಮ್ಮ ಸಂಗಡ ಮಾಂಸ ರಕ್ತಗಳ ಏಕತ್ವದಿಂದ ನಿಜವಾದ ಅನ್ಯೋನ್ಯದಲ್ಲಿ ಇದ್ದು, ನಮ್ಮ ರಾಯಭಾರಿಯಾಗಿಯೂ ಪ್ರತಿಸ್ಥಾನೀಯನಾಗಿಯೂ ನಮಗೋಸ್ಕರ ಶ್ರಮ ಮರಣಗಳನ್ನು ಅನುಭವಿಸಲಿಕ್ಕೂ[೧] ನಮ್ಮ ತಲೆಯಾಗಿಯೂ ನಾಯಕನಾ

ಗಿಯೂ (ಎಫೆ. ೧, ೨೩. ೪, ೧೦. ಇಬ್ರಿ. ೨, ೧೦.) ನಮ್ಮನ್ನು (ಅಂದರೆ ತನ್ನ ಶರೀರದ ಅಂಗಗಳನ್ನು) ತನ್ನ ಸಂಗಡ ಸಂಪೂರ್ಣತೆಗೆ ತಕ್ಕೊಂಡು ಹೋಗುವದಕ್ಕೂ (**೨೨೨.**) ಯೋಗ್ಯನಾಗುವ ಹಾಗೆ, ಆತನು ನಿಜಮನುಷ್ಯನು ಸಹಾ ಆಗಿರ ಬೇಕಾಯಿತು. ಮತ್ತು ಒಂದು ಕಡೆಯಲ್ಲಿ ಅವನು ನಮ್ಮ ಪಾಪಗಳನ್ನು ಪರಿಹರಿಸುವ ಹಾಗೆ ಸ್ವಂತ ಪಾಪವಿಲ್ಲದವನಾಗಿಯೂ[೨], ಮತ್ತೊಂದು ಕಡೆಯಲ್ಲಿ ಹೊಸ ವಿಕಾಸಗತಿಯನ್ನು, ಹಳತು ಎಲ್ಲಿಗೆ ತಪ್ಪಿ ಹೋಯಿತೊ ಅಲ್ಲಿಯೆ, ಆರಂಭಿಸುವ ಹಾಗೆ, ಪಾಪ ಮಾಂಸದ ಹೋಲಿಕೆಯಾಗಿಯೂ (ರೋಮಾ. ೮, ೩.) (ಅಂದರೆ ಎಲ್ಲಾ ಬಲಹೀನತ್ವ ಅಶಕ್ತಿ, ಪಾಪದ ಫಲವಾಗಿ ಉಂಟಾದ ಮನುಷ್ಯಸ್ವಭಾವದ ಎಲ್ಲಾ ರೋಗತ್ವದ ಸ್ಥಿತಿಯನ್ನು ಹೊರುವವನಾಗಿ) ಕಾಣಿಸಿ ಕೊಳ್ಳ ಬೇಕಾಯಿತು[೩].

೧) "ಮಕ್ಕಳು ರಕ್ತಮಾಂಸಗಳಲ್ಲಿ ಪಾಲುಗಾರರಾಗಿರುವದರಿಂದ, ಅವನು ಸಹಾ ಅದೇ ಮೇರೆಗೆ ಮರಣದಿಂದ ಮರಣದ ಅಧಿಕಾರವುಳ್ಳವನಾದ ಪಿಶಾಚನನ್ನು ಲಯ ಮಾಡಿ, ಬದುಕುವ ಕಾಲವೆಲ್ಲಾ ಮರಣಭಯದಿಂದ ದಾಸತ್ವಕ್ಕೊಳಗಾಗಿ ಇದ್ದವರನ್ನಷ್ಟು ಬಿಡಿಸುವ ಹಾಗೆ, ಅವುಗಳಲ್ಲಿ ಭಾಗಸ್ಥನಾದನು." (ಇಬ್ರಿ. ೨, ೧೪. ೧೫.)

೨) "ಇಂಥಾ ಪ್ರಧಾನಯಾಜಕನು ನಮಗೆ ತಕ್ಕವನು—ಪರಿಶುದ್ಧನೂ, ನಿರ್ದೋಷಿಯೂ, ನಿಷ್ಕಳಂಕನೂ, ಪಾಪಿಗಳಿಂದ ಪ್ರತ್ಯೇಕನೂ, ಆಕಾಶಗಳಿಗಿಂತ ಉನ್ನತನೂ ಆಗಿರುವವನೇ. ಪ್ರಧಾನಯಾಜಕರ ಹಾಗೆ ಮುಂಚೆ ಸ್ವಂತ ಪಾಪಗಳಿಗೋಸ್ಕರ, ತರುವಾಯ ಜನರ ಪಾಪಗಳಿಗೋಸ್ಕರ, ದಿನದಿನಕ್ಕೆ ಬಲಿಗಳನ್ನು ಅರ್ಪಿಸುವದು ಇವನಿಗೆ ಅಗತ್ಯವಿಲ್ಲ." (ಇಬ್ರಿ. ೭, ೨೬. ೨೭.)

೩) "ಆದದರಿಂದ, ಜನರ ಪಾಪಗಳಿಗೋಸ್ಕರ ಶಾಂತಿ ಮಾಡುವದಕ್ಕೆ ದೇವರ ಕಾರ್ಯಗಳಲ್ಲಿ ಕರುಣೆಯೂ, ನಂಬಿಕೆಯೂ ಉಳ್ಳ ಪ್ರಧಾನಯಾಜಕನಾಗಿರುವ ಹಾಗೆ, ಅವನು ಎಲ್ಲಾದರಲ್ಲಿ ಸಹೋದರರಿಗೆ ಸಮಾನ ಮಾಡಲ್ಪಡ ಬೇಕಾಗಿತ್ತು. ಯಾಕಂದರೆ ತಾನು ಶೋಧಿಸಲ್ಪಟ್ಟು, ಶ್ರಮೆ ಹೊಂದಿದ್ದರಲ್ಲಿ, ಶೋಧಿಸಲ್ಪಡುವವರಿಗೆ ಸಹಾಯ ಮಾಡ ಬಲ್ಲನು." (ಇಬ್ರಿ. ೨, ೧೭. ೧೮.) "ಯಾಕಂದರೆ ನಮ್ಮ ಬಲಹೀನತ್ವಗಳಲ್ಲಿ ಕೂಡ ಚಿಂತಿಸಲಾರದ ಪ್ರಧಾನಯಾಜಕನಲ್ಲ, ಪಾಪವೆ ಹೊರ್ತು, ಸಕಲ ವಿಷಯಗಳಲ್ಲಿ ನಮ್ಮ ಹಾಗೆಯೆ ಶೋಧಿಸಲ್ಪಟ್ಟವನು ನಮಗುಂಟು." (ಇಬ್ರಿ. ೪, ೧೫.)

**೨೨೭.** ಕ್ರಿಸ್ತನು ನಮ್ಮ ಹಾಗೆಯೆ ನಿಶ್ಚಯವಾಗಿ ನಿಜಮನುಷ್ಯನಾಗಿ ಇದ್ದನೆಂಬದಕ್ಕೆ ಪ್ರಮಾಣ ಬೇಡಾ. ಅವನು ಸ್ತ್ರೀಯಿಂದ ಚಿಕ್ಕ ಮಗುವಾಗಿ ಹುಟ್ಟಿದನು. ಬೇರೆ ಮನುಷ್ಯರ ಹಾಗೆಯೆ ಬೆಳದು ವೃದ್ಧಿಯಾದನು. ಹಸಿವೆಯನ್ನೂ ದಾಹವನ್ನೂ ವೇದನೆಯನ್ನೂ ರೋಗವನ್ನೂ ಮರಣವನ್ನೂ ಇತ್ಯಾದಿ ತಾಳ್ದನು[೧]. ಆದರೆ ಬಹಿರಂಗದಲ್ಲಿ ಮಿ

ಕ್ಕಾದ ಪಾಪಿ ಮನುಷ್ಯರಿಂದ ಭೇದವಾಗಿರದಿದ್ದರೂ, ಏನೂ ಪಾಪವಿಲ್ಲದವನಾಗಿ ಇದ್ದನೆಂಬದಕ್ಕೆ ಅವನು ತಾನೆ ಸಾಕ್ಷಿ ಕೊಡುತ್ತಾನೆ. ಮತ್ತು ಪರಿಶುದ್ಧವಾದ ಅವನ ಜೀವಸಂಚಾರವೆಲ್ಲಾ ಸಾಕ್ಷಿಯಾಗಿರುತ್ತದೆ[೨].

೧) "ದಾಸನ ರೂಪ ತಕ್ಕೊಂಡು, ಮನುಷ್ಯರ ಹೋಲಿಕೆಯಾದವನಾಗಿ, ತನ್ನನ್ನು ಬರಿದು ಮಾಡಿ ಕೊಂಡನು. ಮತ್ತು ಆಕಾರದಲ್ಲಿ ಮನುಷ್ಯನಾಗಿ ಕಾಣಲ್ಪಟ್ಟನು." (ಫಿಲಿ. ೨, ೭.)

೨) "ನಿಮ್ಮಲ್ಲಿ ಯಾವನು ನನ್ನಲ್ಲಿ ಪಾಪವನ್ನು ತೋರಿಸುತ್ತಾನೆ?" (ಯೋಹಾ. ೮, ೪೬.) "ಕ್ರಿಸ್ತನು ಸಹಾ ನಿಮಗೋಸ್ಕರ ಶ್ರಮೆ ಪಟ್ಟು, ನೀವು ಅವನ ಹೆಜ್ಜೆಗಳನ್ನು ಹಿಡಿಯುವ ಹಾಗೆ, ನಿಮಗೆ ಮಾದರಿಯನ್ನು ತೋರಿಸಿದ್ದಾನೆ. ಅವನು ಪಾಪ ಮಾಡಲಿಲ್ಲ; ಅವನ ಬಾಯಿಯಲ್ಲಿ ಮೋಸವು ಕಾಣಿಸಲಿಲ್ಲ." (೧ ಪೇತ್ರ. ೨, ೨೧. ೨೨.)

**೨೨೮.*** ಕ್ರಿಸ್ತನಲ್ಲಿ ಎರಡು ಸ್ವಭಾವಗಳು, ಅಂದರೆ ಮನುಷ್ಯಸ್ವಭಾವವೂ ದೇವಸ್ವಭಾವವೂ ಅತ್ಯಂತವಾಗಿಯೂ ನಿಜವಾಗಿಯೂ ಒಂದೇ ಮೂರ್ತಿಯಾಗಿ ಕೂಡಿಕೊಂಡಿದ್ದು, ಅಭಿನ್ನವಾಗಿಯೂ ಅಭೇದ್ಯವಾಗಿಯೂ ಇರುತ್ತದೆ. ಈ ಎರಡು ಸ್ವಭಾವಗಳು ಒಂದೇ ಮೂರ್ತಿಯಾಗಿ ಕೂಡಿರುವದರಿಂದಲೂ, ಎರಡರಲ್ಲಿಯೂ ಒಂದೆ ನಾನೆಂಬದು ವಾಸವಾಗಿರುವದರಿಂದಲೂ, ಅತ್ಯಂತವಾದ ಜೀವಂತ ಅನ್ಯೋನ್ಯತ್ವವೂ ಪರಸ್ಪರತ್ವವೂ ಉಂಟಾಗಿರುತ್ತದೆ. ಒಂದೊಂದು ಸ್ವಭಾವವು ಮೂರ್ತಿಯ ಏಕತ್ವದಿಂದ ಬೇರೊಂದರ ಸಮಸ್ತ ಗುಣಸ್ಥಿತಿಗಳಲ್ಲಿ ಅಂಶಿಯಾಗುತ್ತದೆ.

---

* ಅಥನಾಸ್ಯ ವಿಶ್ವಾಸ ಪ್ರಮಾಣದಿಂದ......"ಆದರೆ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮನುಷ್ಯಾವತಾರವನ್ನು ಯಥಾರ್ಥವಾಗಿ ನಂಬುವದು ನಿತ್ಯ ರಕ್ಷಣೆಗೆ ಅವಶ್ಯವಾಗಿದೆ. ಆದಕಾರಣ ದೇವರ ಮಗನಾಗಿರುವ ನಮ್ಮ ಕರ್ತನಾದ ಯೇಸು ಕ್ರಿಸ್ತನು ದೇವರೂ ಮನುಷ್ಯನೂ ಆಗಿದ್ದಾನೆಂದು ನಂಬಿ ಅರಿಕೆ ಮಾಡುವದೆ ಸಮವಾದ ವಿಶ್ವಾಸ. ತಂದೆಯ ಸ್ವಭಾವದೊಳಗಿಂದ ಯುಗಗಳ ಮುಂಚೆ ಹುಟ್ಟಿದವನಾಗಿ ದೇವರು; ತಾಯಿಯ ಸ್ವಭಾವದೊಳಗಿಂದ ಯುಗದಲ್ಲಿ ಹುಟ್ಟಿದವನಾಗಿ ಮನುಷ್ಯನು.—ಸಂಪೂರ್ಣ ದೇವರು, ಅಹಂಭಾವವುಳ್ಳ ಪ್ರಾಣವೂ ಮನುಷ್ಯ ಶರೀರವೂ ಉಂಟಾದವನಾಗಿ ಸಂಪೂರ್ಣ ಮನುಷ್ಯನು. ದೈವತ್ವದ ಪ್ರಕಾರ ತಂದೆಗೆ ಸಮಾನ; ಮನುಷ್ಯತ್ವದ ಪ್ರಕಾರ ತಂದೆಗಿಂತ ಕಡಿಮೆ. ಈತನು ದೇವರೂ ಮನುಷ್ಯನೂ ಆಗಿದ್ದರೂ ಇಬ್ಬರಾಗಿರುವದಿಲ್ಲಾ, ಒಬ್ಬನೇ ಕ್ರಿಸ್ತನಾಗಿದ್ದಾನೆ. ಆದರೆ ಒಬ್ಬನಂದರೆ ದೈವತ್ವವು ಮಾಂಸದೊಳಗೆ ಮಾರ್ಪಡುವದರಿಂದಲ್ಲಾ, ಮನುಷ್ಯತ್ವವು ದೇವರಲ್ಲಿ ಸ್ವೀಕಾರವಾಗುವದರಿಂದಲೆ ಪೂರ್ಣ ಒಬ್ಬನೆ ಆಗಿದ್ದಾನೆ. ಸ್ವಭಾವದ ಬೆರಿಕೆಯಿಂದಲ್ಲ, ಮೂರ್ತಿಯ ಏಕತ್ವದಿಂದಲೆ ಒಬ್ಬನಾಗಿದ್ದಾನೆ. ಹ್ಯಾಗೆ ಅಹಂಭಾವವುಳ್ಳ ಪ್ರಾಣವೂ ಮಾಂಸವೂ ಒಬ್ಬನೆ ಒಬ್ಬ ಮನುಷ್ಯನೊ, ಹಾಗೆಯೆ ದೇವರೂ ಮನುಷ್ಯನೂ ಒಬ್ಬನೆ ಒಬ್ಬ ಕ್ರಿಸ್ತನು.

ಪರಿಶಿ. (ಮೊನೊಫುಸೀತರು ಅಂದರೆ ಏಕಸ್ವಭಾವವಾದಿಗಳು ಬೋಧಿಸಿದ ಪ್ರಕಾರ) ಎರಡು ಸ್ವಭಾವಗಳು ಮಿಶ್ರವಾದ್ದಾದರೆ, ಅದರಿಂದ ಮತ್ತೊಂದು ಮೂರನೆ ಸ್ವಭಾವ ಉಂಟಾದೀತು. ಇದು ನಿಜ ದೈವಿಕವಾಗಲಿ ನಿಜ ಮಾನುಷವಾಗಲಿ ಆಗಿರದು. (**೨೨೪. ೨೨೬.**) ಆದರೆ (ನೆಸ್ತೊರ್ಯರು ಬೋಧಿಸಿದ ಪ್ರಕಾರ) ಬಹಿರಂಗದ ಸಂಬಂಧ ಮಾತ್ರವೇ ಹೊರ್ತು ಜೀವಂತ ಅನ್ಯೋನ್ಯವೂ ಪರಸ್ಪರತ್ವವೂ ಇಲ್ಲದೆ ಇದ್ದದ್ದಾದರೆ, ಹಾಗೆಯೆ ಆದೀತು. ಈ ಪ್ರಕಾರ ಮನುಷ್ಯಸ್ವಭಾವವು ತನ್ನಷ್ಟಕ್ಕೆ ಶ್ರಮಪಡಲಾಗಿ, ಅದರ ಶ್ರಮಗಳಿಗೆ ತಾತ್ಕಾಲಿಕ ಮಾನುಷ ಮೌಲ್ಯವು ಇರುವ ಕಾರಣ, **೨೨೪.** ಪರಿಶಿಷ್ಟದ ಪ್ರಕಾರ ವಿಮೋಚನೆಗೆ ಸಾಕಾಗಿರ ಕೂಡದು.

**೨೨೯.** ಎರಡು ಸ್ವಭಾವಗಳು ದೈವಮಾನುಷ ಮೂರ್ತಿಯಾಗಿ ಒಟ್ಟಾಗುವ ಐಕ್ಯವು ನಿಜವಾಗಿರುವ ಕಾರಣ, ನಿತ್ಯ ಉಳಿದು, ಎಂದಿಗೂ ಬೇರೆ ಬೇರೆಯಾಗದು. ಈ ಸಂಬಂಧವು ತೀರಿ ಹೋಗುವದಾದರೆ, ಅದರಿಂದ ನಮಗೆ ದೇವರ ಸಂಗಡ ಪುನಃಸ್ಥಾಪನೆಯಾದ ಅನ್ಯೋನ್ಯ ಸಹಾ ತತ್‌ಕ್ಷಣದಲ್ಲಿ ಹೋದೀತು. ಮತ್ತು ಕ್ರಿಸ್ತನು ನಮಗೋಸ್ಕರ ಮಾಡಿದ್ದು ತಾಳಿದ್ದು ಎಲ್ಲಾ ನಿಷ್ಫಲವಾಗಿಯೂ ನಿರರ್ಥಕವಾಗಿಯೂ ಹೋದೀತು.

ಪರಿಶಿ. ದೇವರ ಸಂಗಡ ಮನುಷ್ಯನ ಅನ್ಯೋನ್ಯವು, ಕ್ರಿಸ್ತನು ಮೊದಲಾಗಿ ತನ್ನ ಮೂರ್ತಿಯಲ್ಲಿ ಈ ಅನ್ಯೋನ್ಯವನ್ನು ಮುಂದಿಟ್ಟ ಮೇಲೆ, ನಮ್ಮನ್ನು ಸಹಾ ಅದರಲ್ಲಿ ಅಂಗೀಕರಿಸುವದರಿಂದ ಉಂಟಾಗುತ್ತದೆ. ವಿಮೋಚಕನ ದೈವ ಮಾನುಷತ್ವವು ನಮಗೂ ದೇವರಿಗೂ ಮಧ್ಯಬಂಧವಾಗಿರುತ್ತದೆ. ಈಗ ಕ್ರಿಸ್ತನಲ್ಲಿ ಇರುವ ದೈವಿಕ ಮತ್ತು ಮಾನುಷ ಸ್ವಭಾವವು ಬೇರೆ ಬೇರೆ ಆಗುವದಾದರೆ, ಅದರಿಂದಲೆ ದೈವತ್ವವೂ ಮನುಷ್ಯತ್ವವೂ ತಿರಿಗಿ ಬೇರೆ ಬೇರೆಯಾದೀತು. ಕ್ರಿಸ್ತನು ನಮ್ಮಿಂದ ತಕ್ಕೊಂಡು, ನಮ್ಮ ತಲೆಯಾಗಿಯೂ ಪ್ರತಿಸ್ಥಾನೀಯನಾಗಿಯೂ ತನ್ನ ಮೇಲೆ ಇಟ್ಟು ಕೊಂಡ ನಮ್ಮ ಸಾಲ ನಮ್ಮ ದುರಾವಸ್ಥೆಗಳ ಪೂರ್ಣ ಅನಂತವಾದ ಭಾರವೆಲ್ಲಾ ತಿರಿಗಿ ನಮ್ಮ ಮೇಲೆ ಬಿದ್ದು, ಸಾಯುವ ಹಾಗೆ ನಮ್ಮನ್ನು ಜಜ್ಜಿ ಬಿಟ್ಟೀತು. (ಸಮ ನೋಡು **೨೨೫.**)

## ಒ.) ಕ್ರಿಸ್ತನ ಮುಮ್ಮಡಿ ಉದ್ಯೋಗ.

**೨೩೦.** ವಿಮೋಚನೆಯ ಪೂರ್ವ ಸಂಧಾನಗಳು ಹಳೆ ಒಡಂಬಡಿಕೆಯಲ್ಲಿ ದೇವಾಧಿಕಾರದ ಮೂರು ಉದ್ಯೋಗಗಳ (**೨೧೬.**) ಆಡಳಿತೆಯ ಕೆಳಗೆ ಹ್ಯಾಗೆ ಇದ್ದವೊ, ಹಾಗೆ ವಿಮೋಚನೆಯ ಪರಿಪೂರ್ತಿ ಸಹಾ ಅದೆ ಮೂರು ಉದ್ಯೋಗಗಳ ಕೆಳಗೆ ಇಟ್ಟಿರ ಬೇಕು. ಹಳೆ ಒಡಂಬಡಿಕೆಯ ಪ್ರವಾದಿಗಳೂ ಯಾಜಕರೂ ಅರಸರೂ ಮಾನುಷ ಬಲಹೀನತ್ವದಲ್ಲಿಯೂ ಅಪೂರ್ಣತೆಯಲ್ಲಿಯೂ ಮುಂಗುರ್ತಾಗಿ ತೋರಿಸಿ ಯಾವದಕ್ಕೆ

ಸಿದ್ಧ ಮಾಡಿದರೊ, ಅದನ್ನು ಮೆಶ್ಶೀಯನು ಸಂಪೂರ್ಣ ಪರಿಪೂರ್ತಿಯಲ್ಲಿ ಮುಂದಿಡ ಬೇಕಾಯಿತು. ಆದಕಾರಣ ಈತನು ಆ ಮೂರು ಉದ್ಯೋಗಗಳನ್ನು ತನ್ನ ಮೇಲೆ ತಕ್ಕೊಂಡು, ಎಲ್ಲಾ ಸಂಪೂರ್ತಿಯಾಗುವ ಪರ್ಯಂತ ನಡಿಸ ಬೇಕಾಯಿತು.

ಪರಿಶಿ. ಹಳೆ ಒಡಂಬಡಿಕೆಯ ಪ್ರವಾದಿಗಳ ಕೆಲಸವು ಏನಾಗಿತ್ತಂದರೆ, ದೇವರ ಹೆಸರಿನಲ್ಲಿಯೂ ಅಪ್ಪಣೆಯಿಂದಲೂ ಜನಾಂಗವನ್ನು ಬೋಧಿಸುವದು (ಎಚ್ಚರಿಸುವದೂ, ಬೆದರಿಸುವದೂ, ಶಿಕ್ಷಿಸುವದೂ, ಆದರಿಸುವದೂ,) ಆಗಿತ್ತು. ಆದರೆ ಯಾಜಕನ ಕೆಲಸವು ಜನಾಂಗದ ವಿಮೋಚನೆ ಆಗಿತ್ತು. ಈತನು ದೇವರಿಗೂ ಮನುಷ್ಯನಿಗೂ ಮಧ್ಯಸ್ಥನಾಗಿದ್ದನು; ಮನುಷ್ಯನ ಪ್ರತಿಸ್ಥಾನೀಯನಾಗಿ ದೇವರಿಗೆ ಬಲಿಯನ್ನೂ ಪ್ರಾರ್ಥನೆಯನ್ನೂ (ಧೂಪಾರ್ಪಣ) ತಂದನು; ಮತ್ತು ದೇವರ ಪ್ರತಿಸ್ಥಾನೀಯನಾಗಿ ದೇವರಿಂದ ಕೃಪೆಯನ್ನೂ ಕ್ಷಮೆಯನ್ನೂ ಆಶೀರ್ವಾದವನ್ನೂ ತಂದನು. (**೧೫೮**, ೧.) ಅರಸನು ದೇವರ ಜನಾಂಗವನ್ನು ಆಳಿ ಕಾಪಾಡ ಬೇಕು, ಆದರೆ ದೇವರ ರಾಜ್ಯದ ಶತ್ರುಗಳನ್ನು ಜಯಿಸಿ ಶಿಕ್ಷಿಸ ಬೇಕು.

**೨೩೧.** ರಕ್ಷಕನ ಪ್ರವಾದ್ಯುದ್ಯೋಗದಲ್ಲಿ ಅವನ ಬೋಧಕ ಪ್ರಯತ್ನ ಬಂತು. ಇದರಿಂದ ದೇವರ ಪೂರ್ಣ ಸಂಕಲ್ಪವನ್ನೂ ಕೃಪೆಯುಳ್ಳ ಚಿತ್ತವನ್ನೂ ನಮ್ಮ ರಕ್ಷಣೆಯ ಸಂಕಲ್ಪವನ್ನೂ ಸಂಪೂರ್ಣವಾಗಿ ವಿವರಿಸಿ ಸಾರಿದನು. (ಅಂದರೆ ನೋಟದಲ್ಲಿ ಅಲ್ಲ ವಿಶ್ವಾಸದಲ್ಲಿ ಮಾತ್ರವೆ ನಡಕೊಳ್ಳುವ ಇಹದಲ್ಲಿ ನಾವು ಗ್ರಹಿಸಲಾಗುವಷ್ಟಕ್ಕೆ)[೧] ಹಳೆ ಒಡಂಬಡಿಕೆಯ ನಿಯಮವೂ ಪ್ರವಾದಿಗಳೂ, ದೇವರ ಈ ರಕ್ಷಣಾಯೋಜನೆಯನ್ನು ಸಿದ್ಧ ಮಾಡುವವರಾಗಿ ಮಾತ್ರವೆ ಇದ್ದ ಕಾರಣ, ಅಪೂರ್ಣವಾಗಿಯೆ ಬೋಧಿಸ ಶಕ್ತರಾದ್ದರಿಂದ, ರಕ್ಷಕನು ಈ ವಿಷಯದಲ್ಲಿ ಸಹಾ ನಿಯಮವನ್ನೂ ಪ್ರವಾದನೆಯನ್ನೂ ಈಡೇರಿಸಿದನು[೨]. ಮತ್ತು ವಾಕ್ಯಗಳಿಂದ ತಾನೇನು ಕಲಿಸಿದನೊ, ಅದನ್ನೇ ಕ್ರೈಸ್ತ ನಡತೆಗೆ ಅತಿ ಶ್ರೇಷ್ಠವಾದ ಮಾದರಿಯಾಗಿರ ತಕ್ಕ ಜೀವದಿಂದ ಪ್ರತ್ಯಕ್ಷ ಮಾಡಿ, ಮನಸ್ಸಿನಲ್ಲಿ ಹೊಗ ಯೋಗ್ಯವಾಗಿ ಇಟ್ಟಿದ್ದಾನೆ[೩].

೧) "ಕರ್ತನ ಆತ್ಮವು ನನ್ನ ಮೇಲಅದೆ; ಯಾಕಂದರೆ ಬಡವರಿಗೆ ಸುವಾರ್ತೆ ಪ್ರಸಂಗಿಸುವದಕ್ಕೆ ನನ್ನನ್ನು ಅಭಿಷೇಕಿಸಿದ್ದಾನೆ. ನಲಗಿದ ಹೃದಯವುಳ್ಳವರನ್ನು ಗುಣ ಮಾಡುವದಕ್ಕೂ, ಸೆರೆಯವರಿಗೆ ಬಿಡುಗಡೆಯನ್ನು, ಕುರುಡರಿಗೆ ದೃಷ್ಟಿಯನ್ನು ಸಾರುವದಕ್ಕೂ, ಜಜ್ಜಲ್ಪಟ್ಟವರನ್ನು ಬಿಡುಗಡೆಯಾಗಿ ಕಳುಹಿಸುವದಕ್ಕೂ, ಕರ್ತನ ಹಿತವಾದ ಸಂವತ್ಸರವನ್ನು ಸಾರುವದಕ್ಕೂ, ನನ್ನನ್ನು ಕಳುಹಿಸಿದ್ದಾನೆ." (ಲೂಕ. ೪, ೧೮. ೧೯.)

೨) "ನ್ಯಾಯಪ್ರಮಾಣವನ್ನಾದರೂ, ಪ್ರವಾದಿಗಳನ್ನಾದರೂ, ತೆಗೆದು ಹಾಕುವದಕ್ಕೆ ಬಂದೆನೆಂದು ನೆನಸ ಬೇಡಿರಿ; ತೆಗೆದು ಹಾಕುವದಕ್ಕಲ್ಲ, ಈಡೇರಿಸುವದಕ್ಕೆ ಬಂದೆನು. ನಿಶ್ಚ

ಯವಾಗಿ ನಿಮಗೆ ಹೇಳುತ್ತೇನೆ, ಆಕಾಶವೂ ಭೂಮಿಯೂ ಗತಿಸಿ ಹೋಗುವ ಪರ್ಯಂತರ, ನ್ಯಾಯಪ್ರಮಾಣದಲ್ಲಿಂದ ಒಂದು ಸೊನ್ನೆಯಾದರೂ ಒಂದು ಗುಡುಸಾದರೂ ಎಲ್ಲಾ ಆಗುವ ಮಟ್ಟಿಗೂ, ಗತಿಸಿ ಹೋಗದು." (ಮತ್ತಾ. ೫,೧೭. ೧೮.)

೩) "ಕ್ರಿಸ್ತನು ಸಹಾ ನಿಮಗೋಸ್ಕರ ಶ್ರಮೆ ಪಟ್ಟು, ನೀವು ಅವನ ಹೆಜ್ಜೆಗಳನ್ನು ಹಿಡಿಯುವ ಹಾಗೆ, ನಿಮಗೆ ಮಾದರಿಯನ್ನು ತೋರಿಸಿದ್ದಾನೆ." (೧ ಪೇತ್ರ. ೨, ೨೧.)

ಪರಿಶಿ. ಆದರೆ ಕ್ರಿಸ್ತನ ಬೋಧನೆಯ ಕರಣಿಗೆ ತನ್ನ ಭೂಸಂಚಾರದ ಸಮಯದಲ್ಲಿ ಅವನು ತಾನೆ ಬೋಧಿಸಿದ್ದು ಮಾತ್ರವಲ್ಲಾ, ಅವನು ತನ್ನ ಅಪೊಸ್ತಲರ ಪರಿಮುಖವಾಗಿ ಸಾರಿಸಿದ್ದೆಲ್ಲಾ ಸಹಾ ಸೇರಿತು. (ಯೋಹಾ. ೧೬, ೧೨. ೧೩. ೧೪, ೨೬. ಲೂಕ. ೧೦, ೧೬. ೨ ಕೊರಿ. ೫, ೨೦.) ಅದೆ ಪ್ರಕಾರ ತನ್ನ ವಾಕ್ಯದಿಂದಲೂ ಆತ್ಮದಿಂದಲೂ ಕ್ರೈಸ್ತ ಜನಕ್ಕೆ ಬರ ಮಾಡುತ್ತಾ ಬಂದ ಪ್ರಕಾಶೀಕರಣವೆಲ್ಲಾ ಅದರೊಳಗೆ ಬಂತು. (**೨೭೦.**) ಆದಕಾರಣ ಅವನ ಪ್ರವಾದಿತನದ ಕರಣಿಯು ದಿವಾರೋಹಣವಾದಾಗ ತೀರಿತೆಂದು ನೆನಸುವದು ಸರ್ವಥಾ ಆಗದು. ಅದು, ಯಾರೊಬ್ಬನಾದರೂ ಬೋಧನೆಯ ಅವಶ್ಯತ್ವದಲ್ಲಿರುವ ಪರ್ಯಂತಕ್ಕೂ ಅಥವಾ ಅದಕ್ಕೆ ಯೋಗ್ಯರಾಗಿರುವ ಪರ್ಯಂತಕ್ಕೂ, ಬಾಳುತ್ತದೆ. (ಸಮ ನೋಡು **೨೫೨.**)

**೨೩೨.** ಕ್ರಿಸ್ತನ ಪ್ರಧಾನಯಾಜಕೋದ್ಯೋಗವು ವಿಮೋಚನೆಯ ಕರಣಿಯನ್ನು ರಿಸುತ್ತದೆ. (ಇಬ್ರಿ. ೨, ೧೭. ೪, ೧೪. ೧೫. ೧೦, ೨೧.) ದೇವರಿಗೂ ನಮಗೂ ಮಧ್ಯಸ್ಥನಾಗಿದ್ದು ನಮ್ಮನ್ನು ದೇವರಿಂದ ಬೇರೆ ಮಾಡುವದನ್ನು ತೆಗದು ಬಿಟ್ಟನು[೧]. ನಮ್ಮ ಸಾಲವನ್ನು ತಾನೆ ತೆತ್ತು, ನಾವು ದುಡಿದ ಶಿಕ್ಷೆಯನ್ನು ತಾನೆ ಹೊತ್ತನು. ಹಳೆ ಒಡಂಬಡಿಕೆಯ ಪ್ರಧಾನಯಾಜಕನು ಒಂದು ಸಾರಿ ವರ್ಷಂಪ್ರತಿ (ಇಬ್ರಿ. ೯, ೧೧. ೧೨.) ದೊಡ್ಡ ವಿಮೋಚನಾದಿವಸದಲ್ಲಿ ಏನು ನಡಿಸಿದನೊ, ಮತ್ತು ತಾನೆ ಬಲಹೀನ ಪಾಪಿಮನುಷ್ಯನಾಗಿರುವ ಕಾರಣ (ಇಬ್ರಿ. ೫, ೧ – ೩. ೭, ೨೭. ೨೮.) ಸಾಕಾಗದ ರೀತಿಯಾಗಿ ನೆರಳಾಗಿಯೂ ಮುಂಗುರ್ತಾಗಿಯೂ (ತನ್ನಷ್ಟಕ್ಕೆ ಸಾಕಾಗದ) ಯಾವ ಬಲಿಯನ್ನು (ಇಬ್ರಿ. ೧೦, ೪.) ಸಮಸ್ತ ಜನಾಂಗದ ಪಾಪಗಳಿಗೋಸ್ಕರ ತಂದನೊ, ಅದನ್ನು ಕ್ರಿಸ್ತನು ಕಾಲದ ಪರಿಪೂರ್ತಿಯಲ್ಲಿ ಸಂಪೂರ್ಣರೀತಿಯಾಗಿ ಮಾಡಿದನು. (ಇಬ್ರಿ. ೯, ೧೧. ೧೨.) ಹ್ಯಾಗಂದರೆ ಈತನು ತನ್ನನ್ನೆ ನಿತ್ಯ ಬಾಳುವ ಬಲಿಯಾಗಿ ಸಮಸ್ತ ಲೋಕದ ಪಾಪಗಳಿಗೋಸ್ಕರ (೧ ಯೋಹಾ. ೨, ೧. ೨.) (**೨೩೪.**) ಒಂದೇ ಸಾರಿ ಅರ್ಪಿಸಿ ಬಿಟ್ಟನು.

೧) "ನಮಗೆ ವಿರೋಧವಾಗಿದ್ದಂಥಾ, ನಮಗೆ ಎದುರಾದಂಥಾ ಆಜ್ಞೆಗಳ ಕೈಬರಹವನ್ನು ಅಳಿಸಿ, ಅದನ್ನು ಮಧ್ಯದಿಂದ ತೆಗೆದು ಹಾಕಿ, ಅದನ್ನು ಶಿಲುಬೆಗೆ ಹಾಕಿ, ಜಡಿದನು."

(ಕೊಲೊ. ೨,೧೪.) "ನಾವು ಪಾಪಗಳಿಗೆ ಸತ್ತು, ನೀತಿಗೆ ಬದುಕುವ ಹಾಗೆ, ಅವನು ತಾನೇ ನಮ್ಮ ಪಾಪಗಳನ್ನು ತನ್ನ ಶರೀರದಲ್ಲಿ ಮರದ ಮೇಲೆ ಹೊತ್ತು ಕೊಂಡನು. ಅವನ ಪೆಟ್ಟುಗಳಿಂದ ವಾಸಿಯಾದಿರಿ." (೧ ಪೇತ್ರ. ೨, ೨೪.)

**೨೩೨.** ಕ್ರಿಸ್ತನ ವಿಮೋಚನಾಕಾರ್ಯವು ಪ್ರತಿಸ್ಥಾನೀಯವಾದ ತೃಪ್ತಿಕರಣವೆಂದು ಹೇಳುತ್ತಾರೆ. ಯಾಕಂದರೆ ದಿವ್ಯ ನಿಯಮದ ವಿಧಿಗಳನ್ನು ಅವನು ಅದರಿಂದ ನಮ್ಮ ಸ್ಥಾನದಲ್ಲಿ ತೃಪ್ತಿ ಪಡಿಸಿದನು. ನಿಯಮದ ವಿಧಿಯು ಪಾಪಿಯ ಕಡೆಗೆ ಇಮ್ಮಡಿಯಾಗಿರುತ್ತದೆ. ಆದಕಾರಣ ತೃಪ್ತಿಕರಣ ಸಹಾ ಇಮ್ಮಡಿಯಾಗ ಬೇಕಾಯಿತು. ಅವನು ತನಗಲ್ಲ, ನಮಗೆ ಕೊಟ್ಟಿರುವ ನಿಯಮಕ್ಕೆ ತನ್ನ ಪರಿಶುದ್ಧ ಜೀವದಲ್ಲಿಯೂ ನಡತೆಯಲ್ಲಿಯೂ ಸಂಪೂರ್ಣ ವಿಧೇಯತ್ವವನ್ನು ತೋರಿಸಿ, ನಾವು ಮಾಡ ಬೇಕಾಗಿದ್ದರೂ ನಮ್ಮ ನ್ಯಾಯಸ್ಥಿತಿಯ ಅಶಕ್ತಿಯ ದೆಶೆಯಿಂದಲೂ ಪಾಪತ್ವದ ದೆಶೆಯಿಂದಲೂ ಮಾಡಲಾರದೆ ಇದ್ದದ್ದನ್ನು ಅವನು ತಾನೆ ನಮಗೋಸ್ಕರ ಮಾಡಿದನು[೧]. ತನ್ನ ಮರಣದಲ್ಲಿ ಅವನು ಪಾಪರಹಿತನಾದವನು, ನಿಯಮವು ಅತಿಕ್ರಮಿಯ ಮೇಲೆ ಇಡುವ ಶಾಪವನ್ನು ತನ್ನ ಮೇಲೆ ತಕ್ಕೊಂಡು, ನಾವು ನಮ್ಮ ಪಾಪಕ್ಕೋಸ್ಕರ ತಾಳ ಬೇಕಾಗಿಯೂ, ನಿತ್ಯ ವಿನಾಶದಿಂದ ಮಾತ್ರವೆ ತೆರಲಾಗುವದಾಗಿಯೂ ಇದ್ದ ಶಿಕ್ಷೆಯನ್ನು ತಾನೆ ತಾಳ್ದನು[೨]. (ಸಮ ನೋಡು **೧೩೫.**)

೧) "ಕಾಲದ ಸಂಪೂರ್ಣತೆಯು ಬಂದಾಗ, ನಾವು ಪುತ್ರಸ್ವೀಕಾರ ಹೊಂದುವ ಹಾಗೆ, ನ್ಯಾಯಪ್ರಮಾಣಕ್ಕೊಳಗಾದವರನ್ನು ಕೊಂಡು ಕೊಳ್ಳುವದಕ್ಕೆ, ದೇವರು ತನ್ನ ಮಗನನ್ನು ಸ್ತ್ರೀಯಿಂದ ಹುಟ್ಟಿದವನಾಗಿಯೂ, ನ್ಯಾಯಪ್ರಮಾಣಕ್ಕೊಳಗಾದವನಾಗಿಯೂ, ಕಳುಹಿಸಿದನು." (ಗಲಾ. ೪, ೪. ೫.) "ಮರಣದ ಪರ್ಯಂತರ, ಶಿಲುಬೆಯ ಮರಣದ ಪರ್ಯಂತರವೇ ವಿಧೇಯನಾಗಿ, ತನ್ನನ್ನು ತಗ್ಗಿಸಿ ಕೊಂಡನು." (ಫಿಲಿ. ೨, ೮.) "ಒಬ್ಬನ ಅಕ್ರಮದಿಂದ ಎಲ್ಲಾ ಮನುಷ್ಯರಿಗೆ ಹ್ಯಾಗೆ ಆಜ್ಞೆ ನಿರ್ಣಯಕ್ಕಾಯಿತೋ," ಇತ್ಯಾದಿ. (ರೋಮಾ. ೫, ೧೮. ೧೯.) (**೧೯೮.** ಪರಿಶಿ. ೨.) "ನ್ಯಾಯಪ್ರಮಾಣವನ್ನಾದರೂ, ಪ್ರವಾದಿಗಳನ್ನಾದರೂ, ತೆಗೆದು ಹಾಕುವದಕ್ಕೆ ಬಂದೆನೆಂದು ನೆನಸ ಬೇಡಿರಿ." (ಮತ್ತಾ. ೫, ೧೭. ೧೮.) (**೨೩೧,** ೧.)

೨) "ನಿಶ್ಚಯವಾಗಿ ಅವನು ನಮ್ಮ ಕಷ್ಟಗಳನ್ನು ಹೊತ್ತು ಕೊಂಡನು; ನಮ್ಮ ವ್ಯಸನಗಳನ್ನು ತಾಳಿ ಕೊಂಡನು; ಆದರೆ ನಾವು ಅವನನ್ನು ಬಾಧಿಸಲ್ಪಟ್ಟವನೆಂದೂ, ದೇವರಿಂದ ಹೊಡಿಯಲ್ಪಟ್ಟವನೆಂದೂ, ಕುಂದಿಸಲ್ಪಟ್ಟವನೆಂದೂ, ಎಣಿಸಿದೆವು. ಆದರೆ ಅವನು ನಮ್ಮ ದ್ರೋಹಗಳ ನಿಮಿತ್ತ ಘಾಯವಾದನು; ನಮ್ಮ ಅಕ್ರಮಗಳ ನಿಮಿತ್ತ ಜಜ್ಜಲ್ಪಟ್ಟನು;

ನಮ್ಮ ಸಮಾಧಾನಕ್ಕೆ ಕಾರಣವಾದ ಶಿಕ್ಷೆ ಅವನ ಮೇಲೆ ಇತ್ತು; ಮತ್ತು ಅವನ ಬಾಸುಂಡೆಗಳಿಂದ ನಮಗೆ ಸ್ವಸ್ಥವಾಯಿತು." (ಯೆಶಾ. ೫೩, ೪. ೫.) (೧ ಪೇತ್ರ. ೨, ೨೪.) (**೨೩೨.**) "ಕ್ರಿಸ್ತನು ನಮಗೋಸ್ಕರ ಶಾಪವಾಗಿ, ನ್ಯಾಯಪ್ರಮಾಣದ ಶಾಪದೊಳಗಿಂದ ನಮ್ಮನ್ನು ಕೊಂಡು ಕೊಂಡನು." (ಗಲಾ. ೩, ೧೪.) "ಯಾಕಂದರೆ ಕ್ರಿಸ್ತನು ಸಹಾ, ನಮ್ಮನ್ನು ದೇವರ ಸಮೀಪಕ್ಕೆ ಶೇರಿಸುವ ಹಾಗೆ, ನೀತಿವಂತನಾಗಿದ್ದು ಅನೀತಿವಂತರಿಗೋಸ್ಕರ ಪಾಪಗಳ ನಿಮಿತ್ತ ಒಂದು ಸಾರಿ ಶ್ರಮೆ ಪಟ್ಟನು." (೧ ಪೇತ್ರ. ೩, ೧೮.)

**೨೩೪.** ಕ್ರಿಸ್ತನ ಪ್ರಧಾನಯಾಜಕೋದ್ಯೋಗವು ಶಾಂತಿ ಪಡಿಸುವ ಮರಣದಿಂದ ಸರ್ವಥಾ ತೀರಲಿಲ್ಲ. ಅದು ಶಾಂತಿ ಹೊಂದ ಅವಶ್ಯವಾಗಿಯೂ ಶಕ್ತರಾಗಿಯೂ ಇರುವ ಪಾಪಿಗಳು ಇಲ್ಲಿರುವ ಪರ್ಯಂತಕ್ಕೂ ಬಾಳುತ್ತದೆ. ಕ್ರಿಸ್ತನು ನಿತ್ಯಸ್ವಾಮಿತ್ವದ ಬಲಕಡೆಗೆ ಎತ್ತಿಸಲ್ಪಟ್ಟಂದಿನಿಂದ ಅವನು ತಂದೆಯ ಬಳಿಯಲ್ಲಿ ಪ್ರಧಾನಯಾಜಕನ ಬಿನ್ನಹದಿಂದ ನಮ್ಮ ರಾಯಭಾರಿಯಾಗಿದ್ದಾನೆ೧). ಮತ್ತು ಪರಿಶುದ್ಧಾತ್ಮವನ್ನು ಕಳುಹಿಸಿ, ಪರಿಶುದ್ಧ ಪ್ರಸಾದಗಳಲ್ಲಿ ತನ್ನ ಶ್ರಮ ಮರಣಗಳ ಪುಣ್ಯವನ್ನು ನಮಗೆ ಸಂಪ್ರದಾನವಾಗುವ ಹಾಗೆಯೂ ಸ್ವೀಕಾರ ಮಾಡುವ ಹಾಗೆಯೂ ಮಾಡುತ್ತಾನೆ. (**೨೬೨.**)

೧) "ಯಾರಾದರೂ ಪಾಪ ಮಾಡಿದರೆ, ತಂದೆಯ ಹತ್ತಿರ ನಮಗೆ ನೀತಿವಂತನಾದ ಯೇಸು ಕ್ರಿಸ್ತನೆಂಬ ಕಾರ್ಯಕರ್ತನು ಇದ್ದಾನೆ. ಇವನು ನಮ್ಮ ಪಾಪಗಳಿಗೋಸ್ಕರ ಶಾಂತಕರವಾದ ಬಲಿಯಾಗಿದ್ದಾನೆ; ನಮ್ಮವುಗಳಿಗೋಸ್ಕರ ಮಾತ್ರವಲ್ಲ, ಸಮಸ್ತ ಲೋಕದವುಗಳಿಗೋಸ್ಕರ ಸಹಾ." (೧ ಯೋಹಾ. ೨, ೧. ೨.) (ಇಬ್ರಿ. ೭, ೨೪. ೨೫. ೮, ೧. ೨. ೯, ೨೪. ರೋಮಾ. ೮, ೩೪.) (**೨೫೬.** ೧.)

**೨೩೫.** ರಕ್ಷಕನ ರಾಜೋದ್ಯೋಗವು, ತಾನು ತನ್ನ ಪ್ರವಾದಿಪ್ರಧಾನಯಾಜಕೋದ್ಯೋಗಗಳಿಂದ ಸ್ಥಾಪಿಸಿದ ರಾಜ್ಯವನ್ನು ಭದ್ರ ಪಡಿಸುವದಕ್ಕೂ ಕಾಪಾಡುವದಕ್ಕೂ ವಿಸ್ತರಿಸುವದಕ್ಕೂ ಪರಿಪೂರ್ತಿ ಮಾಡುವದಕ್ಕೂ ಇರುತ್ತದೆ೧). ಶ್ರಮೆಗಳ ಅಗಾಧದಲ್ಲಿಯೂ ಮರಣದ ನೆರಳಿನಲ್ಲಿಯೂ ಹ್ಯಾಗೊ, ಹಾಗೆಯೆ ಇಹದ ದಾಸರೂಪದಲ್ಲಿಯೂ ಅಲ್ಪತ್ವದಲ್ಲಿಯೂ ಅವನು ಅರಸನಾಗಿದ್ದನು೨). ಮತ್ತು ಅವನ ರಾಜಸ್ವಾಮಿತ್ವವು, ಮನುಷ್ಯರ ಹೃದಯಗಳ ಮೇಲೆಯೂ ಪ್ರಕೃತಿಯ ಬಲಗಳ ಮೇಲೆಯೂ ಅವನಿಗಿರುವ ಅಧಿಕಾರದಿಂದ ಪರೀಕ್ಷಾಸಿದ್ಧವಾಯಿತು. ಆದರೆ ಉತ್ಥಾನದಲ್ಲಿಯೂ ದಿವಾರೋಹಣದಲ್ಲಿಯೂ ದಾಸರೂಪದ ಮೊಬ್ಬಾಗಿರುವ ಮುಸುಕನ್ನು ತೆಗದಿಟ್ಟು, ಈಗ ಬಲದ ಬಲಗಡೆಯಲ್ಲಿ ಕೂತವನಾಗಿ, ಹಳೆ ಒಡಂಬಡಿಕೆಯ ಅರಸನು (ಮುಖ್ಯವಾಗಿ ದಾವೀದ ಸೊಲೊಮೋನ) ನೆರಳಾಗಿಯೂ ಮುಂಗುರ್ತಾಗಿಯೂ ಇದ್ದ ಹಾಗೆ, ಈತನು ಸಮಸ್ತ ಶತ್ರುಗಳನ್ನು

ಜೈಸುವವನಾಗಿಯೂ, ತನ್ನ ರಾಜ್ಯದ ಅಂಗಗಳಿಗೆಲ್ಲಾ ಆಶೀರ್ವಾದವನ್ನೂ ಸಮಾಧಾನವನ್ನೂ ದಯಪಾಲಿಸುವವನಾಗಿಯೂ, ಎಲ್ಲಾ ಜೀವಿತರಿಗೂ ಮರಣಸ್ಥರಿಗೂ ನ್ಯಾಯ ವಿಚಾರಿಸುವವನಾಗಿಯೂ, ತನ್ನ ಸರ್ವತ್ರಾಣದಿಂದ[೩] ಸಮಸ್ತವನ್ನು ನಿತ್ಯಸಂಪೂರ್ತಿಗೆ ತಕ್ಕೊಂಡು ಹೋಗುವವನಾಗಿಯೂ ಇದ್ದಾನೆ.

೧) "ಯೆಹೋವ ನನ್ನ ಕರ್ತನಿಗೆ" ಇತ್ಯಾದಿ. (ಕೀರ್ತ. ೧೧೦, ೧—೩.) (**೨೧೨.**) (ಕೀರ್ತ. ೨, ೧. ಇತ್ಯಾದಿ. ಲೂಕ. ೧, ೩೨. ೩೩.) "ಅವನು ಕ್ರಿಸ್ತನಲ್ಲಿ ಯತ್ನೈಸಿ, ಅವನನ್ನು ಸತ್ತವರೊಳಗಿಂದ ಎಬ್ಬಿಸಿ, ಪರಲೋಕದವುಗಳಲ್ಲಿ ತನ್ನ ಬಲಪಾರ್ಶ್ವದಲ್ಲಿ, ಸಕಲ ದೊರೆತನ, ಅಧಿಕಾರ, ಬಲ, ಒಡೆತನಗಳಿಗೂ, ಇಹದಲ್ಲಿ ಮಾತ್ರವಲ್ಲ, ಪರದಲ್ಲಿಯೂ, ಹೆಸರ್ಗೊಂಡ ಎಲ್ಲಾ ಹೆಸರಿಗೂ ಮೇಲಾಗಿ ಕುಂಡ್ರಿಸಿ, ಎಲ್ಲವುಗಳನ್ನು ಅವನ ಪಾದಗಳ ಕೆಳಗೆ ಇಟ್ಟು, ಅವನ ಶರೀರವೂ, ಎಲ್ಲವನ್ನು ಎಲ್ಲವುಗಳಲ್ಲಿ ತುಂಬಿಸುವವನ ಸಂಪೂರ್ಣತೆಯೂ, ಆಗಿರುವ ಸಭೆಗೆ ಅವನನ್ನು ಎಲ್ಲಾದರ ಮೇಲೆ ತಲೆಯಾಗಿ ಕೊಟ್ಟಿದ್ದಾನೆ." (ಎಫೆ. ೧, ೧೯—೨೩.)

೨) "ನಾನು ಅರಸನಾಗಿದ್ದೇನೆಂದು ನೀನೇ ಹೇಳುತ್ತೀ." (ಯೋಹಾ. ೧೮, ೩೭.)

೩) "ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಸಮಸ್ತ ಅಧಿಕಾರವು ನನಗೆ ಕೊಡಲ್ಪಟ್ಟದೆ." (ಮತ್ತಾ. ೨೮, ೧೮.)

## ಅವಶೇಷ.

ಕ್ರಿಸ್ತನು ತನ್ನ ಮೂರ್ತಿಯಲ್ಲಿ ರಕ್ಷಣೆಯನ್ನು ದುಡಿದು ಮುಂದಿಟ್ಟ ತರುವಾಯ, ನಮಗೆ ಆ ರಕ್ಷಣೆಯು ಯಥಾರ್ಥವಾಗಿಯೂ ನಿಜವಾಗಿಯೂ ಶಿಕ್ಕುವ ಹಾಗೆ ತನ್ನ ಮರಣ ಮತ್ತು ಜೀವದ ಅನ್ಯೋನ್ಯದಲ್ಲಿ ನಮ್ಮನ್ನು ಒಳನೆಡುವದಕ್ಕೂ ಅದರಲ್ಲಿ ಕಾಪಾಡುವದಕ್ಕೂ ಬೇಕಾದ ಸಂಧಾನಗಳನ್ನು ಸಹಾ ಮಾಡ ಬೇಕು. ಈ ಸಂಧಾನಗಳನ್ನು ರಕ್ಷಕನು ತಂದೆಯ ಬಳಿಗೆ ಹೋಗುವ ಸ್ವಲ್ಪ ಮೊದಲು ಪ್ರಸಾದಗಳಲ್ಲಿ (ಸ್ನಾನ ರಾತ್ರಿಭೋಜನಗಳಲ್ಲಿ) ನೇಮಿಸುತ್ತಾನೆ. ಸ್ನಾನದಿಂದ ನಾವು ಆತನ ಅನ್ಯೋನ್ಯದಲ್ಲಿ ಅಂಗೀಕರಿಸಲ್ಪಡ ತಕ್ಕದ್ದು. ರಾತ್ರಿಭೋಜನದಿಂದ ಅದರಲ್ಲಿ ಕಾಪಾಡಲ್ಪಟ್ಟು, ಭದ್ರವಾಗ ತಕ್ಕದ್ದು. (ಸಮ ನೋಡು **೩೨೨.** ಇತ್ಯಾದಿ.)

## ಕ.) ರಕ್ಷಕನ ಎರಡು ಸ್ಥಿತಿಗಳು.

**೨೩೬.** ಪರಿಶುದ್ಧ ಬರಹದಲ್ಲಿ ಕ್ರಿಸ್ತನು ಇಮ್ಮಡಿ ಸ್ಥಿತಿಯಲ್ಲಿ, ಅಂದರೆ, ತಗ್ಗಿಸಲ್ಪಟ್ಟ ಸ್ಥಿತಿಯಲ್ಲಿಯೂ ಎತ್ತಲ್ಪಟ್ಟ ಸ್ಥಿತಿಯಲ್ಲಿಯೂ ಕಾಣ ಬರುತ್ತಾನೆ೧).

೧) "ಅವನು ದೇವರ ರೂಪದಲ್ಲಿದ್ದು, ದೇವರಿಗೆ ಸಮಾನವಾಗಿರುವದು ಕೊಳ್ಳೆ ಎಂದು ಎಣಿಸದೆ, ದಾಸನ ರೂಪ ತಕ್ಕೊಂಡು, ಮನುಷ್ಯರ ಹೋಲಿಕೆಯಾದವನಾಗಿ, ತನ್ನನ್ನು ಬರಿದು ಮಾಡಿ ಕೊಂಡನು. ಮತ್ತು ಆಕಾರದಲ್ಲಿ ಮನುಷ್ಯನಾಗಿ ಕಾಣಲ್ಪಟ್ಟು, ಮರಣದ ಪರ್ಯಂತರ, ಶಿಲುಬೆಯ ಮರಣದ ಪರ್ಯಂತರವೇ ವಿಧೇಯನಾಗಿ, ತನ್ನನ್ನು ತಗ್ಗಿಸಿ ಕೊಂಡನು. ಆದದರಿಂದ ದೇವರು ಅವನನ್ನು ಮೇಲಕ್ಕೆ ಮೇಲಾಗಿ ಎತ್ತಿ, ಯೇಸುವಿನ ಹೆಸರಿನಲ್ಲಿ ಪರಲೋಕದಲ್ಲಿಯೂ ಭೂಮಿಯಲ್ಲಿಯೂ ಭೂಮಿಯ ಕೆಳಗೆಯೂ ಇರುವವರ ಮೊಣಕಾಲುಗಳೆಲ್ಲಾ ಬೊಗ್ಗಿ, ಯೇಸು ಕ್ರಿಸ್ತನು ಕರ್ತನೆಂದು, ಎಲ್ಲಾ ನಾಲಿಗೆಗಳು ತಂದೆಯಾದ ದೇವರ ಮಹಿಮೆಗಾಗಿ ಅರಿಕೆ ಮಾಡುವ ಹಾಗೆ ಎಲ್ಲಾ ಹೆಸರಿನ ಮೇಲಿನ ಹೆಸರನ್ನು ಅವನಿಗೆ ದಯ ಮಾಡಿದನು." (ಫಿಲಿ. ೨, ೬—೧೧.)

**೨೩೭.** ತಗ್ಗಿದ ಸ್ಥಿತಿಯು ರಕ್ಷಕನ ಮನುಷ್ಯಾವತಾರದಲ್ಲಿ ಆರಂಭವಾಗಿ, ಸಮಸ್ತ ಭೂಸಂಬಂಧವಾದ ಜೀವ, ಕರಣ, ಶ್ರಮಗಳನ್ನು ಆವರಿಸಿ ಕೊಳ್ಳುತ್ತದೆ. ದಿವ್ಯ ಸ್ವಭಾವದ ವಿಷಯದಲ್ಲಿ ಅವನ ತಗ್ಗುವಿಕೆಯು, ಅವನು ತನ್ನ ನಿತ್ಯಸ್ವಾಮಿತ್ವವನ್ನೂ ದೈವತ್ವವನ್ನೂ ಮನುಷ್ಯಸ್ವಭಾವದ ಮೊಬ್ಬಾದ ಮುಸುಕಿನಲ್ಲಿ ಮುಚ್ಚಿ ಅಡಗಿಸುವದರಿಂದ ಪ್ರಾಪ್ತಿಯಾಯಿತು. ಆತನು ದಿವ್ಯಗುಣಗಳ ಸ್ವಾಧೀನತೆಯನ್ನು ಅಲ್ಲವಾದರೂ, ಅವುಗಳ ನಿರ್ಬಂಧವಾದ ನಿರೌಪಾಧಿಕವಾದ ಪ್ರಯೋಗವನ್ನು ಹ್ಯಾಗೂ ಬರಿದು ಮಾಡಿ ಕೊಂಡನು. ತನ್ನ ದೈವತ್ವದ ಸತ್ವವನ್ನು ಅಲ್ಲ, ಲೋಕಪರವಾದ ಅದರ ಇರುವಿಕೆಯ ರೂಪವನ್ನು ಮಾತ್ರವೆ ತೆಗದಿಟ್ಟನು; ದಿವ್ಯರೂಪವನ್ನು ಬಿಟ್ಟು (ಸಮ ನೋಡು **೧೬೩.**) ದಾಸರೂಪ ತಕ್ಕೊಂಡನು. (ಫಿಲಿ. ೨, ೭.) ಮನುಷ್ಯ ಸ್ವಭಾವದಲ್ಲಿ ಅವನು ಪರಿಶುದ್ಧನೂ ಪಾಪರಹಿತನೂ ಆಗಿದ್ದರೂ, ಪಾಪಮಾಂಸದ ಹೋಲಿಕೆಯಾಗಿ ಕಾಣಿಸಿ ಕೊಂಡು (**೨೧೬.**) ನಮ್ಮ ಪಾಪದ ಸಮಸ್ತ ಶಾಪವನ್ನು ತನ್ನ ಮೇಲೆ ಬರ ಬಿಟ್ಟನು; ಇದು ಸಹಾ ಹ್ಯಾಗಂದರೆ, ಅವನ ದೈವಸ್ವಭಾವವು ಮನುಷ್ಯ ಸ್ವಭಾವದೊಡನೆ ಮೂರ್ತಿವತ್ತಾಗಿ ಏಕೀಕೃತವಾದ್ದರಿಂದ, ಅವನ ಭೂಸಂಚಾರದ ಸಮಯದಲ್ಲಿ ಅವನ ಮನುಷ್ಯ ಸ್ವಭಾವಕ್ಕೆ ಪ್ರಾಪ್ತಿಯಾದ ಅಲ್ಪತ್ವದಲ್ಲಿಯೂ ನಿಂದೆಯಲ್ಲಿಯೂ ಶ್ರಮದಲ್ಲಿಯೂ ಅಂಶಿಯಾಯಿತು. (**೨೧೮.**)

**೨೩೮.** "ಪರಿಶುದ್ಧಾತ್ಮದಿಂದ ಗರ್ಭ ಧರಿಸಿದಂಥ[೧]" ಎಂಬದು, ನಮ್ಮ ವಿಶ್ವಾಸಪ್ರಮಾಣದಲ್ಲಿ ತಗ್ಗುವಿಕೆಯ ಸ್ಥಿತಿಯ ವಿಷಯ ಹೇಳುವ ಮೊದಲನೆ ಸಂಗತಿ ರಕ್ಷಕನು ನಮ್ಮೆಲ್ಲರ ಹಾಗೆ (ಕೀರ್ತ. ೫೧, ೭.) ತಂದೆಯಿಂದಲೂ ತಾಯಿಯಿಂದಲೂ ಗರ್ಭ ಧರಿಸಿ ಹುಟ್ಟುವದು ಆಗದು. ಯಾಕಂದರೆ ಹಾಗಾಗುವದಾದರೆ, ಮನುಷ್ಯಸಂತತಿಯ

ಜನ್ಮಪಾಪತ್ವವು ಅವನ ಮೇಲೆ ಸಹಾ ಬರುತ್ತಿತ್ತು. (೧೯೮.) ಈ ಪ್ರಕಾರ ಅವನು ರಕ್ಷಣೆಯ ಕೆಲಸಕ್ಕೆ ಅಶಕ್ತನಾಗಿರುತ್ತಿದ್ದನು. ಅವನ ಮನುಷ್ಯಸ್ವಭಾವವು ಪ್ರತ್ಯೇಕವಾಗಿ ಆಶ್ಚರ್ಯಕರ ರೀತಿಯಲ್ಲಿ ಸರ್ವಶಕ್ತಿಯ ಬಲದಿಂದ ಉಂಟಾಗ ಬೇಕಾಯಿತು.

೧) "ಪರಿಶುದ್ಧಾತ್ಮನು ನಿನ್ನ ಮೇಲೆ ಬರುವದು; ಮತ್ತು ಮಹೋನ್ನತನ ಬಲವು ನಿನ್ನ ಮೇಲೆ ನೆರಳಾಗಿರುವದು; ಆದದರಿಂದ ಹುಟ್ಟುವ ಪರಿಶುದ್ಧವಾದದ್ದು ದೇವರ ಮಗ ನೆಂದು ಕರೆಯಲ್ಪಡುವದು." (ಲೂಕ. ೧, ೩೫.)

**೨೩೯.** ಇದಲ್ಲದೆ "ಕನ್ನಿಕೆಯಾದ ಮರಿಯಳಲ್ಲಿ ಹುಟ್ಟಿದವನು" ಎಂದು ಬೋಧಿಸಿ ಅದೆ. ಹ್ಯಾಗೆ ಒಂದು ಕಡೆಯಲ್ಲಿ ವಿಮೋಚಕನು ಮನುಷ್ಯ ಸಂತತಿಯ ಜನ್ಮ ಪಾಪತ್ವ ಇಲ್ಲದವನಾಗಿರ ಬೇಕಾಯಿತೊ, ಹಾಗೆಯೆ ಮತ್ತೊಂದು ಕಡೆಯಲ್ಲಿ ಸಮ ಸ್ತ ಮನುಷ್ಯ ಸಂತತಿಯ ಸಂಗಡ ನಿಜವಾಗಿಯೂ ಅವಶ್ಯವಾಗಿಯೂ ಇರುವ ಸಂಬಂ ಧದಲ್ಲಿ ನಿಂತು, (೨೨೬.) ಎಲ್ಲಾದರಲ್ಲಿಯೂ ನಮ್ಮ ಹಾಗೆಯೆ ಆಗಿ — ಪಾಪ ಮಾತ್ರ ಇಲ್ಲದೆ, ನಮ್ಮ ಹಾಗೆಯೆ ಸಮಸ್ತ ಜೀವೌಪಾಧಿಕಗಳಲ್ಲಿ ಶೇರ ಬೇಕಾಯಿತು. — ಮತ್ತು ಇದು ಅವನು, ಬೇರೆ ಸಮಸ್ತ ಮನುಷ್ಯ ಪುತ್ರರ ಹಾಗೆಯೆ, ಸ್ತ್ರೀಯಲ್ಲಿ ಹುಟ್ಟುವದ ರಿಂದ ಸಾಧ್ಯವಾಯಿತು.

ಪರಿಶಿ. ಹ್ಯಾಗೆ ಕ್ರಿಸ್ತನು ಸ್ತ್ರೀಯಲ್ಲಿ ಹುಟ್ಟುವದರಿಂದ ಸರ್ವಸಾಧಾರಣ ಮಾನು ಷ ಜೀವದ ಔಪಾಧಿಕಗಳಲ್ಲಿಯೂ ಸ್ಥಿತಿಗಳಲ್ಲಿಯೂ ಶೇರಿ, ಸರ್ವಸಾಧಾರಣ ಮಾನು ಷ ಜೀವ ನಿಯಮಗಳಿಗೆ ಒಳಗಾದನೊ, ಹಾಗೆಯೆ ಬೇರೆ ಒಬ್ಬೊಬ್ಬ ಇಸ್ರಯೇಲ್ಯನ ಹಾ ಗೆ ಈತನು ಸಹಾ ಪರಿಚ್ಛೇದನೆಯಿಂದ ಪ್ರತ್ಯೇಕ ಯೆಹೂದ್ಯ ಸ್ಥಿತಿಗಳಲ್ಲಿ ಶೇರಿ, ಪ್ರತ್ಯೇ ಕ ಯೆಹೂದ್ಯ ನಿಯಮಕ್ಕೆ ಒಳಗಾಗ ಬೇಕಾಯಿತು. (ಗಲಾ. ೪, ೪. **೨೨೨,** ೧.) ಇಲ್ಲಿ, ಅಂದರೆ ಎರಡು ಸಾವಿರ ವರ್ಷ ಪರ್ಯಂತ ರಕ್ಷಣೆಯು ಸಿದ್ಧವಾಗುತ್ತಾ ಬಂದಲ್ಲಿ, ಅವ ನು ಶೇರ ಬೇಕಾಯಿತು, ಅಲ್ಲಿಂದ ವಿಕಸನವನ್ನು ಮುಂದೆ ನಡಿಸಿ ಸಂಪೂರ್ಣ ಮಾಡ ಬೇ ಕಾಯಿತು.

**೨೪೦.** ತಗ್ಗುವಿಕೆಯ ಸ್ಥಿತಿಯಲ್ಲಿ ಅತ್ಯವಶ್ಯವಾದ ಕಾರ್ಯವೆಂದು ಮೆಸ್ಸೀಯ ಉ ದ್ಯೋಗವನ್ನು ಆರಂಭಿಸಿದಾಗ ಕ್ರಿಸ್ತನಿಗೆ ಪಿಶಾಚನಿಂದಾದ ಶೋಧನೆಯನ್ನು ಆಲೋಚಿ ಸ ತಕ್ಕದ್ದು. ಇದು ಮೊದಲನೆ ಆದಮನ ಶೋಧನೆಗೆ ಸಮ ಬೀಳುತ್ತದೆ. ಹ್ಯಾಗೆ ಆ ದಮನ ಶೋಧನೆಯು ಅವಶ್ಯವಾಗಿಯೂ ಅತ್ಯಾಜ್ಯವಾಗಿಯೂ ಇತ್ತೊ, (೧೯೬.) ಹಾ ಗೆಯೆ ಕ್ರಿಸ್ತನ ಶೋಧನೆಯ ವಿಷಯದಲ್ಲಿ ಸಹಾ ಹೇಳ ಬೇಕು. ಮೊದಲನೆ ಆದಮನು

ಈ ಶೋಧನೆಯಲ್ಲಿ ನಿಲ್ಲದೆ ಹೋಗಲಾಗಿ, ಎರಡನೆ ಆದಮನು ಹೊಸತಾಗಿ ಅದಕ್ಕೆ ಒಳಗಾಗುವದೂ, ಪಿಶಾಚನ ಅಧಿಕಾರದೊಳಗಿಂದ ವಿಮೋಚನೆಯು ಕೈಗೂಡಿ ಬರ ಬೇಕಾದರೆ, ಜೈಸುವದೂ ಅವನಿಗೆ ಅವಶ್ಯವಾಗಿತ್ತು. ಅವನು ನಮ್ಮ ಹಾಗೆಯೆ ನಿಜವಾಗಿಯೂ ಯಥಾರ್ಥವಾಗಿಯೂ ಮನುಷ್ಯನಾಗಿದ್ದದರಿಂದ, ಶೋಧನೆಯ ಸಾಧ್ಯತ್ವವು ಬಂತು. ಆದರೆ ಜಯದ ಅವಶ್ಯತ್ವವು, ಅವನ ಮನುಷ್ಯ ಸ್ವಭಾವವು ದಿವ್ಯ ಸ್ವಭಾವದೊಡನೆ ಮೂರ್ತಿವತ್ತಾಗಿ ಏಕವಾದದರಿಂದ, ಸಾಧ್ಯವಾಯಿತು.

"ಪಾಪವೇ ಹೊರ್ತು, ಸಕಲ ವಿಷಯಗಳಲ್ಲಿ ನಮ್ಮ ಹಾಗೆಯೇ ಶೋಧಿಸಲ್ಪಟ್ಟವನು ನಮಗುಂಟು." (ಇಬ್ರಿ. ೪, ೧೫.) (ಸಮ ನೋಡು **೨೨೬.**)

**೨೪೧.** ತಗ್ಗುವಿಕೆಯ ಸ್ಥಿತಿಯಲ್ಲಿ ಕ್ರಿಸ್ತನ ಬಡತನವೂ ಅಲ್ಪತ್ವವೂ ಬಂತು[1]. ಅರಸನ ಅರಮನೆಯಲ್ಲಿ ಅಲ್ಲ, ಬೆತ್ಲೆಹೇಮಿನಲ್ಲಿ ಬಡಗೋದಲಿಯಲ್ಲಿ ಮೆಸ್ಸೀಯನು ಹುಟ್ಟ ಬೇಕಾಯಿತು. ಭೂಸಂಬಂಧವಸ್ತುಗಳ ಸಮೃದ್ಧಿಯಲ್ಲಿ ಅಲ್ಲ, ಕೊರತೆಯಲ್ಲಿಯೂ ಬಡತನದಲ್ಲಿಯೂ ಬರ ಬೇಕಾಯಿತು. ಬಡತನವೂ ಕೊರತೆಯೂ ಕಷ್ಟವೂ ಸಹಾ, ಪಾಪದಿಂದ ಸಮಸ್ತ ಭೂಸಂಬಂಧಸ್ಥಿತಿಗಳಲ್ಲಿ ಹೊಕ್ಕ ಗಲಿಬಿಲಿಗಳ ಫಲವಾಗಿರುತ್ತವೆ. (**೧೧೦—೧೧೩.**) ಕೆಲವು ಮನುಷ್ಯರಿಗೆ ದಿವ್ಯ ಸಂಕಲ್ಪದ ಸುಯೋಜನೆಯ ಪ್ರಕಾರ ಕಷ್ಟವೂ ಬಡತನದ ಕೊರತೆಗಳೂ ಬಾರದಿದ್ದರೂ ಬಾರದೆ ಇರ ಬೇಕಾದರೂ, ಪಾಪದ ಸಮಸ್ತ ಫಲಗಳನ್ನು ತನ್ನ ಮೇಲೆ ತಕ್ಕೊಳ್ಳಲಿಕ್ಕೂ, ಭೂಕಷ್ಟದ ಕುಡಿಕೆಯನ್ನು ಕಡೇ ತಟಕಿನ ಪರ್ಯಂತಕ್ಕೆ ಕುಡಿದು ಬಿಡಲಿಕ್ಕೂ ಬಂದವನಿಗೆ ಹಾಗಲ್ಲ. ನಮ್ಮನ್ನು ಐಶ್ವರ್ಯವಂತರಾಗ ಮಾಡುವದಕ್ಕೋಸ್ಕರ ಅವನು ತಾನೆ ಬಡವನಾಗ ಬೇಕಾಯಿತು[2]. ನಮಗೆ, ಲೋಕಾಧಿಕಾರದ ಸಿಂಹಾಸನದಲ್ಲಿ, ನಮ್ಮ ಬಲಹೀನತ್ವದಲ್ಲಿ ಕೂಡ ಚಿಂತಿಸ ಬಲ್ಲ ಪ್ರಧಾನ ಯಾಜಕನು ಇರುವ ಹಾಗೆಯೂ (ಇಬ್ರಿ. ೪, ೧೫.) (**೨೨೬,** ೩.) ಸಮಸ್ತ ಜೀವದ ಸಂಕಷ್ಟಗಳಲ್ಲಿ ನಾವು ಆತನಲ್ಲಿ ಪೂರ್ಣ ಭರವಸ ಇಡಲಿಕ್ಕಾಗುವ ಹಾಗೆಯೂ, ಅವನು ಜೀವದ ಸಂಕಷ್ಟಗಳನ್ನೆಲ್ಲಾ ತನ್ನಲ್ಲಿಯೆ ಅನುಭವಿಸ ಬೇಕಾಯಿತು.

೧) "ನರಿಗಳಿಗೆ ಕುಣಿಗಳೂ, ಆಕಾಶದ ಪಕ್ಷಿಗಳಿಗೆ ಗೂಡುಗಳೂ, ಉಂಟು. ಆದರೆ ಮನುಷ್ಯನ ಮಗನಿಗೆ ತಲೆ ಇಡುವ ಸ್ಥಳವಿಲ್ಲ, ಅಂದನು." (ಮತ್ತಾ. ೮, ೨೦.)

೨) "ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯನ್ನು ತಿಳಿಯುತ್ತೀರಿ; ಏನಂದರೆ ಅವನು ಐಶ್ವರ್ಯವಂತನಾಗಿದ್ದು, ನೀವು ಅವನ ಬಡತನದಿಂದ ಐಶ್ವರ್ಯವಂತರಾಗುವ ಹಾಗೆ, ನಿಮಗೋಸ್ಕರ ಬಡವನಾದನು." (೨ ಕೊರಿ. ೮, ೯.)

**೨೪೨.** "ಪೊಂತ್ಯ ಪಿಲಾತನ ಕಾಲದಲ್ಲಿ ಶ್ರಮ ಮರಣ ಕ್ರೂಜೆ ಪಟ್ಟು ಹೂಣಲ್ಪಟ್ಟಂಥಾ" ಎಂದು ವಿಶ್ವಾಸಪ್ರಮಾಣದಲ್ಲಿ ಹೇಳಿಯದೆ. ಕ್ರಿಸ್ತನ ಶ್ರಮವು ಅವನ ಭೂಜೀವದಲ್ಲೆಲ್ಲಾ ನಡಿಯುತ್ತಾ ಬಂತು. ಅವನ ಶತ್ರುಗಳ ಅಪಹಾಸ್ಯದಿಂದಲೂ ನಿಂದೆಯಿಂದಲೂ ಹಿಂಸೆಗಳಿಂದಲೂ ಶ್ರಮ ಪಟ್ಟನು. ಜನರ ಅವಿಶ್ವಾಸದಿಂದಲೂ ಶಿಷ್ಯರ ಅಲ್ಪ ವಿಶ್ವಾಸದಿಂದಲೂ ಶ್ರಮ ಪಟ್ಟನು. ನಮ್ಮ ಹಾಗೆಯೆ ಎಲ್ಲಾ ವಿಷಯದಲ್ಲಿಯೂ ಶೋಧಿಸಲ್ಪಡುವದಕ್ಕೂ ಎಲ್ಲಾ ನಮ್ಮ ಹೊರೆಗಳನ್ನು ಹೊತ್ತಿದವನಾಗುವದಕ್ಕೂ ಬೇಕಾಗಿ ಈ ಶ್ರಮವನ್ನೆಲ್ಲಾ ಅವನು ತಾಳ ಬೇಕಾಯಿತು. ಆದರೂ ಅವನ ಪ್ರತಿಸ್ಥಾನೀಯವಾದ ಶಾಂತ ಪಡಿಸುವ ಶ್ರಮದ ತುದಿಯು ಗೆತ್ಸೇಮನೆಯ ಶ್ರಮ ಹೋರಾಟವೂ ಶಾಪದ ಮರಣದಲ್ಲಿ ರುಚಿಸಿದ ಅಕ್ರಮಗಾರನ ಕಠಿಯಾದ ಮರಣವೂ ಆಗಿರುತ್ತದೆ. (ಗಲಾ. ೩, ೧೩.) ಮತ್ತು ಅವನ ನಿಂದೆಯ ತುದಿಯು, ಜೀವದ ಪ್ರಭುವು ಮರಣಕ್ಕೆ ಕೊಳ್ಳೆಯಾದದ್ದೂ ಪ್ರಾಣ ಹೋದ ಶರೀರವು ಸಮಾಧಿಯಲ್ಲಿಯೂ ಅವನ ಶರೀರ ಬಿಟ್ಟ ಪ್ರಾಣವು ಪಾತಾಳದಲ್ಲಿಯೂ ಹೋಗ ಬೇಕಾದ್ದೂ ಆಗಿರುತ್ತದೆ. (**೨೪೬.**)

**೨೪೩.** ದಿವ್ಯ ಮಹಿಮೆಯ ಪರಿಪೂರ್ಣಿಯು, ಅವನ ಭೂಸಂಬಂಧವಾದ ಪ್ರತ್ಯಕ್ಷತೆಯು ದಾಸರೂಪದಿಂದ ಮುಚ್ಚಿ ಇದ್ದರೂ, ಭೂಸಂಚಾರದ ಸಮಯದಲ್ಲಿ ಸಹಾ ಮೊಬ್ಬಾದ ಮುಸುಕನ್ನು ದಾಟಿ ಬೆಳಗಿಸಲಾಗಿ, ವಿಶ್ವಾಸದ ಕಣ್ಣು ಆಗ್ಯೆ ಸಹಾ ಮಹತ್ವವನ್ನು ಅಲ್ಪತ್ವದಲ್ಲಿ ತಿಳಕೊಂಡಿತು ೧). ಹ್ಯಾಗಂದರೆ ಪಾಪಮಾಂಸದ ರೂಪವನ್ನು ತನ್ನಲ್ಲಿಯೂ ನಮಗೋಸ್ಕರವೂ ಜೈಸಲಿಕ್ಕೆ ಆಧಾರವಾದ ದೇವಬಲವು ಆದಿಯಿಂದ ಅವನಲ್ಲಿತ್ತು. ಅವನ ಮುಖವು ಸೂರ್ಯನಂತೆ ಪ್ರಕಾಶಿಸಿದಂಥಾ, ಅವನ ವಸ್ತ್ರವು ಬೆಳಕಿನಂತೆ ಮಿಂಚಿದಂಥಾ ರೂಪಾಂತರದ ಪರ್ವತದಲ್ಲಿ, ಅನ್ಯಥಾ ಅಡಗಿದ್ದ ಅವನ ಮಹಿಮೆಯು ಅವನ ಶಿಷ್ಯರ ದೇಹದೃಷ್ಟಿಗೆ ಸಹಾ — ಮುಂದಿನ ಪೂರ್ಣರೂಪಾಂತರದ ಮುಂಗಡವೂ ಮುಂಗುರ್ತೂ ಆಗಿ, ಪ್ರತ್ಯಕ್ಷವಾಯಿತು.

೧.) "ತಂದೆಯಿಂದ ಒಬ್ಬನೇ ಹುಟ್ಟಿದವನ ಮಹಿಮೆಯು ಹಾಗೆ ಅವನ ಮಹಿಮೆಯನ್ನು ನೋಡಿದೆವು." (ಯೋಹಾ. ೧, ೧೪.) (**೨೨೫**, ೪.)

**೨೪೪.** ಅಲ್ಪತ್ವದಲ್ಲಿ ಅಡಗಿದ್ದ ಮಹತ್ವಕ್ಕೆ ಅವನ ಅದ್ಭುತಗಳು ಮತ್ತೊಂದು ಸಾಕ್ಷಿಯಾಗಿದ್ದವು. ಅವನ ಮೊದಲು ಮತ್ತು ತರುವಾಯ ಇದ್ದ ಪ್ರವಾದಿಗಳೂ ಅಪೊಸ್ತಲರೂ ಅದ್ಭುತಗಳನ್ನು ಮಾಡಿದ್ದಾರೆ. ಆದರೆ ಅದ್ಭುತಬಲವು ಅವರಿಗೆ ಅನ್ಯವಾಗಿ ಕೊಡಲ್ಪಟ್ಟಿತು. ಆದಕಾರಣ ಕ್ಷಣಮಾತ್ರಕ್ಕೆ, ಬೇಗ ಗತಿಸಿ ಹೋಗುವದಾಗಿ ಅದು ಕಾಣ

ಬಂತು. ಆದರೆ ಕ್ರಿಸ್ತನಲ್ಲಿ ಅದು, ಅವನ ಸ್ವಂತ ಸ್ವಭಾವದ ಪ್ರವಾಹವಾಗಿದ್ದ ಕಾರಣ, ಶಾಶ್ವತವಾಗಿಯೂ, ಎಡೆ ಬಿಡದೆಯೂ ಇತ್ತು. ಅದ್ಭುತಗಳು, ಅವನ ಎಲ್ಲಾ ವಿಮೋಚನಾ ಕಾರ್ಯದ ಹಾಗೆಯೆ, ಅವನ ಮನುಷ್ಯ ಸ್ವಭಾವದಿಂದ ಬಂದವೆಂಬದು ಸರಿ. ಆದರೆ—ಅದು ತನ್ನಲ್ಲಿ ನಮ್ಮದರ ಹಾಗೆಯೆ ಬಲಹೀನವಾಗಿದ್ದು (**೨೨೯.**)—ಅದರಲ್ಲಿ ವಾಸವಾಗಿರುವ ದೇವತಾ ಪರಿಪೂರ್ತಿಯಿಂದ ಅದಕ್ಕೋಸ್ಕರ ಬಲ ಗೊಂಡಿತು, ಶಕ್ತ ಮಾಡಲ್ಪಟ್ಟಿತು. ಲೋಕ ನಿರ್ಮಾಣಿಕ ವಾಕ್ಯವು ಎರಡನೆ ಆದಮನ (ಮನುಷ್ಯ ಯೇಸುವಿನ) ಸಂಗಡ ಮೂರ್ತಿವತ್ತಾಗಿ ಒಂದಾದ ಕಾರಣ, ಆರಂಭದಲ್ಲಿ ಮನುಷ್ಯನಿಗೆ ನಿಶ್ಚೈಸಿ ಇದ್ದರೂ ಪಾಪದಿಂದ ಕಳದು ಹೋದ ಮನುಷ್ಯನ ಅಧಿಕಾರಬಲವು ಪುನಃಸ್ಥಾಪಿಸಲ್ಪಟ್ಟಿತು ಮಾತ್ರವಲ್ಲಾ, ಅತಿ ಶ್ರೇಷ್ಠವಾದ, ಎಲ್ಲಾ ಅಟಕಗಳನ್ನು ಜೈಸುವ ಎಲ್ಲಾ ಗಲಿಬಿಲಿಯನ್ನು ನವೀಕರಿಸುವ ಬಲವಾಗುವ ಹಾಗೆ, ಅಧಿಕವಾಯಿತು.

ಪರಿಶಿ. ಅದ್ಭುತಗಳು, ಯೇಸು ಮೆಸ್ಸೀಯನೆಂಬದನ್ನು ವಿಶ್ವಾಸ ಯೋಗ್ಯ ಮಾಡುವದಕ್ಕೋಸ್ಕರ ಮಾತ್ರವೆ ಇರಲಿಲ್ಲ. ಅವುಗಳು ತಾವೆ ತಮ್ಮಷ್ಟಕ್ಕೆ ಅವನ ಪುನಃಸ್ಥಾಪನೆಯ ಮತ್ತು ವಿಮೋಚನೆಯ ಕರಣಿಗೆ ಅತ್ಯವಶ್ಯವಾಗಿ ಬೇಕಾಗಿದ್ದವು. ಪಾಪದಿಂದ ದುಃಖವೂ ರೋಗವೂ ಮರಣವೂ ಮನುಷ್ಯಸಂತತಿಯ ಜೀವದಲ್ಲಿಯೂ, ಬಹು ವಿಧವಾದ ಗಲಿಬಿಲಿಯು ಪ್ರಕೃತಿಯ ಜಿವದಲ್ಲಿಯೂ ಬಂತು. ವಿಮೋಚಕನ ಕೆಲಸವು ಪಾಪದ ಸಮಸ್ತ ಫಲಗಳನ್ನು ಹ್ಯಾಗೊ, ಹಾಗೆಯೆ ಇದನ್ನು ಸಹಾ ತೆಗದು ಹಾಕುವದಾಗಿತ್ತು. ಆದರೆ ಅದು, ಕ್ರಿಸ್ತನು ಮನುಷ್ಯಸಂತತಿಯಲ್ಲಿ ನೆಟ್ಟ ಹೊಸಜೀವವು ಅದನ್ನು ಪೂರ್ಣವಾಗಿಯೂ ಸಾಕಲ್ಯವಾಗಿಯೂ ವ್ಯಾಪಿಸಿದಾಗ, ಈ ಯುಗದ ಕಡೆಯಲ್ಲಿ ಮಾತ್ರವೆ ಸರ್ವತ್ರತೆಯಲ್ಲಿಯೂ ಪೂರ್ಣವಾಗಿಯೂ ಉಂಟಾಗ ಬಹುದು. ಆದರೆ ಈ ಸಂಪೂರ್ಣ ವಿಮೋಚನೆಯ ಮೊದಲನೆ ಆರಂಭವೂ, ಅದರ ಮುಂಗುರ್ತುಗಳೂ ಮುಂಗಡವೂ ಆಗಲೆ ಪ್ರತ್ಯಕ್ಷವಾಗ ಬಹುದಾಗಿಯೂ ಬೇಕಾಗಿಯೂ ಇತ್ತು.

**೨೪೫.** ಮಹತ್ವದ ಸ್ಥಿತಿಯು ರಕ್ಷಕನ ಜೀವವನ್ನೂ ಕರಣಿಯನ್ನೂ ಅವನ ಪಾತಾಳಗಮನದಿಂದ ಎಲ್ಲಾದರ ಸಂಪೂರ್ತಿವರೆಗೆ ಆವರಿಸಿ ಕೊಳ್ಳುತ್ತದೆ. ಅವನ ಮನುಷ್ಯ ಸ್ವಭಾವದ ವಿಷಯದಲ್ಲಿ ಮಹತ್ವವು, ಅವನು ಮಾಂಸಭಾವದ ರೂಪವನ್ನು ತೆಗದಿಟ್ಟು, ತನ್ನ ಮನುಷ್ಯ ಸ್ವಭಾವವನ್ನು ಅತಿ ಶ್ರೇಷ್ಠವಾದ ಮಹಿಮೆಗೂ ಪ್ರಭೆಗೂ ಎತ್ತಿಸಿದ್ದರಿಂದ ಪ್ರಾಪ್ತಿಯಾಯಿತು. (**೨೪೭.**) ಇದು, ಪಾಪ ರಹಿತವಾಗಿಯೂ ಪರಿಶುದ್ಧವಾಗಿಯೂ ಯುದ್ಧದಿಂದಲೂ ಜಯದಿಂದಲೂ ಪರೀಕ್ಷಿತವಾದ ಕಾರಣ, ಅದಕ್ಕೆ ತಕ್ಕದ್ದಾಗಿತ್ತು. ದಾಸರೂಪಕ್ಕೆ ತಗ್ಗಿಸಿ ಕೊಂಡಿದ್ದ ದಿವ್ಯ ಸ್ವಭಾವವು ತನ್ನ ನಿತ್ಯ ಲೋಕಪರವಾದ ಇರುವಿಕೆಯ ರೂ

ಪಕ್ಕೂ ತನ್ನ ದಿವ್ಯ ಗುಣಗಳ ಪೂರ್ಣ ಪ್ರಯೋಗಕ್ಕೂ ಲೋಕ ಉಂಟಾಗುವ ಮೊದಲೆ ತಂದೆಯ ಬಳಿಯಲ್ಲಿರುವ ನಿತ್ಯಸ್ವಾಮಿತ್ವಕ್ಕೂ ಪ್ರತಿಗೂ ತಿರುಗಿ ಕೊಂಡಿತು. (೨೪೯.) — ಮತ್ತು ಉಭಯ ಸ್ವಭಾವಗಳು ಮೂರ್ತಿವತ್ತಾಗಿ ಒಂದೇಯಾಗಿರಲಾಗಿ, ಕ್ರಿಸ್ತನ ಮನುಷ್ಯ ಸ್ವಭಾವ ಸಹಾ ತ್ರಾಣ ಮಹಿಮೆಗಳ ಬಲಗಳಿಗೆ ಎತ್ತಲ್ಪಟ್ಟದ್ದಾಗಿ, ದಿವ್ಯ ಸ್ವಭಾವದ ಸಮಸ್ತ ತ್ರಾಣ, ಆನಂದ, ಸ್ವಾಮಿತ್ವಗಳಲ್ಲಿ ಪಾಲು ಹೊಂದಿತು. (೨೫೦.)

**೨೪೬.** "ಪಾತಾಳಕ್ಕೆ ಇಳಿದು ಹೋಗಿ" ವಿಮೋಚಕನ ಪರಿಶುದ್ಧ ಶರೀರವು ಸಮಾಧಿಯಲ್ಲಿ ವಿಶ್ರಮಿಸಿ ಕೊಳ್ಳುತ್ತಿರುವಾಗ, ಶರೀರ ಬಿಟ್ಟ ಅವನ ಪ್ರಾಣವು ಪಾತಾಳಕ್ಕೆ (ಇಬ್ರಿ. ಷೆಯೋಲಿಗೆ.), ಅಂದರೆ ಶರೀರ ಬಿಟ್ಟ ಸಮಸ್ತ ಮನುಷ್ಯರ ಪ್ರಾಣಗಳು ಉತ್ಥಾನವನ್ನೂ ನ್ಯಾಯತೀರ್ಪನ್ನೂ ಕಾದುಕೊಳ್ಳುವವುಗಳಾಗಿ ಇಡಲ್ಪಟ್ಟಿರುವ ಸ್ಥಳಕ್ಕೆ ಹೋಯಿತು. ಈ ಕಷ್ಟ ಸಹಾ ಕ್ರಿಸ್ತನು ಪಾಪಮಾಂಸದ ರೂಪಕ್ಕೋಸ್ಕರ ತೆತ್ತು, ಅದರಲ್ಲಿ ಸಹಾ ನಮ್ಮ ಹಾಗೆಯೆ ಆಗ ಬೇಕಾಯಿತು. ಈ ಪ್ರಕಾರ ಪಾತಾಳಗಮನವು ಅವನ ತಗ್ಗಿಸುವಿಕೆಯ ಕಡೇ ಮೆಟ್ಟು ಆಗಿರುತ್ತದೆ. — ಆದರೆ ಅದೆ ಸಮಯದಲ್ಲಿ ಅದು ಅವನ ಎತ್ತಿಸುವಿಕೆಯ ಮೊದಲನೆ ಮೆಟ್ಟಾಗಿತ್ತು. ಹ್ಯಾಗಂದರೆ ಇಲ್ಲಿ ಅಪಜಯದಿಂದ ಜಯವೂ, ಅಲ್ಪತ್ವದಿಂದ ಮಹಿಮೆಯೂ ಬರುವದಕ್ಕೆ ಆರಂಭವಾಯಿತು. ಹ್ಯಾಗಂದರೆ ಮತ್ತೊಬ್ಬನು ಬಂದು ವಿಮೋಚಿಸುವ ಪರ್ಯಂತ ಅಲ್ಲಿ ಇಡಲ್ಪಡುವದಕ್ಕೆ ಹೋಗುವ ನಮ್ಮ ಹಾಗೆ, ಅವನು ಪಾತಾಳಕ್ಕೆ ಹೋಗಲಿಲ್ಲ. ಪಾಪ ಮರಣಗಳ ಮೇಲೆ ಜಯಶಾಲಿಯಾಗಿಯೂ, ಕೊಳೆಗೆ ಸ್ವತಂತ್ರವೂ ಪಾತಾಳಕ್ಕೆ ಅಧಿಕಾರವೂ ತನ್ನ ಮೇಲೆ ಇಲ್ಲದವನಾಗಿಯೂ[೧], ಅಲ್ಲಿ ಸಹಾ ತನ್ನ ಮಹಿಮೆಯನ್ನು ಪ್ರಕಟಿಸುವದಕ್ಕೂ, ಪೂರ್ವಕಾಲದಿಂದಿದ್ದ ಅವಿಶ್ವಾಸಿಗಳಿಗೆ, ಮುಖ್ಯವಾಗಿ ನೋಹನ ಕಾಲದಲ್ಲಿ ಬದುಕಿದವರಿಗೆ ಇನ್ನೊಮ್ಮೆ ಪ್ರಸಂಗಿಸುವದಕ್ಕೂ[೨], ಅಷ್ಟು ಪರ್ಯಂತ ವಿಶ್ವಾಸದಲ್ಲಿ ತೀರಿ ಹೋದವರಿಗೆ, ಬಹು ಕಾಲ ಕಾದು ಕೊಂಡಾದ ಮೇಲೆ, ಸಂಪೂರ್ಣವಾದ ವಿಮೋಚನೆಯ ವಾರ್ತೆಯನ್ನು ತರುವದಕ್ಕೂ[೩], ಅವರೊಳಗಿಂದ ಉತ್ಥಾನದ ಪ್ರಥಮ ಫಲಗಳನ್ನು ತನ್ನೊಡನೆ ಮಹಿಮೆಗೆ ತರಲಿಕ್ಕೂ ಹೋಗಿದ್ದನು[೪].

೧) "ನೀನು ನನ್ನ ಪ್ರಾಣವನ್ನು ಪಾತಾಳದಲ್ಲಿ ಬಿಟ್ಟು ಬಿಡುವದಿಲ್ಲ; ನಿನ್ನ ಭಕ್ತನನ್ನು ಕೊಳೆಯುವಿಕೆಯನ್ನು ನೋಡ ಗೊಡಿಸುವದಿಲ್ಲ." (ಕೀರ್ತ. ೧೬, ೧೦.) (ಸಮ ನೋಡು ಅ. ಕ್ರಿ. ೨, ೨೪—೩೨. ೧೩, ೩೬. ೩೭.)

೨.) "ಅದರಿಂದಲೇ ಅವನು ಹೋಗಿ, ನೋಹನ ದಿವಸಗಳಲ್ಲಿ, ನಾವೆ ಕಟ್ಟುತ್ತಿರುವಾಗ, ದೇವರ ದೀರ್ಘಶಾಂತಿಯು ಒಂದು ಸಾರಿ ಕಾದು ಕೊಂಡಿರುವಾಗ, ಮುಂಚೆ

ಅವಿಧೇಯರಾಗಿದ್ದಂಥ, ಸೆರೆಯಲ್ಲಿರುವಂಥ, ಆತ್ಮಗಳಿಗೆ ಸಾರಿದನು." (೧ ಪೇತ್ರ. ೩, ೧೯. ೨೦.) (ಸಮ ನೋಡು ೪, ೬.)

೩.) "ನಿಶ್ಚಯವಾಗಿ ನಿನಗೆ ಹೇಳುತ್ತೇನೆ, ಈ ಹೊತ್ತು ನನ್ನ ಸಂಗಡ ಪರದೈಸಿನಲ್ಲಿ ಇರುವಿ, ಅಂದನು." (ಲೂಕ. ೨೩, ೪೩.)

೪.) "ಸಮಾಧಿಗಳು ತೆರೆಯಲ್ಪಟ್ಟವು; ಮತ್ತು ನಿದ್ದೆ ಮಾಡಿದ ಅನೇಕ ಪರಿಶುದ್ಧರ ಶರೀರಗಳು ಎಬ್ಬಿಸಲ್ಪಟ್ಟವು. ಅವನು ಎದ್ದ ಮೇಲೆ, ಅವರು ಸಮಾಧಿಗಳಿಂದ ಹೊರಟು, ಪರಿಶುದ್ಧ ಪಟ್ಟಣದಲ್ಲಿ ಪ್ರವೇಶಿಸಿ, ಅನೇಕರಿಗೆ ಕಾಣಿಸಿ ಕೊಂಡರು." (ಮತ್ತಾ. ೨೭, ೫೨. ೫೩.)

**೨೪೭.** "ಮೂರನೆ ದಿನದಲ್ಲಿ ಸತ್ತವರೊಳಗಿಂದ ಎದ್ದನು." ವಿಮೋಚಕನಲ್ಲಿದ್ದ ದೇವಬಲದ ಪರಿಪೂರ್ತಿಯಿಂದ ಅವನು, ನಾವು ಮಾಡ ಕೂಡದಂಥಾದ್ದನ್ನು ಮಾಡ ಶಕ್ತನಾದನು. ಏನಂದರೆ, ಮರಣದಲ್ಲಿ ಮರಣವನ್ನು ಜೈಸಿದನು. ಕೊಳೆಯನ್ನು ತನ್ನ ಪರಿಶುದ್ಧ ಶರೀರದಿಂದ ದೂರ ಇಟ್ಟು, ಇದನ್ನು ತನ್ನ ಪರಿಶುದ್ಧ ಸಂಪೂರ್ಣವಾದ ಮನುಷ್ಯತ್ವಕ್ಕೆ ಹೊಸತಾದ ಮಹಿಮೆಯುಳ್ಳ ಆನಂದಕರವಾದ ನಿವಾಸವಾಗ ಮಾಡಿದನು. ಉತ್ಥಾನದಿಂದ ಪಾಪಮಾಂಸದ ರೂಪವನ್ನು ಜೈಸಿ, ಸ್ಫುಟ ಮಾಡಿ, ನಿತ್ಯ ಮಹಿಮೆಯಿಂದ ಹೊದಿಸಿದನು. ಮರ್ತ್ಯವು ಅಮರ್ತ್ಯದಿಂದ ನುಂಗಲ್ಪಟ್ಟದ್ದಾಗಿ (೧ ಕೊರಿ. ೧೫, ೫೩. ಇತ್ಯಾದಿ. ಮತ್ತು ಫಿಲಿ. ೩, ೨೧.), ಅವನ ಜೀವದ ಅನಂತ ಪರಿಪೂರ್ತಿಯಲ್ಲಿ ಮುಣುಗಿ ಹೋಯಿತು.

"ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟು, ಇನ್ನು ಸಾಯನೆಂದು ಬಲ್ಲೆವು. ಮರಣವು ಇನ್ನು ಅವನನ್ನು ಆಳುವದಿಲ್ಲ." (ರೋಮಾ. ೬, ೯.)

ಪರಿಶಿ. ಕ್ರಿಸ್ತನ ಉತ್ಥಾನವು ಲಾಜರ ಇತ್ಯಾದಿಗಳ ಉತ್ಥಾನದಿಂದ ಬೇರೆ ತರದ್ದಾಗಿತ್ತು. ಕ್ರಿಸ್ತನ ಮಹಿಮಾನವಾದ ಶರೀರವು ಬಹು ಸೂಕ್ಷ್ಮವಾಗಿಯೂ ಆಕಾಶಮಯವಾಗಿಯೂ ಇರಲಾಗಿ, ನಮ್ಮ ಈಗಿನ ಶರೀರತ್ವವು ಒಳಗಾಗಿರುವ ಬಹು ವಿಧದ ಅಟಕ ಮಾಡುವ ಔಪಾಧಿಕಗಳಿಗೂ ಸ್ಥಿತಿಗಳಿಗೂ ಮೇಲಾಗಿತ್ತು. (ಉದಾ: ಲೂಕ. ೨೪, ೩೧. ೩೬. ಯೋಹಾ. ೨೦, ೨೬.) ಆದರೂ ಅವನ ಶರೀರವು ಬೇರೊಂದಾಗಿರದೆ, ಮೊಳೆಗಳ ಕಲೆಗಳೂ ಪಕ್ಕೆಯ ಘಾಯವೂ ಉಳ್ಳ ಅದೇ ಶರೀರವಾಗಿತ್ತು. (ಯೋಹಾ. ೨೦, ೨೫.) ಭೂಮಿಯ ಆಹಾರವನ್ನು ಅವನು ತಕ್ಕೊಂಡನು. ಆದರೆ ಅದು ಅವನಿಗೆ ಅವಶ್ಯವಾಗಿರುವದರಿಂದಲ್ಲ, ತಾನು ಪ್ರೇತದಂತೆ ಶರೀರ ರಹಿತವಾದ ಆತ್ಮ ಪ್ರತ್ಯಕ್ಷತೆ ಅಲ್ಲವೆಂದು ಶಿಷ್ಯರಿಗೆ ನಿಶ್ಚಯ ಮಾಡುವದಕ್ಕೋಸ್ಕರ ತಕ್ಕೊಂಡನು. (ಲೂಕ. ೨೪, ೩೬. ೩೯. ೪೧.) (ಹ್ಯಾಗೂ ಸಮ ನೋಡು ಮತ್ತಾ. ೨೬, ೨೯. ಮಾರ್ಕ. ೧೪, ೨೫. ಪ್ರಕ. ೨೨, ೧. ಉತ್ಪ. ೧೮, ೮.)

**೨೪೮.** ಕ್ರಿಸ್ತನ ಮರಣವು ಅವನ ನಕಾರಾರ್ಥಕದ ಉದ್ಯೋಗಸಂಪೂರ್ತಿ ಹ್ಯಾಗೊ, (ಸಮ ನೋಡು **೨೨೧.**), ಹಾಗೆಯೆ ಉತ್ಥಾನವು ಅವನ ಸ್ಥಾಪಕಾರ್ಥಕ ಉದ್ಯೋಗಸಂಪೂರ್ತಿಯಾಗಿರುತ್ತದೆ. ಅವನ ಮರಣವು ಮನುಷ್ಯಸಂತತಿಯ ಪಾಪದ ಸಾಲ ಶಿಕ್ಷೆಗಳ ಸಂದಾಯವಾಗಿತ್ತು. — ಉತ್ಥಾನವು ಹೊಸ ಜೀವದ ಸಾಧಿಸೋಣವೂ ಮುಂದಿಡೋಣವೂ ಆಗಿರುತ್ತದೆ. ಹ್ಯಾಗೆ ಹೃದಯದಿಂದ ಅದರಲ್ಲಿ ಹೊಸತಾಗಿ ಸಿದ್ಧವಾದ ಜೀವ ರಕ್ತವು ಶರೀರದ ಸಮಸ್ತ ಅಂಗಗಳಲ್ಲಿ ಅವುಗಳನ್ನು ಹೊಸತಾಗಿ ಬದುಕಿಸುವಂಥಾದ್ದಾಗಿ ಹರಿಯುತ್ತದೊ, ಹಾಗೆಯೆ ಆ ಹೊಸ ಜೀವವು ಅವನಿಂದ ನವೀಕರಿಸುವಂಥಾದ್ದಾಗಿಯೂ ಶುದ್ಧೀಕರಿಸುವಂಥಾದ್ದಾಗಿಯೂ ಅವನ ಅನ್ಯೋನ್ಯದಲ್ಲಿ ಶೇರುವ ಸಮಸ್ತ ಮನುಷ್ಯಸಂತತಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಹರಿಯುತ್ತದೆ. ಅವನ ಮರಣದ ಪುಣ್ಯವು ನಮ್ಮನ್ನು ನೀತಿವಂತರಾಗ ಮಾಡುತ್ತದೆ. (**೨೬೫.**) ಅವನ ಉತ್ಥಾನದ ಬಲವು ನಮ್ಮನ್ನು ಪರಿಶುದ್ಧ ಮಾಡುತ್ತದೆ, (**೨೮೧.**) ಮತ್ತು ಅದೆ ಸಮಯದಲ್ಲಿ ಮುಂದಿನ ನಮ್ಮ ಸ್ವಂತ ಉತ್ಥಾನದ ನಿಶ್ಚಯತ್ವವನ್ನು ನಮಗೆ ಸ್ಥಿರ ಪಡಿಸುತ್ತದೆ. (**೩೦೦.**)

"ಅವನು ನಮ್ಮ ಅಕ್ರಮುಗಳಿಗೋಸ್ಕರ ಒಪ್ಪಿಸಲ್ಪಟ್ಟು, ನಮ್ಮ ನೀತಿನಿರ್ಣಯಕ್ಕೋಸ್ಕರ ಎಬ್ಬಿಸಲ್ಪಟ್ಟನು." (ರೋಮಾ. ೪, ೨೫.) "ಶತ್ರುಗಳಾಗಿದ್ದು, ಅವನ ಮಗನ ಮರಣದ ಮುಖಾಂತರ ದೇವರಿಗೆ ಅನ್ಯೋನ್ಯ ಮಾಡಲ್ಪಟ್ಟಿದ್ದರೆ, ಬಹು ಹೆಚ್ಚಾಗಿ ಅನ್ಯೋನ್ಯ ಮಾಡಲ್ಪಟ್ಟು, ಅವನ ಜೀವದಿಂದ ರಕ್ಷಿಸಲ್ಪಡುವೆವು." (ರೋಮಾ. ೫, ೧೦.) "ಮರಣವನ್ನು ಲಯ ಮಾಡಿ, ಸುವಾರ್ತೆಯಿಂದ ಜೀವವನ್ನೂ ನಿರ್ಲಯವನ್ನೂ ಬೆಳಕಿಗೆ ತಂದನು." (೨ ತಿಮೊ. ೧, ೧೦.)

ಪರಿಶಿ. ಕ್ರಿಸ್ತನಿಂದ ಈ ಹೊಸ ಜೀವವು ನಮ್ಮಲ್ಲಿ ಹರಿಯುವದಕ್ಕೆ, ಪ್ರಸಾದಗಳೂ ದೇವರ ವಾಕ್ಯವೂ ಕಾಲಿವೆಗಳಾಗಿರುತ್ತವೆ. (**೩೦೮.**) ಇತ್ಯಾದಿ.

**೨೪೯.** "ಪರಲೋಕಕ್ಕೆ ಏರಿ ಹೋಗಿ" — ದಿವಾರೋಹಣವು ಅವನ ದಿವ್ಯ ಸ್ವಾಮಿತ್ವದ ಪುನಃ ಸ್ವೀಕಾರವೂ ನಿತ್ಯವಾದ ಲೋಕಪರವಾದ ಇರುವಿಕೆಯ ರೂಪಕ್ಕೆ ಪುನರ್ಗಮನವೂ ಆಗಿರುತ್ತದೆ. ಇದಕ್ಕೆ ಆಗಲೆ ಅವನ ಮನುಷ್ಯಸ್ವಭಾವವು ಒಡ ಎತ್ತಲ್ಪಟ್ಟಿತು. (**೨೪೫.**) ದೇವರು ಎಲ್ಲಾ ಪ್ರಕೃತಿವಸ್ತುವಿಗೆ ಮೇಲಾದ ಅತ್ತಕಡೆಯವನೂ ಎಲ್ಲಾ ಪ್ರಕೃತಿಯನ್ನು ತುಂಬಿಸುತ್ತಾ ಧರಿಸುತ್ತಾ ಇರುವ ಇತ್ತಕಡೆಯವನೂ ಆಗಿದ್ದಾನೆ. (**೧೬೩.**) ಆದಕಾರಣ ದಿವಾರೋಹಣವು ಒಂದು ಕಡೆಯಲ್ಲಿ ಹೋಗೋಣವೂ ಒಂದು ಕಡೆಯಲ್ಲಿ ಬರೋಣವೂ ಆಗಿರುತ್ತದೆ. ಆದ್ದರಿಂದ ಕ್ರಿಸ್ತನು ಸಮಸ್ತ ನಿರ್ಮಿತಕ್ಕೆ ಮೇಲಾದನು. ಇದರಿಂದ ಎಲ್ಲಾ ತುಂಬಿಸಿ ಎಲ್ಲಾ ವ್ಯಾಪಿಸುತ್ತಾನೆ.

೧) "ಇಗೋ ನಾನು ಲೋಕಾಂತದ ವರಿಗೂ ಎಲ್ಲಾ ದಿವಸಗಳಲ್ಲಿ, ನಿಮ್ಮ ಸಂಗಡ ಇದ್ದೇನೆ." (ಮತ್ತಾ. ೨೮, ೨೦.) (**೨೨೫.**) "ಇಬ್ಬರಾದರೂ, ಮೂವರಾದರೂ," ಇತ್ಯಾದಿ. (ಮತ್ತಾ. ೧೮, ೨೦.) (**೨೨೫.**)

**೨೫೦.** "ದೇವರ ಬಲಪಾರ್ಶ್ವದಲ್ಲಿ ಕ್ರಿಸ್ತನು ಕೂತುಕೊಳ್ಳುವದಂದರೆ೧)" ಕ್ರಿಸ್ತನು ದೇವಮನುಷ್ಯನಾಗಿ ದಿವಾರೋಹಣದಿಂದ ಶೇರಿದ ಸ್ಥಿತಿಕರಣಿಗಳಿಗೆ ಸಾಮ್ಯವಾಗಿರುತ್ತದೆ. ಹಾಗಾದರೆ ಅದರಿಂದ ಭೂಸಂಬಂಧವಾದ ಕೆಲಸವು ಮುಮ್ಮಡಿಯಾದ ಉದ್ಯೋಗದಿಂದ ಸ್ವರ್ಗೀಯವಾಗಿಯೂ, ದಿವ್ಯ ಬಲವುಳ್ಳದ್ದಾಗಿಯೂ ಮುಂದೆ ಮುಂದೆ ಬಂದು ಸಂಪೂರ್ಣವಾಗುತ್ತದೆಂಬದನ್ನು ಹೇಳಿದ ಹಾಗಾಯಿತು. (**೨೩೨.** ಪರಿಶಿ. **೨೩೪. ೨೩೫.**)

೧) ಕೀರ್ತ. ೧೧೦, ೧—೩. ಮತ್ತಾ. ೨೬, ೬೪. ಅ. ಕ್ರಿ. ೭, ೫೫. ಎಫೆ. ೧, ೨೦. ಇತ್ಯಾದಿ.

**೨೫೧.** "ಅಲ್ಲಿಂದ ಜೀವಿತರನ್ನೂ ಸತ್ತವರನ್ನೂ ನ್ಯಾಯತೀರಿಸ ತಿರಿಗಿ ಬರುವನು" ಕ್ರಿಸ್ತನ ಆಗಮನವು ಮುಖ್ಯವಾಗಿ ಮನುಷ್ಯಪುತ್ರನ ಆಗಮನವೆಂಬದಾಗಿ ಹೇಳಿಯದೆ. (ಉದಾ: ಮತ್ತಾ. ೧೬, ೨೭. ೨೪, ೪೪. ೨೫, ೧೩. ೩೧. ೨೬, ೪೪. ಇತ್ಯಾದಿ ಸ್ಥಳಗಳು.) ಯಾಕಂದರೆ ಕರ್ತನು ಮನುಷ್ಯನಾಗಿ ವಿಮೋಚನಾ ಕಾರ್ಯವನ್ನು ತೀರಿಸಿದ ಪ್ರಕಾರ, ಮನುಷ್ಯನಾಗಿಯೆ ಅದನ್ನು ಸಂಪೂರ್ಣ ಮಾಡಿ, ಮಹಿಮಾನವಾದ ಮಹತ್ವದಲ್ಲಿ ಶೇರಿದ ಮನುಷ್ಯತ್ವದ ಪೂರ್ಣ ಮಹಿಮೆ ಸ್ವಾಮಿತ್ವಗಳಲ್ಲಿ ದೃಶ್ಯವಾಗಿ ಭೂಮಿಯಲ್ಲಿ ಕಾಣಿಸಿ ಕೊಳ್ಳುವನು. — ಮತ್ತು ಬರುವಾಗ್ಯೆ ಅಕಸ್ಮಾತ್ತಾಗಿ, ನಿರೀಕ್ಷಿಸದೆ ಇದ್ದಾಗ, ಕಳ್ಳನು ರಾತ್ರಿಯಲ್ಲಿ ಬರುವ ಪ್ರಕಾರವೂ (೧ ಥೆಸ್ಸ. ೫, ೨.) ಮೂಡಣದಿಂದ ಪಡುವಲು ಪರಿಯಂತ ಪ್ರಕಾಶಿಸುವ ಮಿಂಚಿನ ಹಾಗೆಯೂ (ಮತ್ತಾ. ೨೪, ೨೭.) ಆಕಾಶದ ಮೇಘಗಳಲ್ಲಿ ಪ್ರಭೆಯುಳ್ಳವನಾಗಿಯೂ ಮಹಿಮೆಯುಳ್ಳವನಾಗಿಯೂ ದೇವರ ದೂತರ ಸಂಗಡ ಬರುವನು (ಮತ್ತಾ. ೧೬, ೨೭. ೨೪, ೩೦. ೩೧. ಅ. ಕ್ರಿ. ೧, ೧೧. ೧ ಥೆಸ್ಸ. ೪, ೧೬.) ಕ್ರಿಸ್ತನ ಈ ಕಡೇ ಆಗಮನದ ಪ್ರಯೋಜನವು ಕಡೇ ನ್ಯಾಯತೀರ್ಪಾಗಿರುತ್ತದೆ. ಅದರಿಂದ ಪರಲೋಕವೂ ಭೂಲೋಕವೂ, ದೂತರೂ೧) ಮನುಷ್ಯರೂ, ಕಡೇ ನಿತ್ಯ ಬಾಳುವ ಸಂಪೂರ್ತಿಗೆ, ಆನಂದಕ್ಕಾಗಲಿ ಶಿಕ್ಷೆನಿರ್ಣಯಕ್ಕಾಗಲಿ, ವೈಯಲ್ಪಡುವರು. ಕ್ರಿಸ್ತನ ಸೇವಕರೂ ದೂತರೂ ಈ ತೀರ್ಪಿನಲ್ಲಿ ಯಾರಂದರೆ, (ಒಳ್ಳೆ) ದೂತರು೨). ಅವನ ಸಹಾಯಕರೂ ಸಹವಿಚಾರಕರೂ ಯಾರಂದರೆ: ಅಪೊಸ್ತಲರೂ ಒಟ್ಟಾರೆ ಪರಿಶುದ್ಧರೂ೩). (ಸಮ ನೋಡು **೨೯೬.** ಇತ್ಯಾದಿ.)

೧) "ಅವರನ್ನು ಮೋಸಗೊಳಿಸಿದ ಪಿಶಾಚನು, ಮೃಗವೂ ಸುಳ್ಳು ಪ್ರವಾದಿಯೂ ಇರುವ, ಬೆಂಕಿ ಗಂಧಕಗಳ ಕೆರೆಯಲ್ಲಿ ಹಾಕಲ್ಪಟ್ಟನು." (ಪ್ರಕ. ೨೦, ೧೦.) (**೧೯೫.**) "ದೂತರಿಗೆ ನ್ಯಾಯತೀರಿಸುವೆವೆಂದು ಅರಿಯಿರಾ?" (೧ ಕೊರಿ. ೬, ೩.) (ಯೂದ. ೬.)

೨) "ದೂತರು ಹೊರಟು ಬಂದು, ನೀತಿವಂತರ ಮಧ್ಯದಿಂದ ದುಷ್ಟರನ್ನು ಬೇರೆ ಮಾಡಿ, ಅವರನ್ನು ಬೆಂಕಿಯ ಗುಂಡದಲ್ಲಿ ಹಾಕುವರು. ಅಲ್ಲಿ ಅಳುವಿಕೆಯೂ, ಹಲ್ಲು ಕಡಿಯುವಿಕೆಯೂ, ಇರುವವು." (ಮತ್ತಾ. ೧೩, ೪೯. ೫೦.)

೩) "ನೀವು ಸಹಾ ಹನ್ನೆರಡು ಸಿಂಹಾಸನಗಳ ಮೇಲೆ ಕೂತು ಕೊಂಡು, ಇಸ್ರಾಯೇಲಿನ ಹನ್ನೆರಡು ಕುಲಗಳಿಗೆ ನ್ಯಾಯತೀರಿಸುವಿರಿ." (ಮತ್ತಾ. ೧೯, ೨೮.) "ಪರಿಶುದ್ಧರು ಲೋಕಕ್ಕೆ ನ್ಯಾಯತೀರಿಸುವರೆಂದು ಅರಿಯಿರಾ?" (೧ ಕೊರಿ. ೬, ೨.)

**೨೫೭.** ಇದಾದಾಗ, ವಿಮೋಚಕನ ಮುಮ್ಮಡಿಯಾದ ಮೆಸ್ಸೀಯ ಉದ್ಯೋಗವು ಸಂಪೂರ್ಣವಾಯಿತು,ತೀರಿತು[೧]. ಹ್ಯಾಗಂದರೆ ಆಗ್ಯೆ ಬೋಧನೆ ಪ್ರಕಾಶೀಕರಣ ಅವಶ್ಯವಾಗಿರುವವರೂ ಅವುಗಳಿಗೆ ತಕ್ಕವರಾಗಿರುವವರೂ ಇರರು; ಶಾಂತಿ ಹೊಂದಲಾಗುವ ಪಾಪಿಗಳು ಇರರು. ಕಾಪಾಡಲ್ಪಡ ಬೇಕಾದ ಸ್ನೇಹಿತರಿಲ್ಲಾ; ಜೈಸಲ್ಪಡ ತಕ್ಕ ಶತ್ರುಗಳಿಲ್ಲಾ.

೧) "ಆ ಮೇಲೆ ಅಂತ್ಯವು—ಅವನು ಎಲ್ಲಾ ಧೊರೆತನವನ್ನೂ, ಎಲ್ಲಾ ಅಧಿಕಾರ ಬಲಗಳನ್ನೂ ತೆಗೆದು ಹಾಕಿ, ತಂದೆಯಾದ ದೇವರಿಗೆ ರಾಜ್ಯವನ್ನು ಒಪ್ಪಿಸಿದಾಗಲೇ. ಯಾಕಂದರೆ ಎಲ್ಲಾ ಶತ್ರುಗಳನ್ನು ಅವನ ಪಾದಗಳ ಕೆಳಗೆ ಇಟ್ಟಿರುವ ಮಟ್ಟಿಗೂ, ಅವನು ರಾಜ್ಯವಾಳ ಬೇಕು. ಮರಣವು ಕಡೇ ಶತ್ರುವಾಗಿ ಲಯ ಮಾಡಲ್ಪಡುವದು. ಯಾಕಂದರೆ ಎಲ್ಲವುಗಳನ್ನು ಅವನ ಪಾದಗಳ ಕೆಳಗೆ ಇಟ್ಟಿದ್ದಾನೆ. ಆದರೆ ಎಲ್ಲವುಗಳು ಕೆಳಗೆ ಇಟ್ಟವೆ ಎಂದು ಹೇಳುವಾಗ, ಎಲ್ಲವುಗಳನ್ನು ಅವನ ಕೆಳಗೆ ಇಟ್ಟವನು ಹೊರ್ತು ಎಂಬುವದು ತೋರುತ್ತದೆ. ಮತ್ತು ಎಲ್ಲವುಗಳು ಅವನ ಕೆಳಗಾದಾಗ, ದೇವರು ಎಲ್ಲವುಗಳಲ್ಲಿ ಎಲ್ಲಾ ಆಗುವ ಹಾಗೆ, ಎಲ್ಲವುಗಳನ್ನು ಕೆಳಗಾಗ ಮಾಡಿದವನಿಗೆ ಮಗನು ತಾನೆ ಕೆಳಗಾಗುವನು." (೧ ಕೊರಿ. ೧೫, ೨೪—೨೮.)

## ಖ.) ವಿಮೋಚನಾ ಕಾರ್ಯದ ಫಲ.

**೨೫೮.** ವಿಮೋಚನಾ ಕಾರ್ಯದ ಫಲಯಾವದಂದರೆ: ಕ್ರಿಸ್ತನು ನಮ್ಮನ್ನು ಸಮಸ್ತ ಪಾಪಗಳೊಳಗಿಂದ ಸಂಪೂರ್ಣ ನೀತಿ ಪರಿಶುದ್ಧತ್ವಗಳಿಗೋಸ್ಕರವೂ, ಮರಣದೊಳಗಿಂದ ನಿತ್ಯಜೀವಕ್ಕೋಸ್ಕರವೂ, ಪಿಶಾಚನ ಅಧಿಕಾರದೊಳಗಿಂದ ದೇವರ ಸಂಗಡ ಅನ್ಯೋ

ನ್ಯಕ್ಕೋಸ್ಕರವೂ, ಆತನ ಸಮಸ್ತ ಮಹಿಮೆ ಅಧಿಕಾರಗಳಲ್ಲಿ ಪಾಲು ಹೊಂದುವದಕ್ಕೋಸ್ಕರವೂ ವಿಮೋಚಿಸಿ, ಗೆದ್ದು, ಪಡ ಕೊಂಡಿದ್ಧಾನೆ. ಇದನ್ನೆಲ್ಲಾ ನಾವು ಈ ಜೀವದಲ್ಲಿ ಅಪೂರ್ಣವಾಗಿ ಮಾತ್ರವೆ, ಅಂದರೆ, ವಿಶ್ವಾಸದಲ್ಲಿಯೂ (**೩೧೨.**) ನಿರೀಕ್ಷೆಯಲ್ಲಿಯೂ, ಅನುಭವಿಸುತ್ತೇವೆ. ಆದರೆ ಅಲ್ಲಿ ಸಂಪೂರ್ಣವಾಗಿಯೂ ದೃಶ್ಯವಾಗಿಯೂ ಪಡ ಕೊಳ್ಳುವೆವು.

"ಇವನು (ಕ್ರಿಸ್ತ ಯೇಸುವು) ದೇವರಿಂದ ನಮಗೆ ಜ್ಞಾನವಾಗಿಯೂ, ನೀತಿಯಾಗಿಯೂ, ಪರಿಶುದ್ಧವಾಗಿಯೂ, ವಿಮೋಚನೆಯಾಗಿಯೂ ಮಾಡಲ್ಪಟ್ಟಿದ್ಧಾನೆ." (೧ ಕೊರಿ. ೧, ೩೦.)

ಪರಿಶಿ. ಅವನ ಬೋಧನೆಯಿಂದ ಜ್ಞಾನವಾಗಿ (**೨೩೧.**), ಅವನ ಶಾಂತಕರ ಮರಣದಿಂದ ನೀತಿಯಾಗಿ (**೨೩೩.**), ಜೀವಮುಂದಿಡುವ ಅವನ ಉತ್ಥಾನದಿಂದ ಪರಿಶುದ್ಧೀಕರಣವಾಗಿ (**೨೪೮.**), ಸಮಸ್ತವನ್ನು ಸಂಪೂರ್ಣ ಮಾಡುವ ಅವನ ಪುನರಾಗಮನದಿಂದ (ಸಂಪೂರ್ಣವಾದ ವಿಮೋಚನೆಯಾಗಿ (**೨೫೧.**) ಮಾಡಲ್ಪಟ್ಟಿದ್ಧಾನೆ.

**೨೫೪.** ಕ್ರಿಸ್ತನು ನಮ್ಮನ್ನು "ಎಲ್ಲಾ ಪಾಪಗಳೊಳಗಿಂದ" ವಿಮೋಚಿಸಿದ್ಧಾನೆ (ಸಮ ನೋಡು **೨೦೦.**) ಅಂದರೆ, ನಾವು ಮಾಡಿದ ಪಾಪಗಳು ಅವನ ಶಾಂತಿಕರ ಮರಣದ ಪುಣ್ಯಕ್ಕಾಗಿ ಕ್ಷಮಿಸಲ್ಪಡಲಾಗಿ, ಪಾಪದ ಶಿಕ್ಷೆಗಳಿಂದಲೂ[೧] (ನೀತಿ) — ಆತನು ತನ್ನ ಉತ್ಥಾನದಿಂದ ಬೆಳಕಿಗೆ ತಂದಂಥಾ (**೨೪೮.**) ನಮಗೆ ಕೊಡುವಂಥಾ ಜೀವದ ಬಲದಿಂದ ಪಾಪಕ್ಕೆ ನಾವು ಎದುರು ನಿಲ್ಲುವದಕ್ಕೆ ಶಕ್ತರಾಗುವ ಹಾಗೆ[೨] ಪಾಪದ ಅಧಿಕಾರದಿಂದಲೂ ನಮ್ಮನ್ನು ವಿಮೋಚಿಸಿದನು (ಪರಿಶುದ್ಧತ್ವ). — ಈ ಪ್ರಕಾರ ನಾವು ಅವನ ಹೊರ್ತು ಮಾಡಿ ಆದ ಪಾಪಗಳಿಂದಲೂ (ಹಾಗಂದರೆ ಶಿಕ್ಷೆಯಿಂದ) ನಾವು ಅವನ ಹೊರ್ತು ಇನ್ನೂ ಮಾಡ ಬಹುದಾಗಿದ್ದ ಪಾಪಗಳಿಂದಲೂ (ಅಂದರೆ ಪಾಪದ ಅಧಿಕಾರದಿಂದ) ನಮ್ಮನ್ನು ವಿಮೋಚಿಸಿದನು.

೧) "ಇವನಲ್ಲಿ ಅವನ ರಕ್ತದಿಂದಾಗುವ ವಿಮೋಚನೆಯಾದ ಪಾಪಗಳ ಪರಿಹಾರವು ನಮಗುಂಟು." (ಕೊಲೊ. ೧, ೧೪.)

೨) "ಯಾಕಂದರೆ ಪಾಪವು ನಿಮ್ಮನ್ನು ಆಳುವದಿಲ್ಲ; ಯಾಕಂದರೆ ನ್ಯಾಯಪ್ರಮಾಣಕ್ಕೊಳಗಾಗಿರದೆ, ಕೃಪೆಗೊಳಗಾಗಿದ್ಧೀರಿ." (ರೋಮ. ೬, ೧೪.)

**೨೫೫.** ಇದಲ್ಲದೆ ಕ್ರಿಸ್ತನು "ಮರಣದಿಂದ" ತಾತ್ಕಾಲಿಕ ಹ್ಯಾಗೊ ಹಾಗೆಯೆ ನಿತ್ಯವಾದ, ಶರೀರದ ಹ್ಯಾಗೊ ಹಾಗೆಯೆ ಆತ್ಮದ, ಮರಣದಿಂದ ನಮ್ಮನ್ನು ವಿಮೋಚಿಸಿದ್ಧಾ

ನೆ. (**೨೦೧.**) ಶರೀರದ ಮರಣವು ನಮ್ಮ ತಗ್ಗಿಸುವಿಕೆಗೋಸ್ಕರವೂ ದಂಡನೆಗೋಸ್ಕರವೂ ಇನ್ನೂ ಉಳಿದದೆ. ಆದರೂ ಇಂಥಾ ಕೆಟ್ಟ ಶರೀರದಿಂದ ನಿತ್ಯಜೀವದೊಳಗೆ ಹೋಗಲಾರೆವಾದ್ದರಿಂದ[೧], ರಕ್ಷಣೆಗೋಸ್ಕರ ಸಹಾ. ಆದರೂ ಕ್ರಿಸ್ತನು ಅದರೊಳಗಿಂದ ನಮ್ಮನ್ನು ವಿಮೋಚಿಸಿದ್ದಾನೆ. ಹ್ಯಾಗಂದರೆ ಅವನ ಹೊರ್ತಾಗಿ ಶರೀರವು ಪ್ರಾಣದಿಂದ ಒಂದು ಸಾರಿ ಬೇರೆ ಆದ ಮೇಲೆ, ಅದು ಎಂದೆಂದಿಗೂ ಬೇರೆಯಾಗಿಯೆ ಇರುತ್ತಿತ್ತು. ಆದರೆ ಈಗ ಆತನು ತನ್ನ ಉತ್ಥಾನದ ಬಲದಿಂದ ನಮ್ಮ ಶರೀರವನ್ನು ಕಡೇ ದಿನದಲ್ಲಿ ಎಬ್ಬಿಸಿ (**೩೦೦.**) ಪ್ರಾಣಕ್ಕೆ ತಿರಿಗಿ ಕೂಡಿಸುವನು[೨]. ಆದರೆ ಈ ಮರಣದ ಕಾರಣವಾಗಿರುವ ಪಾಪವನ್ನು ತೆಗೆದು ಬಿಟ್ಟಿದ್ದಾನಾದ್ದರಿಂದ, ಆತ್ಮಿಕ[೩] ನಿತ್ಯ[೪] ಮರಣದಿಂದ ನಮ್ಮನ್ನು ವಿಮೋಚಿಸಿದ್ದಾನೆ.

೧) "ರಕ್ತ ಮಾಂಸಗಳು ದೇವರ ರಾಜ್ಯವನ್ನು ಸ್ವತಂತ್ರಿಸಿ ಕೊಳ್ಳಲಾರವು; ಮತ್ತು ಲಯವು ನಿರ್ಲಯವನ್ನು ಸ್ವತಂತ್ರಿಸಿ ಕೊಳ್ಳದು." (೧ ಕೊರಿ ೧೫, ೫೦.)

೨) "ಆದರೆ ಈಗ ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟು, ನಿದ್ದೆ ಹೋದವರಲ್ಲಿ ಪ್ರಥಮ ಫಲವಾದನು. ಯಾಕಂದರೆ ಮನುಷ್ಯನಿಂದ ಮರಣವು ಬಂದ ಕಾರಣ, ಸತ್ತವರ ಪುನರುತ್ಥಾನವು ಮನುಷ್ಯನಿಂದಲೇ. ಹ್ಯಾಗಂದರೆ, ಯಾವ ಪ್ರಕಾರ ಆದಮನಲ್ಲಿ ಎಲ್ಲರು ಸಾಯುತ್ತಾರೋ, ಅದೇ ಪ್ರಕಾರ ಕ್ರಿಸ್ತನಲ್ಲಿ ಎಲ್ಲರು ಬದುಕಿಸಲ್ಪಡುವರು." (೧ ಕೊರಿ. ೧೫, ೨೦—೨೩.) "ಮರಣವು ಜಯದಲ್ಲಿ ನುಂಗಲ್ಪಟ್ಟದೆ. ಮರಣವೇ, ನಿನ್ನ ಕೊಂಡಿಯು ಎಲ್ಲಿ? ಪಾತಾಳವೇ, ನಿನ್ನ ಜಯವು ಎಲ್ಲಿ? ಮರಣದ ಕೊಂಡಿಯು ಪಾಪವೇ." (೧ ಕೊರಿ. ೧೫, ೫೫.)

೩) "ಅಕ್ರಮಗಳಲ್ಲಿ ಸತ್ತವರಾಗಿದ್ದ ನಮ್ಮನ್ನು ಕ್ರಿಸ್ತನ ಸಂಗಡ ಬದುಕಿಸಿದ್ದಾನೆ— ಕೃಪೆಯಿಂದಲೇ ರಕ್ಷಿಸಲ್ಪಟ್ಟಿದ್ದೀರಿ— ಮತ್ತು ಕ್ರಿಸ್ತ ಯೇಸುವಿನಲ್ಲಿ . . . ನಮ್ಮನ್ನು ಕೂಡ ಎಬ್ಬಿಸಿ, ಪರಲೋಕದವುಗಳಲ್ಲಿ ಕೂಡ ಕುಂಡ್ರಿಸಿದ್ದಾನೆ." (ಎಫೆ. ೨, ೫. ೬.)

೪) "ನಿಶ್ಚಯವಾಗಿ ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ಯಾವನಾದರೂ ನನ್ನ ವಾಕ್ಯವನ್ನು ಕೈಕೊಂಡರೆ, ಅವನು ಎಂದೆಂದಿಗೂ ಮರಣವನ್ನು ನೋಡುವದಿಲ್ಲ." (ಯೋಹಾ. ೮, ೫೧.) (ಯೋಹಾ. ೫, ೨೪.) "ಜಯಿಸುವವನು ಎರಡನೇ ಮರಣದಿಂದ ನಷ್ಟಪಡುವದಿಲ್ಲ." (ಪ್ರಕ. ೨, ೧೧.) (೨೦, ೧೪. ೨೧, ೮.)

**೨೫೬.** ಕಡೆಯಲ್ಲಿ ಕ್ರಿಸ್ತನು "ಪಿಶಾಚನ ಅಧಿಕಾರದೊಳಗಿಂದ" ವಿಮೋಚಿಸಿದ್ದಾನೆ. (ಸಮ ನೋಡು **೨೦೨.**) ಹೀಗಾಗಿ ಪಿಶಾಚನು ಇನ್ನು ಮುಂದೆ ನಮ್ಮ ಪಾಪಗಳಿಗೋಸ್ಕರ ನಮ್ಮ ಮೇಲೆ ದೂರು ಹೇಳಲಾಗುವದಿಲ್ಲ. — ಯಾಕಂದರೆ ಅವುಗಳ ಶಾಂತಿ ಆಯಿತು[೧]. ಹಾಗೆಯೆ ನಮ್ಮನ್ನು ತನ್ನ ಚಿತ್ತದೊಳಗೆ ದಾಸರಾಗ ಮಾಡುವದಕ್ಕೆ ಆಗು

ವಬಿಲ್ಲಾ. ಯಾಕಂದರೆ ಕ್ರಿಸ್ತನು ನಮಗೋಸ್ಕರವೂ ನಮ್ಮ ಸಂಗಡಲೂ ಹೋರಾಡುತ್ತಾನೆ[೨] (ನೀತಿ ಮತ್ತು ಪರಿಶುದ್ಧತ್ವ).

೧) "ಈಗ ರಕ್ಷಣೆಯೂ, ಬಲವೂ, ನಮ್ಮ ದೇವರ ರಾಜ್ಯವೂ, ಅವನ ಕ್ರಿಸ್ತನ ಅಧಿಕಾರವೂ, ಉಂಟಾದವು; ಯಾಕಂದರೆ ನಮ್ಮ ಸಹೋದರರ ಮೇಲೆ ದೇವರ ಮುಂದೆ ರಾತ್ರಿ ಹಗಲು ಚಾಡಿ ಹೇಳುವಂಥ ನಮ್ಮ ಸಹೋದರರ ಚಾಡಿಗಾರನು ಕೆಳಗೆ ಹಾಕಲ್ಪಟ್ಟಿದ್ದಾನೆ." (ಪ್ರಕ. ೧೨, ೧೦.) "ದೇವರು ಆದು ಕೊಂಡವರ ಮೇಲೆ ತಪ್ಪು ಹೊರಿಸುವವನ್ಯಾರು? ನೀತಿನಿರ್ಣಯಿಸುವವನು ದೇವರೇ. ಆಜ್ಞೆನಿರ್ಣಯಿಸುವವನ್ಯಾರು? ಸತ್ತವನು, ಅದಲ್ಲದೆ ಎದ್ದವನು, ದೇವರ ಬಲ ಪಾರ್ಶ್ವದಲ್ಲಿ ಇರುವವನು, ನಮಗೋಸ್ಕರ ವಿಜ್ಞಾಪನೆ ಮಾಡುವವನು, ಕ್ರಿಸ್ತನೆ." (ರೋಮಾ. ೮, ೩೩. ೩೪.)

೨) "ಪಿಶಾಚನ ಕ್ರಿಯೆಗಳನ್ನು ಲಯ ಮಾಡುವದಕ್ಕೋಸ್ಕರವೇ ದೇವರ ಮಗನು ಪ್ರತ್ಯಕ್ಷವಾದನು." (೧ ಯೋಹಾ. ೩, ೮.)

**೨೫೭.** ಆದರೆ ಪಿಶಾಚನು ದಿನಗಳ ಕಡೆಯಲ್ಲಿ ತನ್ನ ದೊಡ್ಡ ವ್ಯಾಜ್ಯವನ್ನು ಪೂರ್ಣವಾಗಿ ಕಳಕೊಂಡು ಎಲ್ಲಾ ನ್ಯಾಯ ತೀರ್ಪಿಗೆ ಹಣ್ಣಾಗುವ ಪರ್ಯಂತ, ಪಿಶಾಚನ ಶೋಧನೆಗಳು ಉಳಿಯುತ್ತವೆ[೧]. ಆದರೆ ಈ ಶೋಧನೆಗಳು ಸಹಾ, ನಾವು ಎಚ್ಚತ್ತು ಪ್ರಾರ್ಥಿಸುತ್ತಾ, ಕ್ರಿಸ್ತನು ನಮಗೆ ಯುದ್ಧಕ್ಕೂ ಜಯಕ್ಕೂ ಕೊಡುವ ಆಯುಧಗಳಲ್ಲಿ ಯಾವಾಗಲೂ ಸನ್ನದ್ಧರಾಗಿದ್ದರೆ, ನಮಗೇನೂ ಕೇಡು ಮಾಡಲಾರವು[೨].

೧) "ಮಿತಿಯಾಗಿರ್ರಿ; ಎಚ್ಚರಿಕೆಯಾಗಿರ್ರಿ; ಯಾಕಂದರೆ ನಿಮ್ಮ ವಿರೋಧಿಯಾದ ಪಿಶಾಚನು ಗರ್ಜಿಸುವ ಸಿಂಹದ ಹಾಗೆ, ಯಾರನ್ನು ನುಂಗಿ ಬಿಡಲೆಂದು ಹುಡುಕುತ್ತಾ, ತಿರುಗುತ್ತಾನೆ. ವಿಶ್ವಾಸದಲ್ಲಿ ದೃಢವಾಗಿದ್ದು, ಅವನನ್ನು ಎದುರಿಸಿರಿ." (೧ ಪೇತ್ರ. ೫,೮. ೯.) "ರಕ್ತ ಮಾಂಸಕ್ಕೆ ವಿರೋಧವಾಗಿ ಅಲ್ಲ, ಧೊರೆತನಗಳಿಗೂ, ಅಧಿಕಾರಗಳಿಗೂ, ಈ ಯುಗದ ಅಂಧಕಾರದ ಲೋಕಾಧಿಪತಿಗಳಿಗೂ, ಆಕಾಶಗಳಲ್ಲಿರುವ ದುಷ್ಟವಾದ ಆತ್ಮಗಳಿಗೂ ವಿರೋಧವಾಗಿ, ನಮಗೆ ಹೋರಾಟ ಉಂಟು." (ಎಫೆ. ೬, ೧೨.)

೨) "ಪಿಶಾಚನನ್ನು ಎದುರಿಸಿರಿ; ಆಗ ನಿಮ್ಮ ಬಳಿಯಿಂದ ಓಡಿ ಹೋಗುವನು." (ಯಾಕೊ. ೪, ೭. ೮.) "ಕಡೆಯಲ್ಲಿ, ನನ್ನ ಸಹೋದರರೇ, ಕರ್ತನಲ್ಲಿಯೂ ಅವನ ಶಕ್ತಿಯ ತ್ರಾಣದಲ್ಲಿಯೂ ಬಲಗೊಳ್ಳಿರಿ. ನೀವು ಪಿಶಾಚನ ಉಪಾಯಗಳಿಗೆ ಎದುರು ನಿಲ್ಲ ಶಕ್ತರಾಗುವ ಹಾಗೆ, ದೇವರ ಸರ್ವಾಯುಧಗಳನ್ನು ಧರಿಸಿ ಕೊಳ್ಳಿರಿ." (ಎಫೆ. ೬, ೧೦. ೧೧.) "ಎಲ್ಲಾದರ ಮೇಲೆ ದುಷ್ಟನ ಉರಿಬಾಣಗಳನ್ನೆಲ್ಲಾ ಆರಿಸ ಶಕ್ಯಂಥ, ವಿಶ್ವಾಸದ ಗುರಾಣಿ

ಯನ್ನು ಹಿಡಿದು, ರಕ್ಷಣೆಯ ಶಿರಸ್ತ್ರಾಣವನ್ನೂ ದೇವರ ವಾಕ್ಯವಾಗಿರುವ ಆತ್ಮದ ಕತ್ತಿಯನ್ನೂ ತೆಗೆದು ಕೊಳ್ಳಿರಿ." (ಎಫೆ. ೬, ೧೬. ೧೭.)

ಪರಿಶಿ. ಮನುಷ್ಯನು ತನ್ನ ಪ್ರಾಣದ ರಕ್ಷಣೆಗೋಸ್ಕರ ಎಷ್ಟು ಮನೋನಿರ್ಧಾರದಿಂದ ಹೋರಾಡುತ್ತಾನೊ, ಅಷ್ಟಕ್ಕೆ ಹೆಚ್ಚಾಗಿಯೂ ಬಲವಾಗಿಯೂ ಪಿಶಾಚನ ಶೋಧನೆಗಳೂ ಪ್ರಯತ್ನಗಳೂ ರಕ್ಷಣೆಯ ಮಾರ್ಗದಿಂದ ಅವನನ್ನು ತೆಗಿಯ ನೋಡುವವು. ಆದರೆ ಎಲ್ಲಿ ಪಿಶಾಚನು ತನ್ನ ಅಧಿಕಾರಕ್ಕೆ ಬೆದರಿಕೆ ಕಂಟಕ ಇರುವದಿಲ್ಲವೆಂದು ಬಲ್ಲನೊ, ಅಲ್ಲಿ ಮನೋನಿರ್ಧಾರವಾದ ವಿಶೇಷ ಪ್ರಯತ್ನಗಳಿಗೆ ಅವನಿಗೆ ಕಾರಣ ಕಾಣುವದಿಲ್ಲ.

**೨೫೮.** ಕ್ರಿಸ್ತನು ನಮಗೋಸ್ಕರವೂ ನಮ್ಮಲ್ಲಿಯೂ ಮಾಡಿದ್ದೂ ಮಾಡಲಿಕ್ಕಿರುವದೂ ಎಲ್ಲಾ "ನಾವು ಆತನಿಗೆ ಸ್ವಕೀಯರಾಗಿ[೧], ಆತನು ಮರಣದಿಂದೆದ್ದು ಜೀವಿಸಿ ನಿತ್ಯ ಆಳುತ್ತಾನೆ[೨] ಹ್ಯಾಗೊ, ಹಾಗೆಯೆ ನಾವು ಸಹಾ ಅವನ ರಾಜ್ಯದಲ್ಲಿ ಅವನ ಕೆಳಗೆ ಜೀವಿಸಿ ನಿತ್ಯ ನೀತಿಯಲ್ಲಿಯೂ ನಿರ್ಮಲತ್ವದಲ್ಲಿಯೂ ಆನಂದದಲ್ಲಿಯೂ[೩] ಆತನನ್ನು ಸೇವಿಸುವದಕ್ಕೋಸ್ಕರ[೪]" ಸಂಭವಿಸುತ್ತದೆ. "ಇದು ಸತ್ಯವೇ ಸರಿ". (**೨೦೫.**)

೧) "ಬೆಲೆಯಿಂದ ಕೊಳ್ಳಲ್ಪಟ್ಟಿದ್ದೀರಿ; ಆದಕಾರಣ, ದೇವರವುಗಳಾಗಿರುವ ನಿಮ್ಮ ಶರೀರದಿಂದಲೂ ನಿಮ್ಮ ಆತ್ಮದಿಂದಲೂ ದೇವರನ್ನು ಮಹಿಮೆ ಪಡಿಸಿರಿ." (೧ ಕೊರಿ. ೬, ೨೦.)

೨) ಎಫೆ. ೨, ೫. ೬. ಸಮ ನೋಡು **೨೫೫,** ೩.

೩) "ಅವರೆಲ್ಲರು ಒಂದಾಗ ಬೇಕೆಂದೂ, ನೀನು ನನ್ನನ್ನು ಕಳುಹಿಸಿದಿ ಅಂತ ಲೋಕವು ನಂಬುವ ಹಾಗೆ, ತಂದೆಯಾದ ನೀನು ನನ್ನಲ್ಲಿಯೂ, ನಾನು ನಿನ್ನಲ್ಲಿಯೂ ಇರುವ ಪ್ರಕಾರ, ಅವರು ಸಹಾ ನಮ್ಮಲ್ಲಿ ಒಂದಾಗ ಬೇಕೆಂದೂ— ಬೇಡಿ ಕೊಳ್ಳುತ್ತೇನೆ. ಮತ್ತು ನಾವು ಒಂದಾಗಿರುವ ಪ್ರಕಾರ, ಅವರು ಒಂದಾಗಿರುವ ಹಾಗೆಯೂ, ನಾನು ಅವರಲ್ಲಿ, ನೀನು ನನ್ನಲ್ಲಿ ಇರಲಾಗಿ, ಅವರು ಒಂದಾಗಿ ಸಂಪೂರ್ಣ ಮಾಡಲ್ಪಟ್ಟಿರುವ ಹಾಗೆಯೂ, ನೀನು ನನ್ನನ್ನು ಕಳುಹಿಸಿದಿ ಎಂದೂ, ನನ್ನನ್ನು ಪ್ರೀತಿ ಮಾಡಿದ ಪ್ರಕಾರ ಅವರನ್ನು ಪ್ರೀತಿ ಮಾಡಿದಿ ಎಂದೂ ಲೋಕವು ತಿಳಿಯುವ ಹಾಗೆಯೂ, ನೀನು ನನಗೆ ಕೊಟ್ಟ ಮಹಿಮೆಯನ್ನು ನಾನು ಅವರಿಗೆ ಕೊಟ್ಟಿದ್ದೇನೆ. ತಂದೆಯೇ, ನೀನು ನನಗೆ ಕೊಟ್ಟವರು, ನೀನು ಜಗದುತ್ಪತ್ತಿಗೆ ಮುಂಚೆ ನನ್ನನ್ನು ಪ್ರೀತಿ ಮಾಡಿದ್ದರಿಂದ, ನನಗೆ ಕೊಟ್ಟ ನನ್ನ ಮಹಿಮೆಯನ್ನು ನೋಡುವ ಹಾಗೆ, ನಾನು ಇರುವಲ್ಲಿ ಅವರು ಸಹಾ ನನ್ನ ಸಂಗಡ ಇರ ಬೇಕೆಂದು ಇಚ್ಛೈಸುತ್ತೇನೆ." (ಯೋಹಾ. ೧೭, ೨೧—೨೪.) (ರೋಮಾ. ೮, ೧೭. ೨ ಪೇತ್ರ. ೧, ೩. ೪. ೧ ಯೋಹಾ. ೩, ೨.) (ಸಮ ನೋಡು **೨೦೫.**)

೪) "ಯಾಕಂದರೆ ಒಬ್ಬನು ಎಲ್ಲರಿಗೋಸ್ಕರ ಸತ್ತವನಾದರೆ, ಎಲ್ಲರು ಸತ್ತರು ಸರಿ; ಮತ್ತು ಬದುಕುವವರು ಇನ್ನೂ ತಮಗಲ್ಲ, ತಮಗೋಸ್ಕರ ಸತ್ತು ಎಬ್ಬಿಸಲ್ಪಟ್ಟವನಿಗೆ

ಬದುಕುವ ಹಾಗೆ, ಅವನು ಎಲ್ಲರಿಗೋಸ್ಕರ ಸತ್ತನು ಎಂದು ನಿರ್ಣಯಿಸುತ್ತೇವೆ." (೨ಕೊರಿ. ೫, ೧೪. ೧೫.) "ಹಾಗಾದರೆ, ಬದುಕಿದರೂ, ಸತ್ತರೂ, ಕರ್ತನವರಾಗಿದ್ದೇವೆ. ಯಾಕಂದರೆ, ಸತ್ತವರಿಗೂ ಬದುಕುವವರಿಗೂ ಕರ್ತನಾಗುವ ಹಾಗೆ, ಇದಕ್ಕೋಸ್ಕರ ಕ್ರಿಸ್ತನು ಸತ್ತು, ಎದ್ದು, ತಿರಿಗಿ ಬದುಕಿದನು." (ರೋಮಾ. ೧೪, ೮. ೯.)



### ೩ನೆ ಸೂತ್ರ.*

### ರಕ್ಷಣೆಯ ಸ್ವೀಕಾರ.

ನಾನು ಪರಿಶುದ್ಧಾತ್ಮದಲ್ಲಿಯೂ ಪರಿಶುದ್ಧ ಕ್ರೈಸ್ತ ಸಭೆಯನ್ನೂ ಪರಿಶುದ್ಧರ ಅನ್ಯೋನ್ಯವನ್ನೂ ಪಾಪಪರಿಹಾರವನ್ನೂ ಶರೀರದ ಉತ್ಥಾನವನ್ನೂ ನಿತ್ಯ ಜೀವವನ್ನೂ ನಂಬುತ್ತೇನೆ.

ಹಾಗಂದರೇನು?

ನಾನು ಸ್ವಂತ ಬುದ್ಧಿಯಿಂದಲೂ ಸ್ವಂತ ಬಲದಿಂದಲೂ ನನ್ನ ಕರ್ತನಾದ ಯೇಸು ಕ್ರಿಸ್ತನಲ್ಲಿ ನಂಬಲಿಕ್ಕೂ, ಆತನ ಬಳಿಗೆ ಹೋಗಲಿಕ್ಕೂ ಕೂಡದು. ಪರಿಶುದ್ಧಾತ್ಮವೆ ಸರ್ವ ಸಭೆಯನ್ನು ಭೂಮಿಯಲ್ಲಿ ಕರದು, ಕೂಡಿಸಿ, ಬೆಳಗಿಸಿ, ಶುದ್ಧ ಮಾಡಿ, ಯೇಸು ಕ್ರಿಸ್ತನ ಬಳಿಯಲ್ಲಿ ಸಮವಾದ ಒಂದೆ ವಿಶ್ವಾಸದಲ್ಲಿ ಕಾಪಾಡುತ್ತಾ ಇರುವ ಪ್ರಕಾರವೆ, ನನ್ನನ್ನು ಸಹಾ ಸುವಾರ್ತೆಯಿಂದ ಕರದು, ತನ್ನ ದಾನಗಳಿಂದ ಬೆಳಗಿಸಿ, ಸದ್ವಿಶ್ವಾಸದಿಂದ ಶುದ್ಧ ಮಾಡಿ, ಕಾಪಾಡಿದ್ದಾನೆ. ಆತನು ಈ ಕ್ರೈಸ್ತ ಸಭೆಯೊಳಗೆ ನನಗೂ ವಿಶ್ವಾಸಿಗಳೆಲ್ಲರಿಗೂ ಸಕಲ ಪಾಪಗಳನ್ನು ದಿನ ದಿನ ಐಶ್ವರ್ಯವಾಗಿ ಕ್ಷಮಿಸಿ, ಅಂತ್ಯ ದಿವಸದಲ್ಲಿ ನನ್ನನ್ನೂ ಸತ್ತವರೆಲ್ಲರನ್ನೂ ಎಬ್ಬಿಸಿ, ವಿಶ್ವಾಸಿಗಳೆಲ್ಲರ ಸಂಗಡ ಕ್ರಿಸ್ತನಲ್ಲಿ ನಿತ್ಯಜೀವವನ್ನು ನನಗೆ ಕೊಡುವನು. ಇದು ಸತ್ಯವೇ ಸರಿ.

---

*ನಿಕೈಯದ ವಿಶ್ವಾಸ ಪ್ರಮಾಣದಲ್ಲಿ ಹೀಗೆ ಉಂಟು. "ಕರ್ತನೂ ಬದುಕಿಸುವವನೂ ಆಗಿರುವಂಥಾ, ತಂದೆಯಿಂದಲೂ (ಮಗನಿಂದಲೂ) ಹೊರಡುವಂಥಾ, ತಂದೆಯ ಸಂಗಡಲೂ ಮಗನ ಸಂಗಡಲೂ ಆರಾಧಿಸಲ್ಪಟ್ಟು ಸನ್ಮಾನಿಸಲ್ಪಡುವಂಥಾ, ಪ್ರವಾದಿಗಳ ಮುಖಾಂತರ ಮಾತಾಡಿದಂಥಾ ಪರಿಶುದ್ಧಾತ್ಮನಲ್ಲಿಯೂ ನಂಬುತ್ತೇನೆ. ಒಂದೇ ಪರಿಶುದ್ಧ ಸರ್ವಸಾಧಾರಣವಾದ ಅಪೊಸ್ತೊಲಿಕ ಸಭೆಯನ್ನು ನಂಬುತ್ತೇನೆ. ಪಾಪಗಳ ಪರಿಹಾರಕ್ಕಾಗಿ ಒಂದೇ ಸ್ನಾನವನ್ನು ಅರಿಕೆ ಮಾಡಿ, ಸತ್ತವರ ಉತ್ಥಾನವನ್ನೂ ಪರಲೋಕದ ಜೀವವನ್ನೂ ನಿರೀಕ್ಷಿಸುತ್ತಾ ಇದ್ದೇನೆ. ಆಮೆನ್."

## ಅ.) ಪರಿಶುದ್ಧಾತ್ಮದ ಕರಣಿ.

**೨೫೯.** ಕ್ರಿಸ್ತನಲ್ಲಿ ಸಂಪೂರ್ಣವಾದ ವಿಮೋಚನೆಯಿಂದ ಒಬ್ಬೊಬ್ಬ ಮನುಷ್ಯನಿಗೆ "ಪಾಪದಿಂದಲೂ ಮರಣದಿಂದಲೂ ಪಿಶಾಚನಿಂದಲೂ" ಬಿಡುಗಡೆಯಾಗುವದಕ್ಕೂ "ನಿತ್ಯ ನೀತಿಯನ್ನೂ ಅಪರಾಧರಹಿತತ್ವವನ್ನೂ ಭಾಗ್ಯವನ್ನೂ" ಪಡಕೊಳ್ಳಲಿಕ್ಕೂ ಸಾಧ್ಯವಾಗುತ್ತದೆ. ಆದರೆ ನಾವು ಅವನ ಮರಣದ ಪುಣ್ಯದಿಂದ ನೀತಿವಂತರೂ, ಅವನ ಜೀವದ ಬಲದಿಂದ ಪರಿಶುದ್ಧರೂ, ಆಗುವ ಹಾಗೆ "ಅವನಲ್ಲಿ ನಂಬಿ, ಅವನ ಬಳಿಗೆ ಬಂದು" ಅವನ ಮರಣದ ಮತ್ತು ಜೀವದ ಅನ್ಯೋನ್ಯದಲ್ಲಿ ಅಂಗೀಕಾರವಾಗಿ ಒಳನೆಡಲ್ಪಡ ಬೇಕು.

**೨೬೦.** "ಅವನಲ್ಲಿ ನಂಬುವದೂ ಅವನ ಬಳಿಗೆ ಬರುವದೂ" ಸ್ವಂತ ಬುದ್ಧಿಯಿಂದ ಆಗುವದಿಲ್ಲ. ಯಾಕಂದರೆ ದಿವ್ಯ ಪ್ರಕಟಣೆಯೂ ಪ್ರಕಾಶೀಕರಣವೂ ನಮಗೆ ಶಿಕ್ಕದೆ ಇದ್ದರೆ, ಕ್ರೂಜಿಸಲ್ಪಟ್ಟು ಎದ್ದ ಕ್ರಿಸ್ತನು ನಮ್ಮ ಕರ್ತನೂ ರಕ್ಷಕನೂ ಆಗಿರುತ್ತಾನೆಂದು ತಿಳಕೊಳ್ಳಲಾರೆವು. ಇದು ಮನುಷ್ಯ ಬುದ್ಧಿಗೆ ಹುಚ್ಚುತನವೂ ಆತಂಕವೂ ಆಗಿರುತ್ತದೆ. (೧ ಕೊರಿ. ೧, ೧೮. ೨೩.)[೧] ಹಾಗೆಯೆ "ಸ್ವಂತ ಬಲದಿಂದಲೂ ಆಗುವದಿಲ್ಲಾ," ಯಾಕಂದರೆ ನಾವು ಸ್ವಭಾವದಿಂದ ಸತ್ತವರಾಗಿ, ಯಥಾರ್ಥ ಒಳ್ಳೇದಕ್ಕೆಲ್ಲಾ ಅಸಮರ್ಥರಾಗಿರುತ್ತೇವೆ[೨]. ಆದರೆ ಪರಿಶುದ್ಧಾತ್ಮದ ಪ್ರಕಾಶದಿಂದಲೂ ಬಲದಿಂದಲೂ ಅದಕ್ಕೆ ಶಕ್ತರಾಗುತ್ತೇವೆ[೩].

೧) "ತಂದೆಯಲ್ಲದೆ ಯಾವನೂ ಮಗನನ್ನು ಅರಿಯನು; ಮತ್ತು ಮಗನಲ್ಲದೆ, ಮಗನು ಯಾವನಿಗೆ ಪ್ರಕಟ ಮಾಡುವದಕ್ಕೆ ಮನಸ್ಸಾಗಿದ್ದಾನೋ, ಅವನಲ್ಲದೆ, ಯಾವನೂ ತಂದೆಯನ್ನು ಅರಿಯನು." (ಮತ್ತಾ. ೧೧, ೨೭.)

೨) "ನಮ್ಮಿಂದಲೇ ಎಂದು ಒಂದಾದರೂ ನೆನಸಿಕೊಳ್ಳ ನಮ್ಮಷ್ಟಕ್ಕೆ ನಾವೇ ಯೋಗ್ಯರಂತಲ್ಲ; ನಮ್ಮ ಯೋಗ್ಯತೆಯು ದೇವರಿಂದಲೇ." (೨ ಕೊರಿ. ೩, ೫.)

೩) "ಪರಿಶುದ್ಧಾತ್ಮದಿಂದಲ್ಲದೆ, ಯಾವನಾದರೂ ಯೇಸುವನ್ನು ಕರ್ತನೆಂದು ಹೇಳಲಾರನು." (೧ ಕೊರಿ. ೧೨, ೩.) "ಆದರೆ ಯಾವನಿಗಾದರೂ ಕ್ರಿಸ್ತನ ಆತ್ಮವು ಇಲ್ಲದಿದ್ದರೆ, ಅವನು ಕ್ರಿಸ್ತನವನಲ್ಲ." (ರೋಮಾ. ೮, ೯.) "ಅವನು ಕಳುಹಿಸಿದವನಲ್ಲಿ ನೀವು ವಿಶ್ವಾಸವಿಡುವದೇ ದೇವರ ಕ್ರಿಯೆ." (ಯೋಹಾ. ೬, ೨೯.) "ನನ್ನ ತಂದೆಯಿಂದ ಅವನಿಗೆ ಕೊಡಲ್ಪಟ್ಟಿದ್ದರೆ ಹೊರ್ತು, ಯಾವನೂ ನನ್ನ ಬಳಿಗೆ ಬರಲಾರನು." (ಯೋಹಾ. ೬, ೬೫.) "ಇಚ್ಛೈಸುವದನ್ನೂ ಯತ್ನೈಸುವದನ್ನೂ ತನ್ನ ಸುಯೋಚನೆಯ ಪ್ರಕಾರ ನಿಮ್ಮಲ್ಲಿ ಯತ್ನೈಸುವವನು ದೇವರೇ." (ಫಿಲಿ. ೨, ೧೩.)

**೨೬೧.** ಪರಿಶುದ್ಧಾತ್ಮದ ಕರಣಿಯು ಒಟ್ಟಾರೆ, (**೧೫೭.**) ತಂದೆಯ ಚಿತ್ತದ ಪ್ರಕಾರ ಎಲ್ಲಾ ಕಡೆಯಲ್ಲಿಯೂ ದಿವ್ಯ ಜೀವ ಆಶೀರ್ವಾದಗಳ ಬಲಗಳನ್ನು ಹಂಚಿ ಕೊಡುವದಾಗಿರುತ್ತದೆ. ಪರಿಶುದ್ಧಾತ್ಮವು ಈ ಕರಣಿಯನ್ನು ನಿರ್ಮಾಣಕಾರ್ಯದಲ್ಲಿಯೂ (**೧೭೧.**) ಪಾಲನ ಕಾರ್ಯದಲ್ಲಿಯೂ (**೧೮೮.**) ಮಾತ್ರವಲ್ಲಾ, ವಿಮೋಚನಾಕಾರ್ಯದಲ್ಲಿ ಸಹಾ ನಡಿಸುತ್ತದೆ. ಹಳೆ ಒಡಂಬಡಿಕೆಯ ಸಿದ್ಧ ಮಾಡುವ ಪಾಪಟಿಗೆಯಲ್ಲಿ, ಆತ್ಮದ ವಿಮೋಚನಾಕರಣಿ ಸಹಾ ಹಾಗೆಯೆ ಸಿದ್ಧ ಮಾಡುವಂಥಾದ್ದಾಗಿರ ಬೇಕಾಯಿತು. ಆದರೆ ಹೊಸ ಒಡಂಬಡಿಕೆಯಲ್ಲಿ ಕ್ರಿಸ್ತನ ಕೆಲಸವು ತೀರಿದನಂತರ, ಆ ಕರಣಿಯು ಈಡೇರಿಸುವದಾಗಿಯೂ, ಎಲ್ಲಾ ಪರಿಪೂರ್ತಿ ಮಾಡುವದಾಗಿಯೂ ಇರ ಬೇಕು.

**೨೬೨.** ಪರಿಶುದ್ಧಾತ್ಮದ ಹೊಸ ಒಡಂಬಡಿಕೆಯ ಕರಣಿಯು ಹಳೆ ಒಡಂಬಡಿಕೆಯಲ್ಲಿಯೆ ಪ್ರವಾದಿಸಿದ್ದೂ[೧], ಕ್ರಿಸ್ತನು ಸಹಾ ತಾನೆ ಅತಿ ಖಂಡಿತವಾಗಿ ವಾಗ್ದತ್ತ ಮಾಡಿದ್ದೂ[೨] ಆಗಿದ್ದು, ಕ್ರಿಸ್ತನು ತಂದೆಯ ಬಳಿಗೆ ಮನೆಗೆ ಹೋದ ಮೇಲೆ[೩], ಮೊದಲನೆ ಪಂಚಾಶತ್ತಿನಲ್ಲಿ ಆರಂಭವಾಯಿತು. (ಅ. ಕ್ರಿ. ೨.) ಮತ್ತು ತಂದೆಯು ನೇಮಿಸಿದ, ಮಗನು ತೀರಿಸಿದ, ರಕ್ಷಣೆಯನ್ನು ಮನುಷ್ಯರಿಗೆ ಸಂಪ್ರದಾನವಾಗಿಯೂ ಸ್ವೀಕಾರವಾಗಿಯೂ ಮಾಡಿ[೪], ಈ ಪ್ರಕಾರ ನಿತ್ಯಸಂಪೂರ್ತಿಯನ್ನು ಬರ ಮಾಡುವದರಲ್ಲಿ ಪ್ರತ್ಯಕ್ಷವಾಗುತ್ತದೆ.

೧) "ಆ ಮೇಲೆ ಆಗುವದೇನಂದರೆ, ಮಾಂಸವೆಲ್ಲಾದರ ಮೇಲೆ ನನ್ನ ಆತ್ಮವನ್ನು ಹೊಯ್ಯುವೆನು;" ಇತ್ಯಾದಿ. (ಯೋವೆ. ೨, ೨೮.) (ಯೆಶಾ. ೩೨, ೧೫. ೪೪, ೩. ೪. ಎಜೇಕಿ. ೩೬, ೨೬. ೨೭.)

೨) "ಆದರೆ ನಾನು ತಂದೆಯ ಬಳಿಯಿಂದ ನಿಮಗೆ ಕಳುಹಿಸುವಂಥ, ತಂದೆಯ ಬಳಿಯಿಂದ ಹೊರಡುವಂಥ, ಸತ್ಯದ ಆತ್ಮವೆಂಬ ಆದರಿಕನು ಬಂದಾಗ ಅವನೇ ನನ್ನನ್ನು ಕುರಿತು ಸಾಕ್ಷಿ ಕೊಡುವನು." (ಯೋಹಾ. ೧೫, ೨೬.) "ಆದರಿಕನು ತಾನೇ ಎಲ್ಲವುಗಳನ್ನು ನಿಮಗೆ ಬೋಧಿಸಿ, ನಾನು ನಿಮಗೆ ಹೇಳಿದವುಗಳನ್ನೆಲ್ಲಾ ನಿಮಗೆ ಜ್ಞಾಪಕ ಮಾಡುವನು." (ಯೋಹಾ. ೧೪, ೨೬.) "ಅವನು ನಿಮ್ಮನ್ನು ಎಲ್ಲಾ ಸತ್ಯದಲ್ಲಿ ಸೇರಿಸುವನು." (ಯೋಹಾ. ೧೬, ೧೩.) (೬, ೩.) "ಮತ್ತು ಇಗೋ, ನನ್ನ ತಂದೆಯ ವಾಗ್ದತ್ತವನ್ನು ನಿಮ್ಮ ಮೇಲೆ ಕಳುಹಿಸುತ್ತೇನೆ." (ಲೂಕ. ೨೪, ೪೯.) "ಆದರೆ ಪರಿಶುದ್ಧಾತ್ಮವು ನಿಮ್ಮ ಮೇಲೆ ಬಂದಾಗ, ನೀವು ಬಲವನ್ನು ಹೊಂದಿ," ಇತ್ಯಾದಿ. (ಅ. ಕ್ರಿ. ೧, ೮.)

೩) "ನಾನು ಹೋಗುವದು ನಿಮಗೆ ಪ್ರಯೋಜನವಾಗಿದೆ; ಹ್ಯಾಗಂದರೆ, ಹೋಗದಿದ್ದರೆ, ಆದರಿಕನು ನಿಮ್ಮ ಬಳಿಗೆ ಬರುವದಿಲ್ಲ." (ಯೋಹಾ. ೧೬, ೭.) "ಯೇಸು ಇನ್ನು ಮಹಿಮೆ ಹೊಂದದ ಕಾರಣ, ಪರಿಶುದ್ಧಾತ್ಮವು ಇನ್ನು ಬರಲಿಲ್ಲ." (ಯೋಹಾ. ೭, ೩೯.)

೪) "ಅವನು ನನ್ನದರಲ್ಲಿ ತೆಗೆದು, ನಿಮಗೆ ತಿಳಿಸಿ, ನನ್ನನ್ನು ಮಹಿಮೆ ಪಡಿಸುವನು." (ಯೋಹಾ. ೧೬, ೧೪.)

ಪರಿಶಿ. ಪಾಪವು ರೋಗವೆಂದೂ, ವಿಮೋಚನೆಯು ಸ್ವಸ್ಥಪಡಿಸೋಣವೆಂದೂ ಆಲೋಚಿಸಿದರೆ, ಔಷಧ ನೇಮಿಸುವವನು ತಂದೆ, ಅದನ್ನು ಸಿದ್ಧ ಮಾಡುವವನು ಮಗ, ರೋಗಿಯನ್ನು ಪರಾಮರ್ಶಿಸಿ ಅದನ್ನು ಅವನಿಗೆ ಕೊಡುವವನು ಪರಿಶುದ್ಧಾತ್ಮ.

**೨೬೩.** ಪರಿಶುದ್ಧಾತ್ಮದ ಹೊಸ ಒಡಂಬಡಿಕೆಯ ಕರಣಿಯು ಇಮ್ಮಡಿಯಾಗಿರುತ್ತದೆ. ಒಟ್ಟಾರೆ ಅಪೊಸ್ತೊಲಿಕ ಕಾಲದಲ್ಲಿ ಮಾತ್ರವೆ ಇದ್ದ ಅಸಾಧಾರಣವಾದದ್ದೊಂದು, ಎಲ್ಲಾ ವರ್ಷಶತಗಳಲ್ಲಿ ಕಡೇ ಪರಿಪೂರ್ತಿಯ ಪರ್ಯಂತಕ್ಕೆ ಸಮಮಿತಿಯಾಗಿ ನಡಿಯುತ್ತಾ ಬರುವ ಸಾಧಾರಣವಾದದ್ದೊಂದು. ಅದು ಹೊಸ ಒಡಂಬಡಿಕೆಯ ದೇವವಾಕ್ಯವನ್ನು ಮುಂದಿಡುವದಕ್ಕೋಸ್ಕರ ಅಪೊಸ್ತಲರನ್ನು ಕರಣರಹಿತವಾಗಿ ಪ್ರಕಾಶೀಕರಿಸುವದರಿಂದಲೂ — ಸಭೆಯ ಸ್ಥಾಪನಾರ್ಥವಾಗಿ ಅವರಿಗೆ ಸ್ವಭಾವಪರವಾದ ಅದ್ಭುತ ಬಲಗಳನ್ನು ಕೊಡುವದರಲ್ಲಿಯೂ ಪ್ರಾಪ್ತಿಯಾಯಿತು.

**೨೬೪.** ಮನುಷ್ಯನ ಕಡೆಯಿಂದ ರಕ್ಷಣೆಯ ಸ್ವೀಕಾರಕ್ಕೋಸ್ಕರ ಪರಮಾವಶ್ಯವಾಗಿರುವ ಔಪಾಧಿಕವು ಯಾವದೆಂದರೆ — ವಿಶ್ವಾಸ, ಅಂದರೆ ಕ್ರಿಸ್ತನು ದುಡಿದ ರಕ್ಷಣೆಗೆ ಮನುಷ್ಯನು ತನ್ನನ್ನು ಪೂರ್ಣವಾಗಿ ಸಿದ್ಧ ಸಂತೋಷದಲ್ಲಿಯೂ ಪೂರ್ಣ ಭರವಸದಲ್ಲಿಯೂ ಕೊಟ್ಟು ಬಿಡುವದು. ಆದರೆ ಚರಿತ್ರವಾಗಿ ಇರುವ ರಕ್ಷಣೆಗೆ, ಅದರ ಪರಿಚಿತಿ ಇಲ್ಲದೆಯೂ ರಕ್ಷಣೆಯ ಮಾರ್ಗದ ತಿಳಿವಿಕೆ ಇಲ್ಲದೆಯೂ, ತನ್ನನ್ನು ಕೊಟ್ಟು ಬಿಡುವದು ಅಸಾಧ್ಯವಾಗಿರಲಾಗಿ, ರಕ್ಷಣೆಯ ಪ್ರಸಂಗವು ಅವಶ್ಯವಾಯಿತು. ಆದರೆ ಪ್ರಸಂಗವು ದೇವರ ವಾಕ್ಯದಿಂದ ಬರುತ್ತದೆ[೧]. ಯಾಕಂದರೆ ದೇವರು ಮಾತ್ರವೆ, ದೇವರ ಕೃಪೆಯ ಆಶ್ಚರ್ಯಕರವಾದ ಮರ್ಮಗಳನ್ನು ವಿಶ್ವಾಸಯೋಗ್ಯವಾಗಿಯೂ ಭರವಸಯೋಗ್ಯವಾಗಿಯೂ ಸಾರ ಬಲ್ಲನು. ಆ ಕಾರಣ, ಅಪೊಸ್ತಲರಿಗೆ ಕರಣರಹಿತವಾದ ದಿವ್ಯ ಪ್ರಕಾಶೀಕರಣವು ಅವಶ್ಯವಾಯಿತು. (೬. ಆತ್ಮಾಶ್ವಾಸ.) ಅದರಿಂದ ಅವರ ಬೋಧನೆಯಲ್ಲಿ ಏನೊಂದೂ ತಪ್ಪು ಬರಲಿಲ್ಲಾ. ರಕ್ಷಣೆಯ ಸತ್ಯ ವಾಕ್ಯಗಳ ಪೂರ್ಣ ತಿಳಿವಿಕೆಯು ಅವರ ಆತ್ಮದಲ್ಲಿ ಹುಟ್ಟಿತು. (ಸಮ ನೋಡು **೨೩೧.** ಪರಿಶಿ.)

೧) "ಹಾಗಾದರೆ ವಿಶ್ವಾಸವು ಕೇಳ್ವಿಕೆಯಿಂದ, ಕೇಳ್ವಿಕೆಯು ದೇವರ ಮಾತಿನಿಂದ ಆಗುತ್ತದೆ." (ರೋಮಾ. ೧೦, ೧೭.)

ಪರಿಶಿ. ಅಪೊಸ್ತಲರ ಕಡೆಯಿಂದ ಆಗ ತಕ್ಕ ಬಾಯಿ ಮಾತಿನ ಪ್ರಸಂಗ ಮಾತ್ರವೆ

ಆ ಕಾಲಕ್ಕೆ ಸಹಾ ಸಾಕಾಗಲಿಲ್ಲ. ಹಾಗಾದರೆ ಬರುವ ವರ್ಷಶತಗಳಿಗೆ ಸಾಕಾಗುವದು ಹ್ಯಾಗೆ? ರಕ್ಷಣೆಯ ಸತ್ಯವಾಕ್ಯದ ತಿಳಿವಿಕೆಗೆ, ಅದು ಕಡಿಮೆಯಾಗದೆ ಸುಳ್ಳು ಕೂಡದೆ ಇರ ಬೇಕಾದರೆ, ಸ್ಥಿರವಾದ ಬರಹಮೂಲಕವಾದ ಆಧಾರವು ಬೇಕು. ಇದು ಪರಿಶುದ್ಧಾತ್ಮದ ಮುಂಚಿಂತಿಯಿಂದ ಅಪೊಸ್ತಲರ ಬರಹಗಳಲ್ಲಿ ನಮಗೆ ಉಂಟಾಗಿದೆ. ಹೀಗಾಗಿ ಕರಣರಹಿತವಾದ ಪ್ರಕಾಶೀಕರಣವು ನಮಗೆ ಅನವಶ್ಯ.

**೨೬೫.** ಅದೆ ಪ್ರಕಾರ ಸಭೆಯ ಪ್ರಥಮ ಸ್ಥಾಪನೆಗೂ ಅವರ ಪ್ರಸಂಗದ ವಿಶ್ವಾಸಯೋಗ್ಯತೆಗೂ ಅದ್ಭುತಗಳನ್ನೂ ಲಕ್ಷಣಗಳನ್ನೂ ಮಾಡುವ ಹಾಗೆ, ಅಸಾಧಾರಣವಾದ ದಾನವು ಅಪೊಸ್ತಲರಿಗೆ ಅವಶ್ಯವಾಗಿತ್ತು. ಆದರೆ ಸಭೆಯು ರಕ್ಷಣೆಯ ಬಂಡೆಯಲ್ಲಿ ಸ್ಥಾಪಿಸಲ್ಪಟ್ಟಾದ ಮೇಲೆ, ಹೆಚ್ಚು ವಿಸ್ತಾರವಾಗಲಿಕ್ಕೆ ಅದ್ಭುತಗಳು ಅದಕ್ಕೆ ಅವಶ್ಯವಿಲ್ಲಾ. ಯಾಕಂದರೆ ಸಭೆಯು ತಾನೆ ಮತ್ತು ಅದರಿಂದುಂಟಾದ ಲೋಕದ ರೂಪಾಂತರವು ಆ ಸಮಸ್ತ ಅದ್ಭುತಗಳಿಗಿಂತ ದೊಡ್ಡ ಅದ್ಭುತವಾಗಿರುತ್ತದೆ.

ಪರಿಶಿ. ಕ್ರೈಸ್ತತ್ವವು ಪರಮ ಅದ್ಭುತವಾಗಿರುವದರಿಂದಲೆ, ಅದ್ಭುತವಿಲ್ಲದೆ ಯಾವಾಗಲೂ ಇರ ಕೂಡದೆಂಬದು ಸರಿ. ಆದರೆ ಅದ್ಭುತವು ಪ್ರಕೃತಿಯ ಈ ಅಧೋಮಂಡಲದಿಂದ ಅದರ ಪರಮ ನಿಜವಾಗಿಯೂ ಪೂರ್ಣ ತಕ್ಕದ್ದಾಗಿಯೂ ಇರುವ ಸ್ಥಳವಾದ ಒಳಗಿನ ಆತ್ಮ ಜೀವದ ಉತ್ತರ ಮಂಡಲಕ್ಕೆ ತಿರಿಗಿ ಕೊಂಡಿತು. ಪಾಪಿಯ ಮಾನಸಾಂತರವೆಂಬ ನಿಧಾನವಾದ ಅಡಗಿರದ ಅದ್ಭುತಗಳು, ಆತ್ಮದ ಬಹು ವಿಧವಾದ ನಡಿಸೋಣಗಳೂ ಕೃಪೆಯ ಎಳೆಯೋಣಗಳೂ, ಪ್ರಾರ್ಥನೆಯನ್ನು ಕೇಳುವದೂ, ಕ್ರೂಜಿಸಲ್ಪಟ್ಟವನ ಮೇಲೆ ಇಡುವ ವಿಶ್ವಾಸದಿಂದ ಲೋಕದ ರೂಪಾಂತರವೂ ನವೀಕರಣವೂ, ಇದೆಲ್ಲಾ ರೋಗಿಗಳನ್ನು ವಾಸಿ ಮಾಡುವದಕ್ಕಿಂತಲೂ ಸತ್ತವರನ್ನು ಎಬ್ಬಿಸುವದಕ್ಕಿಂತಲೂ ಹೆಚ್ಚಾಗಿರುತ್ತದೆ ಎಂತ ವಿಶ್ವಾಸದ ಕಣ್ಣಿಗೆ ಕಾಣ ಬೇಕು.

**೨೬೬.** ಪರಿಶುದ್ಧಾತ್ಮದ ಸಾಧಾರಣ ಕರಣಿಯು ಕೃಪಾಕರಣಗಳಿಂದಾಗುವ (ವಾಕ್ಯಪ್ರಸಾದಗಳಿಂದ) ರಕ್ಷಣೆಯ ಸ್ವೀಕಾರದಲ್ಲಿ ಅದೆ. ಈ ಸ್ವೀಕಾರದ ರೀತಿಗೆ ರಕ್ಷಣಾಕ್ರಮ, ಅಥವಾ ರಕ್ಷಣಾಮಾರ್ಗವೆಂಬ ಹೆಸರುಂಟು. ಅದು "ಪರಿಶುದ್ಧಾತ್ಮವು ಸುವಾರ್ತೆಯಿಂದ ನಮ್ಮನ್ನು ಕರದು, ತನ್ನ ದಾನಗಳಿಂದ ಬೆಳಗಿಸಿ, ಸಮವಾದ ವಿಶ್ವಾಸದಲ್ಲಿ ಶುದ್ಧ ಮಾಡಿ ಕಾಪಾಡುವದರಿಂದ" ಪ್ರಾಪ್ತಿಯಾಗುತ್ತದೆ.

**೨೬೭.** ಕರಿಯುವಿಕೆ ಅಂದರೆ, ಕ್ರಿಸ್ತನ ಪರಿಮುಖವಾಗಿ ದೇವರ ಸಂಗಡ ಅನ್ಯೋನ್ಯವಾಗುವದಕ್ಕೂ, ಆತನು ಸ್ಥಾಪಿಸಿದ ದೇವರ ರಾಜ್ಯದ ಮಹಿಮೆಯಲ್ಲಿ ಪಾಲು ಹೊಂ

ದಲಿಕ್ಕೂ ಬರಬೇಕೆಂದು, ಹೇಳುವದಾಗಿರುತ್ತದೆ[೧]. "ಇದು ಸುವಾರ್ತೆಯಿಂದ ಆಗುತ್ತದೆ" (ಸುವಾರ್ತೆ ಅಂದರೆ ಕ್ರಿಸ್ತನಲ್ಲಿ ಸಂಪೂರ್ಣವಾದ ವಿಮೋಚನೆಯು ಪಾಪಿಗೆ ಸಿದ್ಧವಾಗಿರುತ್ತದೆಂಬ ದೇವರ ವಾಕ್ಯದ ಸಂತೋಷದ ವರ್ತಮಾನ.) ಇದು, ಓದುವದರಿಂದಲೂ[೨] ಪ್ರಸಂಗಿಸುವದರಿಂದಲೂ[೩], ಆಗ ಬಹುದು. — ಸುವಾರ್ತೆಯಿಂದಾಗುವ ನೆಟ್ಟಗಾದ ಕರಿಯುವಿಕೆಯ ಮುಂದೆ ಪರಿಶುದ್ಧಾತ್ಮದ ಕರಣಿಯು ನಡಿಯುತ್ತದೆ. ಈ ಕರಣಿಯು ಹೃದಯವನ್ನು ಕರಿಯುವಿಕೆಗೆ ಮನಸ್ಸುಳ್ಳದ್ದಾಗಿಯೂ ಅಂಗೀಕರಿಸ ಶಕ್ತಿಯುಳ್ಳದ್ದಾಗಿಯೂ ಮಾಡುತ್ತದೆ. ಇದು ಜೀವದ ಬಹು ವಿಧವಾದ ನಡಿಸೋಣದರಿಂದಲೂ ಪ್ರಾಪ್ತಿಗಳಿಂದಲೂ ಆಗುತ್ತದೆ[೪], ಆದರೆ, ಮುಖ್ಯವಾಗಿ ದಿವ್ಯ ನಿಯಮದಿಂದ. ಹ್ಯಾಗಂದರೆ ಇದರಿಂದ ಪರಿಶುದ್ಧಾತ್ಮವು ನಮ್ಮಲ್ಲಿ ಪಾಪದ ತಿಳಿವಿಕೆಯನ್ನೂ ವಿಮೋಚನೆಯ ಅಭಿಲಾಷೆಯನ್ನೂ ಹುಟ್ಟಿಸುತ್ತದೆ. (**೧೪೪.**)

೧) ಸಮ ನೋಡು ಎರಡು ಸಾಮ್ಯಗಳನ್ನು (ಲೂಕ. ೧೪, ೧೬. ಇತ್ಯಾದಿ. ಮತ್ತಾ. ೨೨, ೧—೧೪.) "ಕಷ್ಟಪಟ್ಟು, ಭಾರ ಹೊರುವವರೆಲ್ಲರೇ, ನನ್ನ ಬಳಿಗೆ ಬನ್ನಿರಿ! ನಾನು ನಿಮಗೆ ವಿಶ್ರಾಂತಿ ಕೊಡುವೆನು;" ಇತ್ಯಾದಿ. (ಮತ್ತಾ. ೧೧, ೨೮—೩೦.) "ಎಲೋ ನೀರಡಿಕೆಯುಳ್ಳವರೆಲ್ಲರೇ! ನೀರಿನ ಬಳಿಗೆ ಬನ್ನಿ." ಇತ್ಯಾದಿ. (ಯೆಶಾ. ೫೫, ೧.)

೨) "ಬರಹಗಳನ್ನು ಶೋಧಿಸಿರಿ; ಯಾಕಂದರೆ ಅವುಗಳಲ್ಲಿ ನಿತ್ಯಜೀವ ನಿಮಗುಂಟೆಂದು, ನೆನಸುತ್ತೀರಿ; ಮತ್ತು ಅವೇ ನನ್ನನ್ನು ಕುರಿತು ಸಾಕ್ಷಿ ಕೊಡುತ್ತವೆ." (ಯೋಹಾ. ೫, ೩೯.)

೩) "ದೇವರು ಕ್ರಿಸ್ತನಲ್ಲಿದ್ದು, ಲೋಕವನ್ನು ತನಗೆ ಅನ್ಯೋನ್ಯ ಮಾಡಿ, ಅವರ ಅಕ್ರಮಗಳನ್ನು ಅವರಿಗೆ ಎಣಿಸದೆ, ಅನ್ಯೋನ್ಯದ ಮಾತನ್ನು ನಮ್ಮಲ್ಲಿ ಇಟ್ಟಿದ್ದಾನೆ. ಹಾಗಾದರೆ ದೇವರು ನಮ್ಮ ಮುಖಾಂತರ ಬುದ್ಧಿ ಹೇಳುವ ಪ್ರಕಾರ, ಕ್ರಿಸ್ತನಿಗೋಸ್ಕರ ರಾಯಭಾರಿಗಳಾಗಿದ್ದೇವೆ; ದೇವರಿಗೆ ಅನ್ಯೋನ್ಯವಾಗಿರೆಂದು, ಕ್ರಿಸ್ತನಿಗೆ ಬದಲಾಗಿ ಬೇಡಿಕೊಳ್ಳುತ್ತೇವೆ." (೨ ಕೊರಿ. ೫, ೧೯. ೨೦.) (ರೋಮಾ. ೧೦, ೧೭.) (**೨೬೪.**)

೪) "ದೇವರ ದಯವು ಮಾನಸಾಂತರಕ್ಕೆ ನಿನ್ನನ್ನು ಪ್ರೇರಣೆ ಮಾಡುತ್ತದೆ ಎಂದು ತಿಳಿಯದೆ, ಇರುತ್ತೀಯೊ?" (ರೋಮಾ. ೨, ೪.) "ಯೆಹೋವನೇ! ನಿನ್ನ ಶಿಕ್ಷೆ ಅವರಿಗಿರುವಾಗ," ಇತ್ಯಾದಿ. (ಯೆಶಾ. ೨೬, ೧೬.) (**೧೧೩**, ೩.)

**೨೬೮.** ಸಮಸ್ತ ಮನುಷ್ಯರು ರಕ್ಷಿಸಲ್ಪಡ ಬೇಕೆಂದು ದೇವರ ಮನಸ್ಸಿರುವದರಿಂದಲೂ[೧], ಕ್ರಿಸ್ತನು ಸಹಾ ಎಲ್ಲಾ ಲೋಕದ ಪಾಪಪರಿಹಾರಾರ್ಥವಾಗಿ ಸತ್ತು ಹೋದ್ದರಿಂದಲೂ[೨], ಆತನು ಸುವಾರ್ತೆಯನ್ನು ಎಲ್ಲಾ ಸೃಷ್ಟಿಗೆ ಪ್ರಸಂಗಿಸ ಆಜ್ಞಾಪಿಸಿದ್ದಾ

ನೆ[೩]. ಹೀಗಿರುವಲ್ಲಿ, ಕರಿಯುವಿಕೆಯು ಅನೇಕ ಅನ್ಯಜನರಿಗೆ ಬಾರದೆ ಇದ್ದರೆ, ಅದಕ್ಕೆ ಕ್ರೈಸ್ತಜನರ ಜಾರವಾದ ಅಪರಾಧವೂ, ಕರ್ತನ ಸ್ಪಷ್ಟವಾದ ಆಜ್ಞೆಗೆ ಪ್ರತಿಯಾಗಿರುವ ಆಲಸ್ಯವೂ, ಅಂದರೆ, ಮಿಶನಿನಲ್ಲಿ ಆಸಕ್ತಿಯೂ ಮಿಶನಿಗೋಸ್ಕರ ಪ್ರಾರ್ಥನೆಯೂ ಸಾಕಷ್ಟು ಇಲ್ಲದೆ ಇರುವದೂ ಕಾರಣವಾಗಿರುತ್ತದೆ[೪]. ಆದರೂ ಕರಿಯುವಿಕೆಯು ಈ ಜೀವದಲ್ಲಿ ಸ್ವಂತ ಅಪರಾಧವಿಲ್ಲದೆ ಯಾರ್ಯಾರಿಗೆ ಬಾರದೆ ಹೋಯಿತೊ, ಅಂಥವರನ್ನು (ತಾವೆ ಆದು ಕೊಳ್ಳುವ ಪ್ರಕಾರ ಆನಂದಕ್ಕೆ ಅಥವಾ ಹೆಚ್ಚು ನಿರ್ಣಯಕ್ಕೆ ನಡಿಸುವ) ನ್ಯಾಯತೀರ್ಪಿಗೆ ಬೇರೆ ವಿಧವಾಗಿ ಹಣ್ಣು ಮಾಡ ಬಲ್ಲನು, ಮತ್ತು ಮಾಡುವನು ಎಂದು ದೇವರ ಕೃಪೆಜ್ಞಾನಗಳಿಂದ ನಾವು ನಿರೀಕ್ಷಿಸ ಬಹುದು. ಆದರೂ ಕಾಲಪರವಾದ ಅತ್ತ ಕಡೆಯ ಆತನ ಕೃಪಾಮಾರ್ಗಗಳನ್ನು ಅರಿಯೆವೆಂದು ಅರಿಕೆ ಮಾಡಿ, ಮಿಶನಿನ ಶುದ್ಧ ಕಾರ್ಯದಲ್ಲಿ ನಾವು ಲಘುಮನಸ್ಸಿನವರೂ ಆಲಸ್ಯಗಾರರೂ ಆಗಿರುತ್ತೇವೆಂಬ ಅಪರಾಧ ಹೊತ್ತುಕೊಳ್ಳುತ್ತೇವೆ.

೧) "ಕರ್ತನಾದ ಯೆಹೋವ ಅನ್ನುತ್ತಾನೆ—ನನ್ನ ಜೀವದಾಣೆ," (ಎಜೇಕಿ. ೩೩, ೧೧.) (**೧೪೩.**) "ಆದರೆ ಯಾರಾರೂ ನಾಶನವಾಗ ಬೇಕೆಂದು ಮನಸ್ಸಿಲ್ಲದೆ, ಎಲ್ಲರು ಮಾನಸಾಂತರಕ್ಕೆ ತಿರುಗ ಬೇಕೆಂದು, ಮನಸ್ಸಾಗಿ, ನಮ್ಮ ಕಡೆಗೆ ದೀರ್ಘಶಾಂತಿಯುಳ್ಳವನಾಗಿದ್ದಾನೆ." (೨ ಪೇತ್ರ. ೩, ೯.) "ಸಕಲ ಮನುಷ್ಯರು ರಕ್ಷಿಸಲ್ಪಟ್ಟು, ಸತ್ಯದ ತಿಳುವಿಕೆಗೆ ಬರ ಇಚ್ಛೈಸುವ" ಇತ್ಯಾದಿ. (೧ ತಿಮೊ. ೨, ೩.)

೨) "ಇವನು ನಮ್ಮ ಪಾಪಗಳಿಗೋಸ್ಕರ ಶಾಂತಕರವಾದ ಬಲಿಯಾಗಿದ್ದಾನೆ; ನಮ್ಮವುಗಳಿಗೋಸ್ಕರ ಮಾತ್ರವಲ್ಲ, ಸಮಸ್ತ ಲೋಕದವುಗಳಿಗೋಸ್ಕರ ಸಹಾ." (೧ ಯೋಹಾ. ೨, ೨.)

೩) "ಸಮಸ್ತ ಲೋಕಕ್ಕೆ ಹೋಗಿ, ಸಮಸ್ತ ಸೃಷ್ಟಿಗೆ ಸುವಾರ್ತೆ ಪ್ರಸಂಗಿಸಿರಿ." (ಮಾರ್ಕ. ೧೬, ೧೫.) (ಮತ್ತಾ. ೨೮, ೧೯.)

೪) "ಬೆಳೆ ಬಹಳ; ಆದರೆ ಕೆಲಸದವರು ಸ್ವಲ್ಪ. ಆದದರಿಂದ, ತನ್ನ ಬೆಳೆಗೆ ಕೆಲಸದವರನ್ನು ಕಳುಹಿಸ ಬೇಕೆಂದು, ಬೆಳೇ ಯಜಮಾನನನ್ನು ಬೇಡಿ ಕೊಳ್ಳಿರಿ." (ಮತ್ತಾ. ೯, ೩೭. ೩೮.) "ನಿನ್ನ ರಾಜ್ಯವು ಬರಲಿ." (ಮತ್ತಾ. ೬, ೧೦.)

**೨೬೯.** ಆದರೆ ಕರಿಯಲ್ಪಡುವವರೆಲ್ಲರು ಕರಿಯುವಿಕೆಯನ್ನು ಹಿಂಬಾಲಿಸುವದಿಲ್ಲಾ[೧]. ಅನೇಕರು ಅದನ್ನು ತುಚ್ಛೀಕರಿಸಿ (ಸಮ ನೋಡು ಲೂಕ. ೧೪, ೧೮—೨೧.), ತಮ್ಮ ಮುಂದಿಟ್ಟ ಕೃಪೆಯ ಕಡೆಗೆ ಕಠಿಣ ಮಾಡಿ ಕೊಂಡು, ಶಿಕ್ಷೆನಿರ್ಣಯದ ನೀತಿಯಾದ ನ್ಯಾಯಕ್ಕೆ ಪಾತ್ರರಾಗುತ್ತಾರೆ[೨]. ಹಾಗಾದರೆ ಅವರನ್ನು ತಳ್ಳಿಬಿಡುವದಕ್ಕೆ ಕಾರಣವು ಹೇತುರಹಿತವಾದ ದೇವರ ಸಂಕಲ್ಪವಲ್ಲ[೩], ತನ್ನ ರಕ್ಷಣೆಗೆ ಇರುವ ದೇವರ ಸುಯೋಜನೆಯ

ನ್ನು ತಳ್ಳಿಬಿಡುವ ಮನುಷ್ಯನ ಅವಿಶ್ವಾಸ ಮಾತ್ರವೆ ಕಾರಣವಾಗಿರುತ್ತದೆ[೪]. ಆದಾಗ್ಯೂ ಅತ್ತಕಡೆಯಲ್ಲಿ, ನಾವು ಆಯಲ್ಪಡುವದಕ್ಕೆ ಕಾರಣವು, ನಮ್ಮ ಪುಣ್ಯವಾಗಲಿ ನಮ್ಮ ಹೆಚ್ಚಾದ ಯೋಗ್ಯತ್ವವಾಗಲಿ ಅಲ್ಲಾ, ಕ್ರಿಸ್ತನಲ್ಲಿರುವ ದೇವರ ಕೃಪೆ ಮಾತ್ರವೆ[೫]. ನಾವು ಮುಂದಿಟ್ಟ ಕೃಪೆಯನ್ನು ಅಂಗೀಕರಿಸಿ ಅದನ್ನು ನಮ್ಮ ರಕ್ಷಣೆಗೋಸ್ಕರ ಪ್ರಯೋಗಿಸಬೇಕೆಂಬದು ಸರಿ; ಆದರೆ ಮರಣಸಂಕಟದಲ್ಲಿದ್ದ ರೋಗಿಯು, ತನ್ನನ್ನು ಸ್ವಸ್ಥ ಮಾಡುವದಕ್ಕೆ ಕೊಟ್ಟ ಮದ್ದು ತಕ್ಕೊಂಡರೆ ಹ್ಯಾಗೊ ಹಾಗೆಯೆ, ಅಥವಾ ಹಶಿವೆಯಿಂದ ಸಾಯುವವನು, ಹಶಿವೆಯ ಮರಣದಿಂದ ರಕ್ಷಿಸುವ ರೊಟ್ಟಿಯನ್ನು ತಕ್ಕೊಂಡು ತಿಂದರೆ ಹ್ಯಾಗೊ, ಹಾಗೆಯೆ ಅದು ಸಹಾ ಪುಣ್ಯವಲ್ಲಾ.

೧) "ಕರೆಯಲ್ಪಟ್ಟವರು ಅನೇಕರು, ಆಯಲ್ಪಟ್ಟವರು ಕೆಲವರೇ." (ಮತ್ತಾ. ೨೦. ೧೬.)

೨) "ಮಗನಲ್ಲಿ ವಿಶ್ವಾಸವಿಡುವವನಿಗೆ ನಿತ್ಯಜೀವ ಉಂಟು; ಆದರೆ ಮಗನಿಗೆ ವಿಧೇಯವಾಗದವನು ಜೀವವನ್ನು ನೋಡುವದಿಲ್ಲ; ಆದರೆ ದೇವರ ಕೋಪವು ಅವನ ಮೇಲೆ ನೆಲೆಯಾಗಿರುತ್ತದೆ." (ಯೋಹಾ. ೩, ೩೬.)

೩) ಎಜೇಕಿ. ೩೩, ೧೧. ೨ ಪೇತ್ರ. ೩, ೯. ೧ ತಿಮೊ. ೩, ೪. ಸಮ ನೋಡು **೨೬೮**, ೧.

೪) "ಯೆರೂಸಲೇಮೇ, ಯೆರೂಸಲೇಮೇ, ಪ್ರವಾದಿಗಳನ್ನು ಕೊಲ್ಲುವವಳೇ, ತನ್ನ ಬಳಿಗೆ ಕಳುಹಿಸಲ್ಪಟ್ಟವರನ್ನು ಕಲ್ಲೆಸೆಯುವವಳೇ, ಕೋಳಿಯು ತನ್ನ ಮರಿಗಳನ್ನು ರೆಕ್ಕೆಗಳ ಕೆಳಗೆ ಹೊದಗಿಸುವ ಪ್ರಕಾರ ನಿನ್ನ ಮಕ್ಕಳನ್ನು ಹೊದಗಿಸ ಎಷ್ಟೋ ಸಾರಿ ಮನಸ್ಸಾಗಿದ್ದೆನು; ಆದರೆ ಒಲ್ಲದೆ ಹೋದಿರಿ." (ಮತ್ತಾ. ೨೩, ೩೭.)

೫) "ನೀವು ನನ್ನನ್ನು ಆದು ಕೊಳ್ಳಲಿಲ್ಲ; ಆದರೆ ನಾನು ನಿಮ್ಮನ್ನು ಆದು ಕೊಂಡೆನು." (ಯೋಹಾ. ೧೫, ೧೬.) "ಹ್ಯಾಗಂದರೆ ಪ್ರಿಯವಾದವನಲ್ಲಿ, ನಮಗೆ ದಯ ಮಾಡಿದ ತನ್ನ ಕೃಪೆಯ ಮಹಿಮೆಯ ಸ್ತೋತ್ರಕ್ಕಾಗಿ, ನಾವು ಪ್ರೀತಿಯಲ್ಲಿ ತನ್ನ ಮುಂದೆ ಪರಿಶುದ್ಧರೂ, ನಿರ್ಮಲರೂ ಆಗಿರುವ ಹಾಗೆ, ನಮ್ಮನ್ನು ಅವನಲ್ಲಿ ಜಗದುತ್ಪತ್ತಿಗೆ ಮುಂಚೆ ಆದು ಕೊಂಡು, ತನ್ನ ಚಿತ್ತದ ಸುಯೋಜನೆಯ ಪ್ರಕಾರ ಪುತ್ರಸ್ವೀಕಾರಕ್ಕಾಗಿ ತನಗೋಸ್ಕರ ನಮ್ಮನ್ನು ಯೇಸು ಕ್ರಿಸ್ತನ ಮುಖಾಂತರ ಮುನ್ನೇಮಿಸಿದ್ದಾನೆ." (ಎಫೆ. ೧, ೪—೬.) "ಆದದರಿಂದ ಇಚ್ಛೈಸುವವನಿಂದಲ್ಲ, ಓಡುವವನಿಂದಲ್ಲ; ಕರುಣಿಸುವ ದೇವರಿಂದಲೇ." (ರೋಮಾ. ೯, ೧೬.) "ಯಾಕಂದರೆ ಕೃಪೆಯಿಂದಲೇ, ವಿಶ್ವಾಸದ ಮೂಲವಾಗಿ, ರಕ್ಷಿಸಲ್ಪಟ್ಟಿದ್ದೀರಿ; ಅದು ನಿಮ್ಮಿಂದಲ್ಲ, ದೇವರ ವರವೇ." (ಎಫೆ. ೨, ೮.)

ಪರಿಶಿ. ಪೆಲಾಗ್ಯನ ಅಪಬೋಧನೆಗೆ ಪ್ರತಿಯಾಗಿ (**೧೮೯**. ಪರಿಶಿ. ೪.) ಔಗುಸ್ತೀನನು ಪೂರ್ಣ ಸ್ವತಂತ್ರವುಳ್ಳ ದೈವಸಂಕಲ್ಪದ ಬೋಧನೆಯನ್ನು ವಿವರಿಸಿದನು.

ಎಲ್ಲಾ ಮನುಷ್ಯರು ಸ್ವಭಾವದಿಂದ ಏಕ ಪ್ರಕಾರ ಬಲಹೀನರಾಗಿರುವದರಿಂದಲೂ, ಕೆಲವು ಮನುಷ್ಯರು ದೇವರ ಕಡೆಗೆ ತಿರುಗಿಕೊಳ್ಳುತ್ತಾರೆ, ಮತ್ತೊಬ್ಬರು ತಿರುಗಿಕೊಳ್ಳುವದಿಲ್ಲ ಎಂಬ ಅನುಭವವಿರುವದರಿಂದಲೂ, ಆಯಲ್ಪಡಲಿಕ್ಕೆ ಅಥವಾ ತಳ್ಳಲ್ಪಡುವದಕ್ಕೆ ಕಾರಣವು ಮನುಷ್ಯನಲ್ಲಿ, ದೇವರ ನಿತ್ಯವಾದ ಸಂಕಲ್ಪವೆ ಆಗಿರ ಬೇಕೆಂದು ನೆನಸಿದನು. ಮನುಷ್ಯರೆಲ್ಲರು ಸ್ವಭಾವದಿಂದ ಪೂರ್ಣ ಸಮವಾದ ಒಂದೇ ಕೇಡಿನಲ್ಲಿಯೂ ಶಿಕ್ಷೆನಿರ್ಣಯದಲ್ಲಿಯೂ ಇರುತ್ತಾರೆಂದೂ, ನಿತ್ಯತ್ವದಿಂದ ದೇವರು (ಎಲ್ಲರಲ್ಲಿಯೂ ಒಳ್ಳೇದಕ್ಕೆ ಬಲಹೀನನಾದ) ಮನುಷ್ಯನ ಸ್ವಂತ ಚಿತ್ತದ ಗೊಡವೆ ಏನೂ ಇಲ್ಲದೆ, ತನ್ನ ಸ್ವತಂತ್ರವುಳ್ಳ ಕೃಪೆಯ ಮಹಿಮೆಗೋಸ್ಕರ ಕ್ರಿಸ್ತನಲ್ಲಿರುವ ಆನಂದಕ್ಕೆ ಕೆಲವರನ್ನು ಆದು ಕೊಂಡಿದ್ಧಾನೆಂದೂ, ಮಿಕ್ಕಾದವರೆಲ್ಲರನ್ನು ನೀತಿಯ ಮಹಿಮೆಗೋಸ್ಕರ ಅವರಿಗೆ ತಕ್ಕದ್ದಾಗಿರುವ ನೀತಿಯಾದ ಶಿಕ್ಷೆನಿರ್ಣಯದಲ್ಲಿ ಇಡಲಿಕ್ಕೆ ನಿಶ್ಚೈಸಿದ್ಧಾನೆಂದೂ ಹೇಳಿದನು. ಈ ಬೋಧನೆಯು ಸ್ವಲ್ಪ ಕಾಲ ಔಗುಸ್ತೀನನ ಕೀರ್ತಿಯಿಂದ ಸಭೆಯಲ್ಲಿ ನಡದರೂ, ಮೆಲ್ಲ ಮೆಲ್ಲ ತಿಳಿಯದಂತೆ ಅರ್ಧ ಪೆಲಾಗ್ಯಮತವು ಅದನ್ನು ಹಿಂದೆ ಹಾಕಿತು. ಲುಥರನು ತನ್ನ ಕಾಲದಲ್ಲಿ ರೋಮಿಸಾಯ ಸಭೆಯಲ್ಲಿ ಪ್ರಬಲವಾಗಿದ್ದ ಅರ್ಧ ಪೆಲಾಗ್ಯಮತಕ್ಕೆ ವಿರೋಧವಾಗಿ, ಆರಂಭದಲ್ಲಿ, ಸರ್ವಸ್ವತಂತ್ರವುಳ್ಳ ಸಂಕಲ್ಪವೆಂಬ ಔಗುಸ್ತೀನನ ಬೋಧನೆಯನ್ನು ಸಾಧಿಸಿದನು. ಆದರೆ ಮತ್ತೆ ಅದನ್ನು ಬಿಟ್ಟನು. ಲುಥರೀಯ ಸಭೆಯು ಔಗುಸ್ತೀನನ ಈ ಬೋಧನೆಯನ್ನು ಖಂಡಿತವಾಗಿ ತಿರಸ್ಕರಿಸಿತು. ಆದರೆ ಕಲ್ವೀನನು ಅದರ ಪೂರ್ಣ ಬಲದಲ್ಲಿ ಸಾರಿಸಿದನು ಮಾತ್ರವಲ್ಲಾ, ಅದನ್ನು ಇನ್ನೂ ಬಲ ಪಡಿಸಿದನು. ಮತ್ತು ಅದು ಅವನ ಪ್ರಯತ್ನದಿಂದ ಪುನರೂಪಿತ ಸಭೆಯ ಸಭಾಬೋಧನೆ ಆಯಿತು. ರೋಮಿಸಾಯ ಸಭೆಯಲ್ಲಿ ಸಹಾ ಔಗುಸ್ತೀನನ ಈ ಪೂರ್ವಸಂಕಲ್ಪ ಬೋಧನೆಯು ಯನ್‌ಸೇನ ಮತದಲ್ಲಿ ತಿರಿಗಿ ನವೀಕರಿಸಲ್ಪಟ್ಟಿತು. (ಕೊರ್ನೆಲ್ಯ ಯನ್‌ಸೇನ್† ೧೬೩೮) ಈ ಬೋಧನೆಯು ಒಂದು ವರ್ಷಶತ ಪರ್ಯಂತ ಫ್ರೆಂಚು ದೇಶದಲ್ಲಿ ಬಹಳ ಪ್ರಬಲವಾಗಿತ್ತು.

**೨೬೦.** ಮನುಷ್ಯನು ಪರಿಶುದ್ಧಾತ್ಮದ ಕರೆಗೆ ಹೃದಯವನ್ನೂ ಕಿವಿಯನ್ನೂ ಮುಚ್ಚದೆ ಇದ್ದರೆ, ಸ್ವಂತ ದುರಾವಸ್ಥೆಯ, ಮತ್ತು ಕ್ರಿಸ್ತ ಯೇಸುವಿನಲ್ಲಿರುವ ದೇವರ ಕೃಪೆಯ, ಚುರುಕಾದ ತಿಳುವಿಕೆಗೆ ಬೇಕಾದ "ಪರಿಶುದ್ಧಾತ್ಮದ ದಾನಗಳಿಂದ ಬೆಳಗಿಸಲ್ಪಡುತ್ತಾನೆ[೧]." ಈ ಪ್ರಕಾಶೀಕರಣವು ಓದುವದರಿಂದಾಗಲಿ, ಕಲಿಸಲ್ಪಡುವದರಿಂದಾಗಲಿ, ಪ್ರಸಂಗಿಸಲ್ಪಡುವದರಿಂದಾಗಲಿ, ಹ್ಯಾಗೂ ದೇವರ ವಾಕ್ಯದಿಂದ ಆಗುತ್ತದೆ[೨]. ಆದರೆ ದೇವರ ವಾಕ್ಯವು ಪಾಪಿಯ ಹೃದಯದಲ್ಲಿ ಬಲಗೊಂಡು, ಯಾವ ಕೆಲಸಕ್ಕೋಸ್ಕರ ಕಳುಹಿಸಲ್ಪಟ್ಟದೆಯೊ, ಅದನ್ನು ತೀರಿಸುವದಕ್ಕೆ ಕಾರಣವು — ಪರಿಶುದ್ಧಾತ್ಮದ ಬಲವೂ ದಾನವೂ ಆಗಿರುತ್ತದೆ. (ಸಮ ನೋಡು **೨೦೯.**)

೧) "ಆದದರಿಂದ ಎಚ್ಚರವಾಗು, ನಿದ್ದೆ ಮಾಡುವವನೆ, ಸತ್ತವರೊಳಗಿಂದ ಏಳು; ಕ್ರಿಸ್ತನು ನಿನಗೆ ಪ್ರಕಾಶವಾಗುವನು." (ಎಫೆ. ೫, ೧೪.) "ಯಾಕಂದರೆ ಮುಂಚೆ ಕತ್ತಲೆಯಾಗಿದ್ದಿರಿ. ಆದರೆ ಈಗ ಕರ್ತನಲ್ಲಿ ಬೆಳಕಾಗಿದ್ದೀರಿ." (ಎಫೆ. ೫, ೮.) "ಅವನ ಕರೆಯುವಿಕೆಯ ನಿರೀಕ್ಷೆ ಏನೆಂದೂ ಪರಿಶುದ್ಧರಲ್ಲಿರುವ ಅವನ ಬಾಧ್ಯತೆಯ ಮಹಿಮೆಯ ಐಶ್ವರ್ಯವೇನೆಂದೂ, ವಿಶ್ವಾಸಿಸುವವರಾದ ನಮಗಾಗಿರುವ ಅವನ ಬಲದ ಅತ್ಯಧಿಕವಾದ ಮಹತ್ತು ಅವನ ಶಕ್ತಿಯ ತ್ರಾಣದ ಯತ್ನದ ಪ್ರಕಾರವಾಗಿ ಏನೆಂದೂ, ನೀವು ನೋಡುವ ಹಾಗೆ, ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರಾದ ಮಹಿಮೆಯ ತಂದೆಯು ತನ್ನನ್ನು ಕುರಿತ ತಿಳುವಿಕೆಯಲ್ಲಿರುವ ಜ್ಞಾನ ಪ್ರಕಟಣೆಗಳ ಆತ್ಮವನ್ನೂ ನಿಮ್ಮ ಬುದ್ಧಿಯ ಕಣ್ಣುಗಳು ಬೆಳಕಾಗುವದನ್ನೂ ನಿಮಗೆ ಕೊಡ ಬೇಕು." (ಎಫೆ. ೧, ೧೭—೧೯.)

೨) "ನಿನ್ನ ವಾಕ್ಯವು ನನ್ನ ಪಾದಕ್ಕೆ ದೀಪವೂ ನನ್ನ ದಾರಿಗೆ ಬೆಳಕೂ ಆಗಿದೆ." (ಕೀರ್ತ. ೧೧೯, ೧೦೫.)

**೨೬೧.** ನಾವು, ಪ್ರಕಾಶೀಕರಣದಿಂದ ಉಂಟಾಗುವ ನಮ್ಮ ದುರಾವಸ್ಥೆಯ ಮತ್ತು ದೇವರ ಕೃಪೆಯ ತಿಳುವಿಕೆಯನ್ನು ಬುದ್ಧಿಯಲ್ಲಿ ಅಥವಾ ನೆನಪಿನಲ್ಲಿ ನಿರ್ಜೀವ ಜ್ಞಾನವಾಗಿ ಮಾತ್ರವಲ್ಲದೆ, ನಮ್ಮ ಹೃದಯದಲ್ಲಿ ಜೀವವುಳ್ಳ ತಿಳುವಿಕೆಯಾಗಿ ತಕ್ಕೊಂಡರೆ[1], ಪರಿಶುದ್ಧಾತ್ಮವು ಅದರಿಂದ ತಿರುಗೋಣವನ್ನು (ಸಂಪರ್ತನ) ಉಂಟು ಮಾಡುತ್ತದೆ. ಆದರೆ ತಿರುಗೋಣಕ್ಕೆ ಎರಡು ಬೇಕು. ಪಾಪದಿಂದ ವಿಮುಖವಾಗುವದು, ಅಂದರೆ, ಮಾನಸಾಂತರ, ಮತ್ತು ದೇವರ ಕಡೆಗೆ ಅಭಿಮುಖವಾಗುವದು, ಅಂದರೆ, ವಿಶ್ವಾಸ.

೧) "ಇದಲ್ಲದೆ ನಿಮ್ಮನ್ನು ನೀವೇ ಮೋಸಗೊಳಿಸಿ, ವಾಕ್ಯವನ್ನು ಕೇಳುವವರು ಮಾತ್ರವಲ್ಲ, ಅದನ್ನು ಮಾಡುವವರು ಆಗಿರಿ." (ಯಾಕೊ. ೧, ೨೨.) (ಸಮ ನೋಡು ೨೨—೨೫. ಮತ್ತಾ. ೭, ೨೪—೨೮.) "ದೇವರ ವಾಕ್ಯವನ್ನು ಕೇಳಿ, ಅದನ್ನು ಕೈಕೊಳ್ಳುವವರೇ ಭಾಗ್ಯವಂತರು." (ಲೂಕ. ೧೧, ೨೮.)

**೨೬೨.** ಮಾನಸಾಂತರವನ್ನು ಪರಿಶುದ್ಧಾತ್ಮವು ನಿಯಮದಿಂದ ಯತ್ನೈಸುತ್ತದೆ. ಹ್ಯಾಗಂದರೆ ಇದರಿಂದ ನಮ್ಮ ಪಾಪತ್ವವೂ, ಅಯೋಗ್ಯತ್ವವೂ, ಮತ್ತೊಂದು ಕಡೆಯಲ್ಲಿ ದೇವರ ನೀತಿಯೂ ಪರಿಶುದ್ಧತ್ವವೂ ನಮ್ಮ ಮುಂದೆ ಇಡಲ್ಪಡುತ್ತದೆ. ಆದರೆ ಸಮವಾದ ಮಾನಸಾಂತರಕ್ಕೆ ಮೂರು ಬೇಕು. ೧. ಪಾಪವು ಪಾಪವೆಂಬ, ಅಂದರೆ, ದೇವರ ಮೇಲೆ ಶಾಪಯೋಗ್ಯವಾದ ಮಾರ್ಮಲೆ ಎಂಬ ತಿಳುವಿಕೆಯೂ ಅರಿಕೆಯೂ[1] ೨. ಅದಕ್ಕಾಗಿ ಹೃದಯಪೂರ್ವಕವಾದ ಮನಸ್ತಾಪ, ಹಾಗಂದರೆ, ಪಾಪದ ಅಹಿತವಾದ ಫಲಗಳಿಗೋಸ್ಕರ ದುಖ್ಖ ಪಡುವದಲ್ಲ, ಪಾಪಕ್ಕಾಗಿಯೆ ದುಖ್ಖ ಪಟ್ಟು ಅದನ್ನೆ ಹಗೆ ಮಾ

ಪಿ ಅಸಂಹಿಸುವದು[೨]. ೩. ಕೃಪೆಯ ಮೇಲೆಯೂ ಪಾಪದ ಕ್ಷಮೆಯ ಮೇಲೆಯೂ ಅಭಿಲಾಷೆ[೩], (ದೈವಹೀನವಾದ ನಿರಾಶೆ ಅಲ್ಲ.) ಈ ಅಭಿಲಾಷೆಯು ಮನಸ್ತಾಪದಿಂದ ವಿಶ್ವಾಸಕ್ಕೆ ಹೋಗುವ ಸಂಕವಾಗಿರುತ್ತದೆ.

೧) "ನಿನ್ನ ದೇವರಾದ ಯೆಹೋವನಿಗೆ ವಿರೋಧವಾಗಿ ದ್ರೋಹ ಮಾಡಿದಿ. . . ಎಂಬುವ ನಿನ್ನ ಅಕ್ರಮವನ್ನು ಮಾತ್ರ ಅರಿಕೆ ಮಾಡು." (ಯೆರೆ. ೩, ೧೩.) "ನನ್ನ ದ್ರೋಹಗಳನ್ನು ನಾನು ತಿಳಿದಿದ್ದೇನೆ; ನನ್ನ ಪಾಪವು ಯಾವಾಗಲೂ ನನ್ನ ಮುಂದೆ ಅದೆ. . . ನಿನಗೆ, ನಿನಗೊಬ್ಬನಿಗೆ ವಿರೋಧವಾಗಿ ಪಾಪ ಮಾಡಿ, ನಿನ್ನ ದೃಷ್ಟಿಯಲ್ಲಿ ಕೇಡನ್ನು ಮಾಡಿದ್ದೇನೆ." (ಕೀರ್ತ. ೫೧, ೩. ೪.)

೨) "ಯಾಕಂದರೆ ದೇವರಿಗೆ ಅನುಕೂಲವಾದ ದುಃಖವು ರಕ್ಷಣೆಗಾಗಿ ಪಶ್ಚಾತ್ತಾಪವಿಲ್ಲದ ಮಾನಸಾಂತರವನ್ನು ಹುಟ್ಟಿಸುತ್ತದೆ; ಆದರೆ ಲೋಕದ ದುಃಖವು ಮರಣವನ್ನು ಹುಟ್ಟಿಸುತ್ತದೆ." (೨ ಕೊರಿ. ೭, ೧೦.)

೩) "ಅಯ್ಯಗಳೇ, ನಾನು ರಕ್ಷಿಸಲ್ಪಡುವ ಹಾಗೆ, ಏನು ಮಾಡ ಬೇಕು?" (ಅ. ಕ್ರಿ. ೧೬, ೩೦.) "ದೇವರೇ, ನಿನ್ನ ಕೃಪೆಯ ಪ್ರಕಾರ ನನಗೆ ದಯ ಮಾಡು; ನಿನ್ನ ಅಂತಃಕರಣದ ಬಾಹುಳ್ಯದ ಪ್ರಕಾರ ನನ್ನ ದ್ರೋಹಗಳನ್ನು ಅಳಿಸಿ ಬಿಡು. ನನ್ನ ಅಕ್ರಮದಿಂದ ನನ್ನನ್ನು ಪೂರ್ಣವಾಗಿ ತೊಳಿ; ನನ್ನ ಪಾಪದಿಂದ ನನ್ನನ್ನು ಶುಚಿ ಮಾಡು." (ಕೀರ್ತ. ೫೧, ೧. ೨.) "ನನ್ನ ಪಾಪಗಳಿಗೆ ನಿನ್ನ ಮುಖವನ್ನು ಮರೆ ಮಾಡು; ನನ್ನ ಅಕ್ರಮಗಳನ್ನೆಲ್ಲಾ ಅಳಿಸಿ ಬಿಡು. ಶುದ್ಧ ಹೃದಯವನ್ನು ನನ್ನಲ್ಲಿ ಸೃಷ್ಟಿಸು, ದೇವರೇ; ದೃಢವಾದ ಆತ್ಮವನ್ನು ನನ್ನ ಅಂತರಂಗದಲ್ಲಿ ನೂತನ ಪಡಿಸು. ನಿನ್ನ ಸಮುಖದಿಂದ ನನ್ನನ್ನು ಹೊರಗೆ ಹಾಕ ಬೇಡ; ನಿನ್ನ ಪರಿಶುದ್ಧಾತ್ಮವನ್ನು ನನ್ನಿಂದ ತೆಗೆದು ಕೊಳ್ಳ ಬೇಡ. ನಿನ್ನ ರಕ್ಷಣೆಯ ಆನಂದವನ್ನು ನನಗೆ ತಿರಿಗಿ ಕೊಡು; ಉಚಿತವಾದ ಆತ್ಮದಿಂದ ನನ್ನನ್ನು ಉದ್ಧಾರ ಮಾಡು." (ಕೀರ್ತ. ೫೧, ೯—೧೨.)

ಪರಿಶಿ. ಪೇತ್ರನ ದೈವಿಕವಾದ ದುಃಖವನ್ನೂ ಯೂದನ ದೈವಹೀನವಾದ ದುಃಖವನ್ನೂ ಸಮ ನೋಡು. (ಮತ್ತಾ. ೨೬, ೭೫. ೨೭, ೫.)

**೨೬೩.** ವಿಶ್ವಾಸವನ್ನು (೨೬೪.) ಪರಿಶುದ್ಧಾತ್ಮವು, ಸುವಾರ್ತೆಯ ಪರಿಮುಖವಾಗಿ, ಇದು ಪಾಪದ ಸಮಸ್ತ ಕೇಡಿನೊಳಗಿಂದ ವಿಮೋಚಿಸುವವನ ಕಡೆಗೆ ತೋರಿಸಲಾಗಿ, ಯತ್ನೈಸುತ್ತದೆ. ಸಮವಾದ ಜೀವವುಳ್ಳ ವಿಶ್ವಾಸಕ್ಕೆ ಸಹಾ ಮೂರು ಬೇಕು. ೧. ಕ್ರಿಸ್ತನಲ್ಲಿರುವ ದೇವರ ಕೃಪೆಯ ತಿಳುವಿಕೆ. ಇದು ಸಮ ತರದ್ದಾಗಿದ್ದರೆ, ಸಮ್ಮತಿಯೂ ಭರವಸವೂ ಇಲ್ಲದಿರ ಕೂಡದು[೧]. ೨. ಕೃಪೆಯನ್ನು ತರುವದಕ್ಕೋಸ್ಕರ ಕ್ರಿಸ್ತನ ಹತ್ತರ ಭರವಸ ಪೂರ್ಣವಾಗಿ ಹೋಗುವದು (ಹಾಗಾದರೆ ಆತನು ನಿಶ್ಚೈಸಿದ ಕೃಪಾಕರಣಗಳಾಗಿರುವ

ವಾಕ್ಯಪ್ರಸಾದಗಳ ಜಾಗ್ರತೆಯುಳ್ಳ ಪ್ರಯೋಗ)[೨] ಕಡೆಯಲ್ಲಿ ೩. ಚಕ್ತಿಯುಳ್ಳ ಕ್ರೈಸ್ತ ಜೀವಕ್ಕೋಸ್ಕರ ಕರ್ತನು ಮುಂದಿಡುವ ಕೃಪೆಯನ್ನು ಕೃತಜ್ಞತೆಯಲ್ಲಿ ತಕ್ಕೊಂಡು, ಪಡಕೊಂಡ ಕೃಪೆಯನ್ನು ಮನಸ್ಸಾಕ್ಷಿಪೂರ್ವಕವಾಗಿ ಚಕ್ತಿಯುಳ್ಳ ಕ್ರೈಸ್ತ ಜೀವನಕ್ಕೆ ಪ್ರಯೋಗಿಸುವದು[೩].

೧) "ವಿಶ್ವಾಸವು, ನಿರೀಕ್ಷಿಸಿದವುಗಳ ನಿಶ್ಚಯವೂ," ಇತ್ಯಾದಿ. (ಇಬ್ರಿ. ೧೧, ೧.) (**೧೪೭,** ೧.) "ಕರ್ತನೇ, ನಿನಗೆ ಮನಸ್ಸಿದ್ದರೆ, ನನ್ನನ್ನು ಶುದ್ಧ ಮಾಡ ಬಲ್ಲಿ." (ಮತ್ತಾ. ೮, ೨.)

೨) "ಆದದರಿಂದ, ನಾವು ಕರುಣೆಯನ್ನು ಹೊಂದುವ ಹಾಗೆಯೂ, ತಕ್ಕಾಲದ ಸಹಾಯಕ್ಕಾಗಿ ಕೃಪೆ ಶಿಕ್ಕುವ ಹಾಗೆಯೂ, ಧೈರ್ಯದಿಂದ ಕೃಪೆಯ ಸಿಂಹಾಸನದ ಬಳಿಗೆ ಬರೋಣ." (ಇಬ್ರಿ. ೪, ೧೬.)

೩) "ಅದೇ ಪ್ರಕಾರ ವಿಶ್ವಾಸವು, ಕ್ರಿಯೆಗಳಿಲ್ಲದ್ದಾಗಿದ್ದರೆ, ತನ್ನಲ್ಲಿ ಸತ್ತದ್ದಾಗಿದೆ." (ಯಾಕೊ. ೨, ೧೭.) "ಅವರ ಫಲಗಳಿಂದ ಅವರನ್ನು ತಿಳಿಯುವಿರಿ." (ಮತ್ತಾ. ೭, ೧೬.) ಸಮ ನೋಡು ದಯಮಾಡಿದ ತಲಾಂತುಗಳ ಸಾಮ್ಯವನ್ನು. (ಮತ್ತಾ. ೨೫, ೧೪. ಇತ್ಯಾದಿ.)

ಪರಿಶಿ. ವಿಶ್ವಾಸವು ಕೃಪೆಯನ್ನು ಪರಿಶುದ್ಧಾತ್ಮದಿಂದ ಕೃಪಾಕರಣಗಳಲ್ಲಿ ಹೊಂದುತ್ತದೆ. ಇವುಗಳಿಂದ ವಿಶ್ವಾಸಿಯು ಕ್ರಿಸ್ತನ ಮರಣ ಜೀವಗಳ ಅನ್ಯೋನ್ಯದಲ್ಲಿ ಒಳನೆಡಲ್ಪಟ್ಟು, ಯಾವಾಗಲೂ ಕಾಪಾಡಲ್ಪಟ್ಟು, ಭದ್ರವಾಗುತ್ತಾನೆ. ಒಳನೆಡಲ್ಪಡೋಣವು ಆತ್ಮಸಂಪ್ರದಾನದ ಸ್ನಾನದಲ್ಲಿ ಪುನರ್ಜನ್ಮದಿಂದ ಆಗ ಬೇಕು. ಅದರಿಂದುಂಟಾದ ಅನ್ಯೋನ್ಯದ ಪಾಲನೆಯೂ ನವೀಕರಣವೂ ಮಿಕ್ಕಾದ ಕೃಪಾಕರಣಗಳಿಂದ, ಅಂದರೆ, ದೇವರವಾಕ್ಯ ಪ್ರಾರ್ಥನೆ ರಾತ್ರಿಭೋಜನಗಳಿಂದ ಆಗ ಬೇಕು. (ಕೃಪಾಕರಣಗಳ ಪರಿಚ್ಛೇದವನ್ನು ನೋಡಿಕೋ.)

**೨೭೪.** ಪಾಪಿಯು ರಕ್ಷಣಾಪೇಕ್ಷೆಯಾಗಿ ದೇವರ ಕಡೆಗೆ ತಿರುಗಿ ಕೊಂಡರೆ, ದೇವರು ಸಹಾ ರಕ್ಷಣಾದಾಯಕನಾಗಿ ಅವನ ಕಡೆಗೆ ತಿರುಗಿ ಕೊಳ್ಳುತ್ತಾನೆ. ಪಾಪಿಯ ಕಡೆಯಿಂದ ಮಾನಸಾಂತರ ವಿಶ್ವಾಸಗಳ ಪರಿಮುಖವಾಗಿ ಆಗುವ ಸಂಪರ್ತನದ ಹಿಂದೆ, ದೇವರ ಕಡೆಯಿಂದ ಕೃಪಾಕರಣವೂ ನೀತಿನಿರ್ಣಯವೂ ಶುದ್ಧೀಕರಣವೂ ಬರುತ್ತದೆ. — ನೀತಿನಿರ್ಣಯವೆಂದರೆ, ಶಿಕ್ಷೆಯಿಂದ ಬಿಡುಗಡೆ ಹೇಳುವದು; ಶುದ್ಧೀಕರಣವೆಂದರೆ, ಜೀವವೆಲ್ಲಾದರ ನವೀಕರಣವು — ಅದಕ್ಕೆ ಕ್ರಿಸ್ತನ ಶ್ರಮ ಮರಣಗಳೂ, ಇದಕ್ಕೆ ಆತನ ಉತ್ಥಾನ ಎತ್ತಿಸುವಿಕೆಗಳು ಕಾರಣ.

**೨೬೫.** ನೀತಿನಿರ್ಣಯವು ಹ್ಯಾಗಂದರೆ, ಪರಿಶುದ್ಧಾತ್ಮವು "ಕ್ರೈಸ್ತ ಜನಗಳಲ್ಲಿ ಎಲ್ಲಾ ವಿಶ್ವಾಸಿಗಳಿಗೆ ಪಾಪಗಳನ್ನು ದಿನ ದಿನ ಐಶ್ವರ್ಯವಾಗಿ ಕ್ಷಮಿಸುತ್ತದೆ", ಯಾಕಂದರೆ, ದೇವರು ಅವರಿಗೆ ಕ್ರಿಸ್ತನ ಪುಣ್ಯವನ್ನೂ ನೀತಿಯನ್ನೂ ಎಣಿಸಿ, ಆತನಿಗೋಸ್ಕರ ಅವರನ್ನು ಪಾಪದ ಸಮಸ್ತ ಅಪರಾಧದ ಶಿಕ್ಷೆಯಿಂದ ಬಿಡುಗಡೆ ಹೇಳಿ, ನೀತಿವಂತರೆಂದೂ ತನಗೆ ಹಿತರೆಂದೂ ಉಚ್ಚರಿಸುತ್ತಾನೆ[1]. ಈ ಪ್ರಕಾರ ನೀತಿನಿರ್ಣಯವು, ನಮ್ಮ ಕ್ರಿಯೆ ವಿನೂ ಇಲ್ಲದೆ, ಕ್ರಿಯೆಗಳ ಪುಣ್ಯವೇನೂ ಇಲ್ಲದೆ, ನಮ್ಮ ವಿಶ್ವಾಸಕ್ಕಾಗಿ ಸಹಾ ಅಲ್ಲದೆ, ಕ್ರಿಸ್ತನಿಗೋಸ್ಕರ ಕೃಪೆಯಿಂದಲೆ, ಮುಂದಿಟ್ಟ ಕ್ರಿಸ್ತನ ಪುಣ್ಯವನ್ನು ಹಿಡಿದು ಸ್ವೀಕರಿಸುವ ವಿಶ್ವಾಸದ ಮೂಲವಾಗಿ ಉಂಟಾಗುತ್ತದೆ[2].

೧) ರೊಮಾ. ೮, ೩೩. ೩೪. (**೨೫೬.**) "ಪ್ರಿಯವಾದವನಲ್ಲಿ, ನಮಗೆ ದಯ ಮಾಡಿದ ತನ್ನ ಕೃಪೆಯ ಮಹಿಮೆಯ ಸ್ತೋತ್ರಕ್ಕಾಗಿಯೆ." (ಎಫೆ. ೧, ೪.) "ವಿಶ್ವಾಸದಿಂದ ನೀತಿನಿರ್ಣಯ ಪಟ್ಟ ನಮಗೆ ದೇವರ ಸಂಗಡ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮುಖಾಂತರ ಸಮಾಧಾನ ಉಂಟು." (ರೋಮಾ. ೫, ೧.) "ಯಾಕಂದರೆ ಕ್ರಿಸ್ತ ಯೇಸುವಿನಲ್ಲಿರುವ ವಿಶ್ವಾಸದ ಮೂಲವಾಗಿ ಎಲ್ಲರು ದೇವರ ಮಕ್ಕಳಾಗಿದ್ದೀರಿ." (ಗಲಾ. ೩, ೨೬.)

೨) "ಯೇಸು ಕ್ರಿಸ್ತನಿಂದಾದ ವಿಮೋಚನೆಯ ಮುಖಾಂತರ, ಅವನ ಕೃಪೆಯಿಂದ ಉಚಿತವಾಗಿ ನೀತಿನಿರ್ಣಯ ಪಡುತ್ತಾರೆ." (ರೋಮಾ. ೩, ೨೬.) "ಆದದರಿಂದ ಮನುಷ್ಯನು ನ್ಯಾಯಪ್ರಮಾಣದ ಕ್ರಿಯೆಗಳಿಲ್ಲದೆ ವಿಶ್ವಾಸದಿಂದ ನೀತಿನಿರ್ಣಯ ಪಡುತ್ತಾನೆಂದು, ತೀರಿಸುತ್ತೇವೆ." (ರೋಮಾ. ೩, ೨೮.) "ಆದರೆ ಕ್ರಿಯೆ ಮಾಡದೆ, ಭಕ್ತಿಹೀನನಿಗೆ ನೀತಿನಿರ್ಣಯಿಸುವವನಲ್ಲಿ ವಿಶ್ವಾಸವಿಡುವವನಿಗೆ, ಅವನ ವಿಶ್ವಾಸವು ನೀತಿ ಎಂದು ಎಣಿಸಲ್ಪಡುವದು." (ರೋಮಾ. ೪, ೫.) "ನ್ಯಾಯಪ್ರಮಾಣದಿಂದ ಒಬ್ಬನಾದರೂ ದೇವರ ಮುಂದೆ ನೀತಿನಿರ್ಣಯ ಪಡುವದಿಲ್ಲವೆಂಬುವದು ಪ್ರಕಟವಾಗಿದೆ; ಯಾಕಂದರೆ ನೀತಿವಂತನು ವಿಶ್ವಾಸದಿಂದ ಬದುಕುವನು." (ಗಲಾ. ೩, ೧೧.)

ಪರಿಶಿ. ಕ್ರಿಸ್ತನ ಪುಣ್ಯವನ್ನು ಎಣಿಸುವದೆಂದರೆ, ಆದಮನ ಅಪರಾಧವನ್ನು ಎಣಿಸುವ ಹಾಗೆಯೆ ಅದೆ. (ರೋಮಾ. ೫, ೧೮. ೧೯.) (**೧೮೯.** ಪರಿಶಿ. ೨.) ಹ್ಯಾಗೆ ಆದಮನ ಅಪರಾಧವು ಸ್ವಾಭಾವಿಕ ಜನ್ಮದಿಂದ ನಮ್ಮ ಮೇಲೆ ಬಂತೊ, ಹಾಗೆಯೆ ವಿಶ್ವಾಸಿಸುವವರೆಲ್ಲರ ಮೇಲೆ ಆತ್ಮಿಕ ಜನ್ಮದಿಂದ (ಯೋಹಾ. ೧, ೧೩. ಯಾಕೊ. ೧, ೧೮. ೧ ಪೇತ್ರ. ೧, ೨೩. ಸಮ ನೋಡು **೩೩೧.**) ಕ್ರಿಸ್ತನ ನೀತಿಯು ಬರುತ್ತದೆ. ಆದಮನ ಅಪರಾಧವಾಗಲಿ ಕ್ರಿಸ್ತನ ನೀತಿಯಾಗಲಿ ನಮಗೆ ಅನ್ಯವಾದದ್ದಲ್ಲ. ನಮಗದು ನಿಜವಾಗಿ ಸ್ವಕೀಯವಾಯಿತು; ಅದು ಶರೀರಜನ್ಮದಲ್ಲಿ, ಇದು ಪುನರ್ಜನ್ಮದಲ್ಲಿ. ಮತ್ತು ಎರಡೂ ನಮ್ಮ ಸಹಕ್ರಿಯೆ ಇಲ್ಲದೆ; ಮೊದಲನೆದು ನಮ್ಮ ಚಿತ್ತ ಸಹಾ ಇಲ್ಲದೆ, ಆದರೆ ಎರಡನೆದು ನಮ್ಮ ಚಿತ್ತದ ಸ

ಹಿತ. ಯಾಕಂದರೆ, ಇಲ್ಲಿ ಸ್ವತಂತ್ರವುಳ್ಳ ಮೂರ್ತಿವತ್ತಾದ ಚಿತ್ತವು ಮುಂಚೆ ಇರುತ್ತದೆ; ಆದರೆ ಅಲ್ಲಿ ಮುಂಚೆ ಇರುವದಿಲ್ಲಾ, ಮತ್ತೆ ಕಾಣಾ ಬಂತು ಮಾತ್ರವೇ.

**೨೭೬.** ಯಾವ ಪಾಪವಾದರೂ, ಕ್ಷಮೆಯ ಅವಶ್ಯವಿಲ್ಲದ ಹಾಗೆ, ಅಲ್ಪವಾಗಿಯೂ ಬಲಹೀನವಾಗಿಯೂ ಇರುವದಿಲ್ಲಾ. ಆದರೆ ಕ್ರಿಸ್ತನಿಗೋಸ್ಕರ (ಮಾನಸಾಂತರ ವಿಶ್ವಾಸಗಳ ಔಪಾಧಿಕದಿಂದಲೆ) ಕ್ಷಮಿಸಲ್ಪಡ ಕೂಡದ ಹಾಗೆ ಯಾವ ಪಾಪವಾದರೂ ಅಷ್ಟು ದೊಡ್ಡದಾಗಿಯೂ ಘೋರವಾಗಿಯೂ ಇರುವದಿಲ್ಲಾ[೧]. ಆದರೆ ಯಾರಾದರೂ ಪುಂಡುತನದಲ್ಲಿ ನೀತಿನಿರ್ಣಯದ ಆದರಣೆ ತುಂಬಿದ ಬೋಧನೆಯನ್ನು ಕೇಳಕೊಳ್ಳುತ್ತೇನೆಂದರೆ, ಅಂಥವನು ದೇವರ ಶಿಕ್ಷೆನಿರ್ಣಯದ ನೀತಿಯುಳ್ಳ ನ್ಯಾಯತೀರ್ಪನ್ನು ದ್ರೋಹಿಯಾಗಿ ಅಪೇಕ್ಷಿಸುತ್ತಾನೆ[೨]. ಮತ್ತು ತನ್ನ ಮನಸ್ಸನ್ನು ಕಠಿಣ ಮಾಡುವದರಿಂದ, ನೀತಿನಿರ್ಣಯದಲ್ಲಿ ಪಾಲು ಹೊಂದುವದಕ್ಕೆ ತನ್ನನ್ನು ತಾನೆ ಅಯೋಗ್ಯ ಮಾಡಿ ಕೊಳ್ಳುತ್ತಾನೆ[೩].

೧) "ನಿಮ್ಮ ಪಾಪಗಳು ಲಾಕಿ ಬಣ್ಣದ ಹಾಗಿದ್ದರೂ, ಹಿಮದ ಹಾಗೆ ಬಿಳುಪಾಗುವವು; ಅವು ರಕ್ತ ವರ್ಣದ ಹಾಗೆ ಕೆಂಪಾಗಿದ್ದರೂ, ಉಣ್ಣೆಯ ಹಾಗೆ ಆಗುವವು." (ಯೆಶಾ. ೧, ೧೮.)

೨) "ತಪ್ಪಿ ಹೋಗ ಬೇಡಿರಿ; ದೇವರು ಹಾಸ್ಯ ಮಾಡಲ್ಪಡುವವನಲ್ಲ." (ಗಲಾ. ೬, ೭.) (**೧೨೨.**)

೩) "ಯಾಕಂದರೆ ನಾವು ಸತ್ಯದ ತಿಳುವಿಕೆಯನ್ನು ಹೊಂದಿದ ಮೇಲೆ ಬೇಕಾಗಿ ಪಾಪ ಮಾಡಿದರೆ, ಪಾಪಗಳಿಗೋಸ್ಕರ ಬಲಿಯು ಇನ್ನು ಇರುವದಿಲ್ಲ; ಆದರೆ ನ್ಯಾಯತೀರ್ವಿಕೆಯನ್ನೂ, ವಿರೋಧಿಗಳನ್ನೂ ಭಕ್ಷಿಸಲಿರುವ ಕೋಪಾಗ್ನಿಯನ್ನೂ ಎದುರು ನೋಡುವ ಒಂದು ಭಯವೇ." (ಇಬ್ರಿ. ೧೦, ೨೬. ೨೭.)

**೨೭೭.** ನಮ್ಮ ಚಿತ್ತವಿಲ್ಲದೆ, ನೀತಿನಿರ್ಣಯದ ಸ್ಥಿತಿಯಲ್ಲಿ ಸೇರ ಕೂಡದು; ನಮ್ಮ ಚಿತ್ತವಿಲ್ಲದೆ ಅದರಲ್ಲಿ ನೆಲೆಯಾಗಿರುವದಕ್ಕೂ ಕೂಡದು. ನಾವು ನೀತಿನಿರ್ಣಯದ ಸ್ಥಿತಿಯಲ್ಲಿ ನೆಲೆಯಾಗಿದ್ದರೆ, ಅದು ನಮ್ಮ ಪುಣ್ಯವಲ್ಲ. ಆದರೆ ಅದನ್ನು ನಾವು ಕಳಕೊಂಡರೆ, ಅದು ನಮ್ಮ ಅಪರಾಧ. ಆದರೆ ಲೌಕಿಕ ಅಭಿಲಾಷೆಯಲ್ಲಿಯೂ ಚಿಂತೆಯಲ್ಲಿಯೂ ನಾವು ಮುಣುಗಿ ಹೋದರೆ[೧], ಮಾನಸಾಂತರವನ್ನು ಸಡ್ಲು ಬಿಟ್ಟರೆ, ವಿಶ್ವಾಸದಲ್ಲಿ ತಣ್ಣಗಾದರೆ, ಕೃಪಾಕರಣಗಳ ಪ್ರಯೋಗದಲ್ಲಿ ಅಜಾಗ್ರತೆಯಾದರೆ[೨], ಸ್ವಂತ ಅಪರಾಧದಿಂದ ನೀತಿನಿರ್ಣಯವನ್ನು ಕಳಕೊಳ್ಳುತ್ತೇವೆ. ಕೃಪಾಸನಕ್ಕೆ ತಿರಿಗಿ ಬರುವ ದ್ವಾರವು, ಮನುಷ್ಯನು ಹೃದಯಪೂರ್ವಕವಾದ ಮಾನಸಾಂತರಕ್ಕೂ ನವೀಕರಿಸುವ ವಿಶ್ವಾಸ

ಕ್ಕೂ ಶಕ್ತನಾಗಿರುವ ಮಟ್ಟಿಗೂ, ತೆರದಿರುತ್ತದೆಂಬದು ಸರಿ[೩], ಆದರೆ ಒಂದೊಂದು ಪತನದಿಂದ ಹೆಚ್ಚು ದುರ್ಲಭವಾಗುತ್ತದೆ[೪]. ಮತ್ತು ದಿವ್ಯ ಕೃಪೆಯ ಎಲ್ಲಾ ಪರಿಪೂರ್ತಿಯು ಅವನಿಗೆ ಕೊಡಲ್ಪಟ್ಟಿದ್ದರೂ, ಪತನವಾಗದ ಹಾಗೆ ಕಾಪಾಡಿಸಿ ಕೊಳ್ಳದಿದ್ದರೆ, ಅದು ಅಸಾಧ್ಯವಾಗಿರುತ್ತದೆ[೫].

೧) "ಮುಳ್ಳುಗಳಲ್ಲಿ ಬಿತ್ತಲ್ಪಟ್ಟವನು ಯಾರಂದರೆ, ವಾಕ್ಯವನ್ನು ಕೇಳುವವನಾಗಿದ್ದಾನೆ; ಆದರೆ ಈ ಲೋಕದ ಚಿಂತೆಯೂ, ಐಶ್ವರ್ಯದ ಮೋಸವೂ, ವಾಕ್ಯವನ್ನು ಅಣಗಿಸುವದರಿಂದ ನಿಷ್ಫಲವಾಗುತ್ತಾನೆ." (ಮತ್ತಾ. ೧೩, ೨೨.)

೨) "ಯಾವನಾದರೂ ನನ್ನಲ್ಲಿ ನೆಲೆಯಾಗಿರದಿದ್ದರೆ, ಕೊಂಬೆಯ ಹಾಗೆ ಹೊರಗೆ ಬಿಸಾಡಲ್ಪಟ್ಟು, ಒಣಗಿ ಹೋಗುವನು." (ಯೋಹಾ. ೧೫, ೬.)

೩) "ಆದರೆ ನೀನು ಮೊದಲಿನ ಪ್ರೀತಿಯನ್ನು ಬಿಟ್ಟು ಬಿಟ್ಟಿದ್ದೀ, ಎಂಬುವದು ನಿನ್ನ ಮೇಲೆ ನನಗುಂಟು. ಹಾಗಾದರೆ, ಎಲ್ಲಿಂದ ಬಿದ್ದು ಹೋದಿ ಎಂದು ಜ್ಞಾಪಕ ಮಾಡಿ ಕೊಂಡು, ಮಾನಸಾಂತರ ಪಟ್ಟು, ಮೊದಲಿನ ಕ್ರಿಯೆಗಳನ್ನು ಮಾಡು." (ಪ್ರಕ. ೨, ೪. ೫.) "ಆದದರಿಂದ, ನಾವು ಕರುಣೆಯನ್ನು ಹೊಂದುವ ಹಾಗೆಯೂ, ತಕ್ಕಾಲದ ಸಹಾಯಕ್ಕಾಗಿ ಕೃಪೆ ಶಿಕ್ಕುವ ಹಾಗೆಯೂ, ಧೈರ್ಯದಿಂದ ಕೃಪೆಯ ಸಿಂಹಾಸನದ ಬಳಿಗೆ ಬರೋಣ." (ಇಬ್ರಿ. ೪, ೧೬.) (**೨೬೭.**)

೪) "ಯಾಕಂದರೆ ನಮ್ಮ ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನ ತಿಳುವಿಕೆಯಿಂದ ಲೋಕದ ಕಳಂಕಗಳಿಂದ ತಪ್ಪಿಸಿ ಕೊಂಡ ಮೇಲೆ, ಇವುಗಳಲ್ಲಿ ಇನ್ನೊಂದು ಸಾರಿ ಶಿಕ್ಕಿ ಕೊಂಡು, ಜಯಿಸಲ್ಪಟ್ಟರೆ, ಅವರಿಗೆ ಮೊದಲನೆ ಸ್ಥಿತಿಗಿಂತ ಕಡೇ ಸ್ಥಿತಿ ಕೆಟ್ಟದ್ದಾಯಿತು." (೨ ಪೇತ್ರ. ೨, ೨೦.)

೫) "ಯಾಕಂದರೆ, ಒಂದು ಸಾರಿ ಬೆಳಕನ್ನು ಹೊಂದಿ, ಪರಲೋಕದ ವರವನ್ನು ರುಚಿ ನೋಡಿ, ಪರಿಶುದ್ಧಾತ್ಮದಲ್ಲಿ ಪಾಲುಗಾರರಾಗಿ, ದೇವರ ಒಳ್ಳೇ ಮಾತನ್ನೂ, ಬರುವ ಲೋಕದ ಬಲಗಳನ್ನೂ, ರುಚಿ ನೋಡಿ, ಜಾರಿ ಬಿದ್ದವರು, ತಮಗೆ ತಾವೇ ದೇವರ ಮಗನನ್ನು ತಿರಿಗಿ ಶಿಲುಬೆಗೆ ಹಾಕಿ, ಅವಮಾನಕ್ಕೆ ಗುರಿ ಮಾಡುವದರಿಂದ, ಅವರನ್ನು ತಿರಿಗಿ ಮಾನಸಾಂತರಕ್ಕೆ ಹೊಸ ಮಾಡುವದಕ್ಕಾಗದು." (ಇಬ್ರಿ. ೬, ೪—೬.)

**೨೭೮.** ನಮ್ಮ ನೀತಿನಿರ್ಣಯದ ನಿಶ್ಚಯತ್ವವು ಕ್ರಿಸ್ತನ ಬೆಲೆಯುಳ್ಳ ಪುಣ್ಯದಲ್ಲಿಯೂ, ಪರಿಶುದ್ಧ ಬರಹವಾಗಿರುವ, ಆ ಪುಣ್ಯವನ್ನು ನಮಗೆ ಎಣಿಸುವಂಥಾ, ದೇವರ ಸ್ಪಷ್ಟವಾಕ್ಯದಲ್ಲಿಯೂ, ನಮ್ಮ ಹೃದಯಗಳಲ್ಲಿ ಆಗುವ ಪರಿಶುದ್ಧಾತ್ಮದ ಸಾಕ್ಷಿಯಲ್ಲಿಯೂ ಆಧಾರಗೊಂಡದೆ[೧]. ಈ ಪರಿಶುದ್ಧಾತ್ಮವು, ಕ್ರಿಸ್ತನ ಪುಣ್ಯವು ನಿಜವಾಗಿ ನಮಗೆ ಸ್ವಕೀಯವಾಯಿತೆಂದು, ವಿಶ್ವಾಸದ ಚರವಸಪೂರ್ಣವಾದ ಸಂತೋಷತೆಯನ್ನೂ[೨],

ದೇವರ ಕೃಪೆಯ ಮೇಲೆ ಮಗುವಿನಂತೆ ಇಡುವ ಭರವಸವನ್ನೂ[೩], ದೇವರ ಸಂಗಡ ನಮಗೆ ಶಾಂತಿ ಅನ್ಯೋನ್ಯಗಳುಂಟೆಂಬ ಆನಂದಕರವಾದ ನಿಶ್ಚಯತ್ವವನ್ನೂ[೪] ನಮ್ಮಲ್ಲಿ ಯತ್ನೈಸುವದರಿಂದ ಭದ್ರವಾಗುತ್ತದೆ. ಈ ಪ್ರಕಾರ ಆಗಲಾಗಿ, ಸಂಶಯದ ಮತ್ತು ಸೈತಾನನ ಶೋಧನೆಗಳಿಗೆಲ್ಲಾ ಧೈರ್ಯವಾಗಿಯೂ ಜಯದ ನಿಶ್ಚಯದಲ್ಲಿಯೂ ಎದುರ್ನಿಂತು, "ನಾನು ಪಾಪಗಳ ಪರಿಹಾರವನ್ನು ನಂಬುತ್ತೇನೆ" ಎಂಬ ಅರಿಕೆಯ ದಿವ್ಯ ಬಲದಲ್ಲಿ ನಿಲ್ಲ ಬಹುದು[೫].

೧) "ಆದರೆ ನಾವು ದೇವರಿಂದ ನಮಗೆ ದಯ ಮಾಡಲ್ಪಟ್ಟವುಗಳನ್ನು ತಿಳಿಯುವ ಹಾಗೆ, ಲೋಕದ ಆತ್ಮವನ್ನಲ್ಲ, ದೇವರಿಂದಾದ ಆತ್ಮವನ್ನು ಹೊಂದಿದ್ಧೇವೆ." (೧ ಕೊರಿ. ೨, ೧೨.) "ದೇವರ ಮಕ್ಕಳಾಗಿದ್ಧೇವೆಂದು, ಆತ್ಮವು ತಾನೇ ನಮ್ಮ ಆತ್ಮದ ಸಂಗಡ ಸಾಕ್ಷಿ ಕೊಡುತ್ತದೆ." (ರೋಮಾ. ೮, ೧೬.)

೨) "ನಾನು ವಿಶ್ವಾಸಿಸಿದವನನ್ನು ಬಲ್ಲೆನು. ಮತ್ತು ನಾನು ಒಪ್ಪಿಸಿದ್ದನ್ನು ಆ ದಿನದ ಮಟ್ಟಿಗೂ ಕಾಪಾಡ ಶಕ್ತನಾಗಿದ್ಧಾನೆಂದು, ನಿಶ್ಚೈಸಿ ಕೊಂಡಿದ್ಧೇನೆ." (೨ ತಿಮೊ. ೧, ೧೨.)

೩) "ಯಾಕಂದರೆ ತಿರಿಗಿ ಭಯಕ್ಕಾಗಿ ದಾಸತ್ವದ ಆತ್ಮವನ್ನು ಹೊಂದದೆ, ಪುತ್ರಸ್ವೀಕಾರದ ಆತ್ಮವನ್ನು ಹೊಂದಿದ್ಧೀರಿ; ಅದರಿಂದ ಅಪ್ಪಾ, ತಂದೆಯೇ, ಎಂದು ಕೂಸುತ್ತೇವೆ." (ರೋಮಾ. ೮, ೧೫.)

೪) "ಯಾರ ಅನ್ಯಾಯಗಳು ಪರಿಹರಿಸಲ್ಪಟ್ಟವೆಯೋ, ಯಾರ ಪಾಪಗಳು ಮುಚ್ಚಲ್ಪಟ್ಟವೆಯೋ, ಅವರೇ ಭಾಗ್ಯವಂತರು." (ರೋಮಾ. ೪, ೭.) "ವಿಶ್ವಾಸದಿಂದ ನೀತಿನಿರ್ಣಯ ಪಟ್ಟ ನಮಗೆ" ಇತ್ಯಾದಿ. (ರೋಮಾ. ೫, ೧.) (**೨೭೫**, ೧.)

೫) "ಕ್ರಿಸ್ತನ ಪ್ರೀತಿಗೆ" ಇತ್ಯಾದಿ. (ರೋಮಾ. ೮, ೩೫. ೩೭—೩೯.) (**೨೪.**)

**೨೭೯.** ಕ್ರಿಸ್ತನಲ್ಲಿ ಇಡುವ ವಿಶ್ವಾಸದಿಂದ ಆಗುವ ನೀತಿನಿರ್ಣಯದಿಂದ ದೇವರ ಸಂಗಡ ಸಮಾಧಾನವಾದ ಹೃದಯ ಮಾತ್ರವೆ[೧] ತಂದೆಯಾದ ದೇವರ ಸಂತೋಷಕ್ಕೂ, ಕ್ರಿಸ್ತನ ಮುಂಗುರ್ತಿನ ಪ್ರಕಾರವಾಗಿಯೂ, ಪರಿಶುದ್ಧಾತ್ಮದ ಸಹಾಯದಿಂದಲೂ, ಶುದ್ಧೀಕರಣ, ಅಂದರೆ, ಎಲ್ಲಾ ಜೀವ ನಡತೆಗಳ ನವೀಕರಣ ಹುಟ್ಟಿಸುವ ಭೂಮಿಯಾಗಿರುತ್ತದೆ[೨]. ಯಾಕಂದರೆ ಹೊಸ ಮನೆಯನ್ನು ಕಟ್ಟಲಿಕ್ಕೆ ಆಗ ಬೇಕಾದರೆ, ಹಳೆ ಮನೆಯ ಕಲ್ಲು ಮಣ್ಣು ಇತ್ಯಾದಿಗಳ ರಾಶಿಗಳನ್ನು ತೆಗಿಯ ಬೇಕು. ಆದರೆ ಹ್ಯಾಗೆ ನೀತಿನಿರ್ಣಯವು ಪರಿಶುದ್ಧತ್ವದ ಅತ್ಯವಶ್ಯವಾದ ಔಪಾಧಿಕವಾಗಿಯೂ ಆಧಾರವಾಗಿಯೂ ಇರುತ್ತದೊ, ಹಾಗೆಯೆ ಶುದ್ಧೀಕರಣವು ನೀತಿನಿರ್ಣಯದ ಅತ್ಯವಶ್ಯವಾದ ಫಲವಾಗಿಯೂ ಇರುತ್ತದೆ. ನೀತಿನಿರ್ಣಯದ ಯಥಾರ್ಥತ್ವವೂ ಬಾಳ್ವೆಯೂ ಶುದ್ಧೀಕರಣದಿಂದ ಪರೀಕ್ಷೆಯಾಗುತ್ತದೆ[೩].

೧) "ವಿಶ್ವಾಸದಿಂದುಂಟಾಗದ್ದೆಲ್ಲಾ ಪಾಪವಾಗಿದೆ." (ರೋಮಾ. ೧೪, ೨೩.)

೨) "ಒಬ್ಬನು ಕ್ರಿಸ್ತನಲ್ಲಿದ್ದರೆ, ಹೊಸ ಸೃಷ್ಟಿಯೇ; ಹಳೆಯವುಗಳು ಕಳೆದು ಹೋದವು; ಇಗೋ, ಎಲ್ಲಾ ಹೊಸದಾಯಿತು. ಆದರೆ ಎಲ್ಲಾ ನಮ್ಮನ್ನು ಯೇಸು ಕ್ರಿಸ್ತನ ಮುಖಾಂತರ ತನಗೆ ಅನ್ಯೋನ್ಯ ಮಾಡಿ, ಅನ್ಯೋನ್ಯದ ಸೇವೆಯನ್ನು ನಮಗೆ ಕೊಟ್ಟ ದೇವರಿಂದಲೇ." (೨ ಕೊರಿ. ೫, ೧೭. ೧೮.)

೩) "ಅವರ ಫಲಗಳಿಂದ ಅವರನ್ನು ತಿಳಿಯುವಿರಿ." ಇತ್ಯಾದಿ. (ಮತ್ತಾ. ೭, ೧೬.)

ಪರಿಶಿ. ಇದರಿಂದಲೆ ವಿಶ್ವಾಸದ ಮತ್ತು ಕ್ರಿಯೆಗಳ ಸಮವಾದ ತಾರತಮ್ಯವನ್ನು ತಿಳಕೊಳ್ಳ ಬಹುದು. ಕ್ರಿಯೆಗಳೆಲ್ಲಾ, ವಿಶ್ವಾಸ ಮಾತ್ರವೆ ರಕ್ಷಿಸುತ್ತದೆ, ಆದರೆ ಜೀವವುಳ್ಳ ವಿಶ್ವಾಸ; ಮತ್ತಿದು ಕ್ರಿಯೆಗಳಿಲ್ಲದೆ ಇರ ಕೂಡದು. ಅದೇ ಪ್ರಕಾರ ವಿಶ್ವಾಸವು, ಇತ್ಯಾದಿ. (ಯಾಕೊ. ೨, ೧೭.) (**೨೭೩**, ೩.)

**೨೮೦.** ಹ್ಯಾಗೆ ನೀತಿನಿರ್ಣಯವು ಕ್ರಿಸ್ತನ ಮರಣದ ಪುಣ್ಯದಲ್ಲಿಯೂ, ಹಾಗೆಯೆ ಶುದ್ಧೀಕರಣವು ಮುಖ್ಯವಾಗಿ ಉತ್ಥಾನದಲ್ಲಿ ಜಯದ ಪರಿಪೂರ್ತಿ ಕಾಣಿಸಿದ ಕ್ರಿಸ್ತನ ಜೀವದ ಬಲದಲ್ಲಿ ಆಧಾರಗೊಂಡದೆ. ಮನುಷ್ಯನ ಕಡೆಯಿಂದ ಸ್ವೀಕಾರಕ್ಕೆ ಅಲ್ಲಿ ಹ್ಯಾಗೊ, ಹಾಗೆಯೆ ಇಲ್ಲಿ ಸಹಾ ವಿಶ್ವಾಸವು ಔಪಾಧಿಕವಾಗಿರುತ್ತದೆ. ಪರಿಶುದ್ಧಾತ್ಮವು, ಪುನರ್ಜನ್ಮದಿಂದ ಕ್ರಿಸ್ತನ ಸಂಗಡ ಅತ್ಯಂತವಾದ ಜೀವದ ಅನ್ಯೋನ್ಯದಲ್ಲಿ ಸೇರಿದ ವಿಶ್ವಾಸಿ ಕ್ರಿಸ್ತನಿಗೆ, ಕ್ರಿಸ್ತನು ಉತ್ಥಾನದಲ್ಲಿ ಉಂಟು ಮಾಡಿ, ಬೆಳಕಿಗೆ ತಂದ ಹೊಸ ಜೀವದ ಬಲವನ್ನು (**೨೪೮.**) ಸ್ವಕೀಯ ಮಾಡುವದರಿಂದ, ಶುದ್ಧೀಕರಣವನ್ನು ಉಂಟು ಮಾಡುತ್ತದೆ.

"ನಾನು ದ್ರಾಕ್ಷೇ ಬಳ್ಳಿ, ನೀವು ಕೊಂಬೆಗಳು; ಒಬ್ಬನು ನನ್ನಲ್ಲಿಯೂ, ನಾನು ಅವನಲ್ಲಿಯೂ ನೆಲೆಯಾಗಿದ್ದರೆ, ಅವನು ಬಹಳ ಫಲ ಫಲಿಸುತ್ತಾನೆ; ಯಾಕಂದರೆ ನಾನಿಲ್ಲದೆ ಏನೂ ಮಾಡಲಾರಿರಿ." (ಯೋಹಾ. ೧೫, ೫.)

ಪರಿಶಿ. ನಮ್ಮ ಶುದ್ಧೀಕರಣಕ್ಕೆ ಕ್ರಿಸ್ತನ ಉತ್ಥಾನದ ಸಂಗಡ ಅವಶ್ಯವಾಗಿಯೂ ನಿಜವಾಗಿಯೂ ಇರುವ ಸಂಬಂಧವನ್ನು ಈ ರೀತಿಯಾಗಿ ತಿಳಕೊಳ್ಳ ಬಹುದು. ಮನುಷ್ಯಸಂತತಿಯ ಪೂರ್ಣ ಸ್ವಭಾವವು ಎಲ್ಲಾ ಕಡೆಯಲ್ಲಿಯೂ ಪಾಪದ ರೋಗದಿಂದ ವ್ಯಾಪಿಸಲ್ಪಟ್ಟು ವಿಷಮಯವಾಗಿ ಹೋದ ಕಾರಣ, ಸ್ವಸ್ಥವಾಗುವದು ಅದರಿಂದಲೆ ಬರ ಕೂಡದು. ಆದ್ದರಿಂದ ಕ್ರಿಸ್ತನು ಹೊಸತಾದ ಸ್ವಸ್ಥವಾದ ಜೀವಶಕ್ತಿಯುಳ್ಳ ಅಂಗವಾಗಿ, ಮರಣಸಂಕಟದಲ್ಲಿರುವ ಮನುಷ್ಯಸ್ವಭಾವದಲ್ಲಿ ಸೇರಿ, ಎಲ್ಲಾ ರೋಗದ ಪೂರ್ಣ ಮಾರಕ (ಮರಣ ಉಂಟು ಮಾಡುವ) ಫಲವನ್ನು ತನ್ನ ಮೇಲೆ ತಕ್ಕೊಂಡನು. ಆದರೆ ದೈವತ್ವದ ಪರಿಪೂರ್ತಿ ಎಲ್ಲಾ ಈ ಹೊಸ ಅಂಗದ ಸಂಗಡ ಕೂಡಿ ಕೊಂಡಿದ್ದ ಕಾರಣ, ರೋಗದ ಭಯಂಕರವಾದ ಭಾರಕ್ಕೆ ಒಳ ಬೀಳದೆ, ಅದನ್ನು ಮುರಿದು, ಅದನ್ನು ತನ್ನಲ್ಲಿ ಜೈಸಿತು.

ಈ ಜಯದ ಪ್ರತ್ಯಕ್ಷತೆಯು ಕ್ರಿಸ್ತನ ಉತ್ಥಾನವಾಗಿರುತ್ತದೆ. ಆದರೆ ಈ ಜಯದಿಂದ ಆ ಅಂಗವು ಶರೀರದ ತಲೆಯಾಯಿತು. ಮತ್ತು ಹ್ಯಾಗೆ ಮೊದಲು ಎಲ್ಲಾ ಶರೀರದ ರೋಗವು ಅವನಲ್ಲಿ ಸಂಕಟವನ್ನುಂಟು ಮಾಡಿತೊ, ಹಾಗೆಯೆ ಅವನ ಜಯದ ಬಲವು ಜಯ ಪಡಿಸುವಂಥಾದ್ದಾಗಿ ಎಲ್ಲಾ ಅವಯವತ್ವದಲ್ಲಿ ಯತ್ನೈಸುತ್ತದೆ. ಮತ್ತು ಅವನ ಜೀವದ ಅನಂತ ಪರಿಪೂರ್ತಿಯು ಸ್ವಸ್ಥ ಮಾಡುವಂಥಾದ್ದಾಗಿಯೂ ಬದುಕಿಸುವಂಥಾದ್ದಾಗಿಯೂ, ಶರೀರದ ಒಂದೊಂದು ಅಂಗದಲ್ಲಿ ಅನ್ಯೋನ್ಯದ ನಿಜವಾದ ಬಂಧಗಳಿಂದ, ಅದು ಅವನ ಸಂಗಡ ಕೂಡಿ ಕೊಂಡಿರುವ ಮಟ್ಟಿಗೆ, (ಅಂದರೆ ವಿಶ್ವಾಸದಿಂದ ಕೂಡಿ ಕೊಂಡಿರುವ ಮಟ್ಟಿಗೆ) ಹರಿಯುತ್ತದೆ. ಆದರೆ ತಲೆಯ ಅನ್ಯೋನ್ಯದಲ್ಲಿ ಸೇರಲೊಲ್ಲದ ಮಿಕ್ಕಾದ ಅಂಗಗಳೆಲ್ಲಾ ಸತ್ತು, ಬಿದ್ದು ಹೋಗುತ್ತವೆ.—ಕುಡಿಯು ದ್ರಾಕ್ಷೇಬಳ್ಳಿಯಲ್ಲಿ ನೆಲೆಯಾಗಿದ್ದ ಹೊರ್ತು, ತನ್ನಷ್ಟಕ್ಕೆ ತಾನೆ ಫಲ ಫಲಿಸಲಾರದ ಪ್ರಕಾರ, ನೀವು ನನ್ನಲ್ಲಿ ನೆಲೆಯಾಗಿರದಿದ್ದರೆ, ಫಲ ಫಲಿಸಲಾರಿರಿ. ಯಾವನಾದರೂ ನನ್ನಲ್ಲಿ ನೆಲೆಯಾಗಿರದಿದ್ದರೆ, ಕುಡಿಯ ಹಾಗೆ ಹೊರಗೆ ಬಿಸಾಡಲ್ಪಟ್ಟು, ಒಣಗಿ ಹೋಗುವನು; ಮತ್ತು ಅವುಗಳನ್ನು ಕೂಡಿಸಿ, ಬೆಂಕಿಯೊಳಗೆ ಹಾಕಿ ಸುಡುತ್ತಾರೆ. (ಯೋಹಾ. ೧೫, ೪. ೬.)

**೨೮೧.** ಸತ್ಯವಾದ ನೀತಿನಿರ್ಣಯವು ಹಿಂದಲಿಂದ ಬರುವ ಶುದ್ಧೀಕರಣದ ಹೊರ್ತು ಇರ ಕೂಡದಾದ ಮೇಲೆ, ವಿಮೋಚನೆಯಿಂದ ನಿಯಮವು ತೆಗದು ಹಾಕಲ್ಪಡುವದಿಲ್ಲಾ, ಅದು ಸ್ಥಾಪಿಸಲ್ಪಡುತ್ತದೆ[೧]. ಹ್ಯಾಗಂದರೆ, ಶುದ್ಧೀಕರಣದ ಸ್ವಭಾವವು ನಮ್ಮ ಹೃದಯಗಳಲ್ಲಿ ಪರಿಶುದ್ಧಾತ್ಮದಿಂದ ಹೊಯ್ಯಲ್ಪಟ್ಟ ವಿಧದಿಂದ ಬಲಾತ್ಕಾರವಿಲ್ಲದೆ ಕ್ರಿಸ್ತನ ಬಲದಲ್ಲಿ ನಿಯಮವನ್ನು ಪೂರೈಸುವದರಲ್ಲಿ ಇರುತ್ತದೆ[೨]. ನೀತಿನಿರ್ಣಯದಿಂದ ನಿಯಮದ ಶಾಪವು ಅಳಿಸಲ್ಪಟ್ಟ ಮೇಲೆ, ಶುದ್ಧೀಕರಣದಲ್ಲಿ ನಿಯಮವು ತನ್ನ ಸಂಗಡ ಇರುವ ಆಶೀರ್ವಾದವನ್ನು ಸಹಾ (**೧೫. ೧೪೫.**) ಹಂಚಿ ಕೊಡುವದಕ್ಕೂ ಸಾಧ್ಯ ಮಾಡುವದಕ್ಕೂ ಶಕ್ತಿ ಹೊಂದುತ್ತದೆ[೩].

೧) "ನ್ಯಾಯಪ್ರಮಾಣವನ್ನಾದರೂ," ಇತ್ಯಾದಿ. (ಮತ್ತಾ. ೫, ೧೭. ೧೮.) (ಸಮ ನೋಡು **೨೭೧.**) "ಹಾಗಾದರೆ ವಿಶ್ವಾಸದಿಂದ ನ್ಯಾಯಪ್ರಮಾಣವನ್ನು ವ್ಯರ್ಥ ಮಾಡುತ್ತೇವೋ? ಆಗದು. ನ್ಯಾಯಪ್ರಮಾಣವನ್ನು ಸ್ಥಾಪಿಸುತ್ತೇವೆ." (ರೋಮಾ. ೩, ೩೧.)

೨) "ನಾನು ನನ್ನ ನ್ಯಾಯಪ್ರಮಾಣವನ್ನು ಅವರೊಳಗೆ ಇಟ್ಟು, ಅವರ ಹೃದಯದಲ್ಲಿ ಅದನ್ನು ಬರಿಯುವೆನು." (ಯೆರೆ. ೩೧, ೩೩.) "ಮತ್ತು ನಿಮಗೆ ಹೊಸ ಹೃದಯವನ್ನು ಕೊಟ್ಟು, ಹೊಸ ಆತ್ಮವನ್ನು ನಿಮ್ಮೊಳಗೆ ಇಡುವೆನು; ಕಲ್ಲಿನ ಹೃದಯವನ್ನು ನಿಮ್ಮ ಮಾಂಸದೊಳಗಿಂದ ತೆಗೆದು, ಮಾಂಸದ ಹೃದಯವನ್ನು ನಿಮಗೆ ಕೊಡುವೆನು. ಇದಲ್ಲದೆ ನನ್ನ ಆತ್ಮವನ್ನು ನಿಮ್ಮೊಳಗೆ ಇಟ್ಟು ನೀವು ನನ್ನ ನೇಮಗಳಲ್ಲಿ ನಡೆಯುವ ಹಾಗೆ ಮಾಡು

ವೆನು; ನೀವು ನನ್ನ ನ್ಯಾಯಗಳನ್ನು ಕೈಕೊಂಡು ಮಾಡುವಿರಿ." (ಎಜೇಕಿ. ೩೬, ೨೬. ೨೭.) "ದೇವರ ಪ್ರೀತಿಯು ನಮಗೆ ಕೊಡಲ್ಪಟ್ಟ ಪರಿಶುದ್ಧಾತ್ಮದಿಂದ ನಮ್ಮ ಹೃದಯಗಳಲ್ಲಿ ಹೊಯ್ಯಲ್ಪಟ್ಟದೆ." (ರೋಮಾ. ೫, ೫.) "ಪ್ರೀತಿಯು ನ್ಯಾಯಪ್ರಮಾಣದ ಪೂರ್ತಿಯಾಗಿದೆ." (ರೋಮಾ. ೧೩, ೧೦.)

೩) ೧ ತಿಮೊ. ೪, ೮. (**೧೪೦.**) ಪ್ರಕಟ. ೨, ೧೦. (**೧೪೦.**) ಪ್ರಕಟ. ೧೪, ೧೩. (**೨೯೯**, ೫.) ಮತ್ತಾ. ೨೪, ೩೪—೪೦.

**೨೮೨.** ಆದರೆ ಸ್ವಭಾವದ ಹಳೆ ಜೀವವು ನಮ್ಮಲ್ಲಿ ಕೃಪೆಯ ಹೊಸ ಜೀವದಿಂದ ಪೂರ್ಣವಾಗಿ ಜಯಿಸಲ್ಪಡದೆ ಇರುವ ಮಟ್ಟಿಗೆ, ಶುದ್ಧೀಕರಣವು, ಹೊಸ ಜೀವಕ್ಕೆ ಹಳತರ ಸಂಗಡಲೂ ಆತ್ಮಕ್ಕೆ ಮಾಂಸದ ಸಂಗಡಲೂ ಅಸಾಧಾರಣವಾದ ಎಡೆ ಬಿಡದೆ ಜಯವುಳ್ಳ ಹೋರಾಟದಲ್ಲಿ ಕಂಡು ಬಂದು ಯುಕ್ತವಾಗುತ್ತದೆ. ಆದಕಾರಣ ನಮ್ಮಲ್ಲಿರುವ ಸಮಸ್ತ ಅದೈವಿಕವಾದದ್ದನ್ನು ಪರಾಜಯ ಮಾಡಿ, ಕತ್ತರಿಸಿ ಬಿಡುವದೂ, ಮತ್ತೊಂದು ಕಡೆಯಲ್ಲಿ ಕ್ರಿಸ್ತನ ಹೋಲ್ಪಿಕೆಯಲ್ಲಿ ಪೂರ್ಣವಾಗಿ ರೂಪಿತವಾಗುವದೂ, ಶುದ್ಧೀಕರಣದ ಗುರಿಯಾಗಿರುತ್ತದೆ[೧]. ಆದರೆ ಈ ಗುರಿಯು ದಿನಗಳ ಅಂತ್ಯದಲ್ಲಿ, ಎಲ್ಲಾದರ ಸಂಪೂರ್ತಿಯಲ್ಲಿ ಪೂರ್ಣ ಸಾಧ್ಯವಾಗಿ ಪೂರ್ಣ ಪ್ರತ್ಯಕ್ಷವಾಗ ಬಹುದು. ಯಾಕಂದರೆ, ಸಂಬಂಧದ ಸಹಸ್ರ ಪಾಶಗಳು, ಊದರೆಯು ಗೋಧಿಯ ಸಂಗಡ ಬೆಳಿಯ ಬೇಕಾದ (ಮತ್ತಾ ೧೩, ೨೯. ೩೦.) ಈ ಲೋಕಕ್ಕೆ ನಮ್ಮನ್ನು ಗಂಟು ಹಾಕುತ್ತದೆ[೨]. ಶುದ್ಧೀಕರಣದ ಪ್ರವರ್ತನವು ಕಾಣ ಬರುವ ಹಾಗೆ, ಆ ಗುರಿಗೆ ಮೆಲ್ಲ ಮೆಲ್ಲಕೆ ಸ್ಥಿರವಾಗಿ ಸಮಿಾಪಿಸುವದು ಸಹಾ, ಅದು ಆತ್ಮದ ಪ್ರಕಾರ ವಿಚಾರಿಸಲ್ಪಡುವ ಕಾರಣ, (೧ ಕೊರಿ. ೨, ೧೩. ೧೪.) ಮಾಂಸದ ಕಣ್ಣುಗಳಿಗೆ ಹೆಚ್ಚಾಗಿ ಮರೆಯಾಗಿರುತ್ತದೆ[೪].

೧) "ಆತ್ಮದಲ್ಲಿ ನಡೆದುಕೊಳ್ಳಿರಿ, ಆಗ ಮಾಂಸದ ಆಶೆಯನ್ನು ತೀರಿಸದೆ ಇರುವಿರಿ. ಯಾಕಂದರೆ ಮಾಂಸವು ಆತ್ಮಕ್ಕೆ ವಿರೋಧವಾಗಿಯೂ, ಆತ್ಮವು ಮಾಂಸಕ್ಕೆ ವಿರೋಧವಾಗಿಯೂ ಆಶಿಸುತ್ತದೆ; ನೀವು ಇಚ್ಛೈಸುವವುಗಳನ್ನು ಮಾಡದ ಹಾಗೆ, ಅವು ಒಂದಕ್ಕೊಂದು ವಿರೋಧವಾಗಿವೆ." (ಗಲಾ. ೫, ೧೬. ೧೭.)—(ರೋಮಾ. ೭, ೧೮—೨೫.) "ಒಳ್ಳೆ ಮನುಷ್ಯನ ಪ್ರಕಾರ ದೇವರ ನ್ಯಾಯಪ್ರಮಾಣದಲ್ಲಿ ಆನಂದ ಪಡುತ್ತೇನೆ. ಆದರೆ ನನ್ನ ಮನಸ್ಸಿನ ಪ್ರಮಾಣದ ಸಂಗಡ ಯುದ್ಧ ಮಾಡಿ ನನ್ನ ಅಂಗಗಳಲ್ಲಿರುವ ಪಾಪದ ಪ್ರಮಾಣಕ್ಕೆ ನನ್ನನ್ನು ಸೆರೆ ಬೀಳ ಮಾಡುವ ಬೇರೆ ಪ್ರಮಾಣವನ್ನು ನನ್ನ ಅಂಗಗಳಲ್ಲಿ ನೋಡುತ್ತೇನೆ." (ಶ್ಲೋ. ೨೨. ೨೩.) "ಮುಂಚಿನ ನಡತೆಯ ವಿಷಯವಾಗಿ ಮೋಸದ ಆಶೆಗಳ ಪ್ರಕಾರ ಕೆಟ್ಟು ಹೋದ ಹಳೇ ಮನುಷ್ಯನನ್ನು ತೆಗೆದು ಹಾಕಿ, ನಿಮ್ಮ ಬುದ್ಧಿಯ ಆತ್ಮದಲ್ಲಿ ಹೊಸಬರಾ

ಗಿ, ದೇವರ ಪ್ರಕಾರ ನೀತಿಯಲ್ಲಿಯೂ ಸತ್ಯದ ಪರಿಶುದ್ಧತ್ವದಲ್ಲಿಯೂ ನಿರ್ಮಿಸಲ್ಪಟ್ಟ ಹೊಸ ಮನುಷ್ಯನನ್ನು ಧರಿಸಿ ಕೊಳ್ಳ ಅವನಿಂದ ಬೋಧಿಸಲ್ಪಟ್ಟಿರಲ್ಲವೋ?" (ಎಫೆ. ೪, ೨೧—೨೪.) (ಕೊಲೊ. ೩, ೮.)

೨) "ವಿಶ್ವಾಸವು, ದೇವರ ಮಗನ ತಿಳುವಿಕೆಯು, ಇವುಗಳ ಐಕ್ಯಕ್ಕೂ, ಪೂರ್ಣ ಗಂಡಸುತನಕ್ಕೂ, ಕ್ರಿಸ್ತನ ಸಂಪೂರ್ಣತೆಯ ನೀಳದ ಪ್ರಮಾಣಕ್ಕೂ ನಾವೆಲ್ಲರು ಕೂಡ ಸೇರುವ ಪರ್ಯಂತರ ಕೊಟ್ಟಿದ್ದಾನೆ." (ಎಫೆ. ೪, ೧೫.)

೩) "ನಾನು ಸಂಕಟವುಳ್ಳ ಮನುಷ್ಯ! ಈ ಮರಣದ ಶರೀರದಿಂದ ನನ್ನನ್ನು ತಪ್ಪಿಸುವವನ್ಯಾರು?" (ರೋಮಾ. ೭, ೨೪.)

೪) "ಯಾಕಂದರೆ ನೀವು ಸತ್ತವರಾಗಿದ್ದೀರಿ; ಮತ್ತು ನಿಮ್ಮ ಜೀವವು ಕ್ರಿಸ್ತನ ಸಂಗಡ ದೇವರಲ್ಲಿ ಅಡಗಿ ಅದೆ. ನಮ್ಮ ಜೀವವಾದ ಕ್ರಿಸ್ತನು ಪ್ರತ್ಯಕ್ಷವಾಗುವಾಗ್ಯೆ, ನೀವು ಸಹಾ ಅವನ ಸಂಗಡ ಮಹಿಮೆಯಲ್ಲಿ ಪ್ರತ್ಯಕ್ಷವಾಗುವಿರಿ." (ಕೊಲೊ. ೩, ೩. ೪.) "ಶಾಂತಿಯೂ ಸಮಾಧಾನವೂ ಉಳ್ಳ ಆತ್ಮದ ನಿರ್ಲಯವಾದದರಲ್ಲಿರುವ ಹೃದಯದ ಅಂತರಂಗವಾದ ಮನುಷ್ಯನು ನಿಮಗೆ ಇರ ಬೇಕು. ಅದೇ ದೇವರ ಮುಂದೆ ಬಹು ಬೆಲೆಯುಳ್ಳದ್ದಾಗಿದೆ." (೧ ಪೇತ್ರ. ೩, ೪. ೫.)

**೨೮೩.** ಆದಕಾರಣ ಶುದ್ಧೀಕರಣದ ಸ್ಥಿತಿಯಲ್ಲಿ ಸಹಾ ಪೂರ್ಣವಾಗಿ ಪಾಪರಹಿತತ್ವವು ಉಂಟಾಗಿರುವದಿಲ್ಲಾ[೧]. ನಾವು ಬಹು ವಿಧವಾಗಿ ದಿನ ದಿನ ಈ ಮರಣದ ಶರೀರದಿಂದ (ರೋಮಾ. ೭, ೨೪.) ಈ ಪಾಪದ ಲೋಕಕ್ಕೆ ಬದ್ಧರಾಗಿರುವ ಪರ್ಯಂತ ಒಡ ಹುಟ್ಟಿದ ಪಾಪತ್ವದಿಂದ ಎಳಿಯಲ್ಪಟ್ಟು, ಬಹು ವಿಧವಾಗಿ ಪಾಪ ಮಾಡುತ್ತೇವೆ. ಆದರೂ ಸಂಕಲ್ಪದಿಂದಲೂ, ತಿಳಿದು ಬೇಕೆಂತಲೂ ಅಲ್ಲ (ಯಾಕಂದರೆ ಅದರಿಂದ ಕ್ರಿಸ್ತನ ಸಂಗಡಲಿರುವ ಅನ್ಯೋನ್ಯವು—ಒಂದು ವೇಳೆ ತಿರಿಗಿ ಸಿಕ್ಕ ಕೂಡದಂತೆ [೨೭೭.] ಸ್ವಾಮಿದ್ರೋಹವಾಗಿಯೂ ಬಲಾತ್ಕಾರದಿಂದಲೂ ತೆಗದು ಹಾಕಲ್ಪಟ್ಟೀತು) ಉದ್ವೇಗದಿಂದಲೂ (ಗಲಾ. ೬, ೧.) ತಪ್ಪಿನಿಂದಲೂ ಮಾತ್ರವೆ (ಯಾಕೊ. ೫, ೧೯.) ಪಾಪ ಮಾಡುತ್ತೇವೆ. ದೇವರಿಂದ ಹುಟ್ಟಿದ ಒಳ ಮನುಷ್ಯನ ಪ್ರಕಾರ ನಾವು ಪಾಪ ಮಾಡ ಕೂಡದೆಂಬದು ಸರಿ[೨]. ಆದರೆ ಬಹಳ ಸರ್ತಿ ಸಂಭವಿಸುವ ಪ್ರಕಾರ ನಾವು ಯಾವಾಗಲೂ ಜಾಗ್ರತೆಯಿಂದಲೂ ಪ್ರಾರ್ಥನೆಯಿಂದಲೂ ಸಿದ್ಧವಾಗಿಯೂ ಸನ್ನದ್ಧರಾಗಿಯೂ (ಎಫೆ. ೬, ೧೦—೧೭.) (೨೫೭, ೨.) ಎಚ್ಚರಿಕೆಯಾಗಿರದೆ, ಲೋಕದಿಂದಲೂ ಮಾಂಸದಿಂದಲೂ ಪಾಪಕ್ಕೆ ಎಳೆಯಲ್ಪಡುತ್ತೇವೆಂಬದು ನಿಶ್ಚಯ. ಆದರೆ ಇದಕ್ಕಾಗಿ ಬೇಗ ಧೈರ್ಯ ಕಳಕೊಳ್ಳ ಬಾರದು. ತತ್‌ಕ್ಷಣದಲ್ಲಿ ಕೃಪೆಯ ಸಿಂಹಾಸನದ ಬಳಿಗೆ ಹೋಗಿ[೩], ಅಲ್ಲಿ ಕ್ಷಮೆಯನ್ನೂ ಹೊಸ ಹೋರಾಟಕ್ಕೆ ಬಲವನ್ನೂ ಬೇಡಿ ಕೊಳ್ಳ ಬೇಕು.

೧) "ನಮಗೆ ಪಾಪವಿಲ್ಲವೆಂದು ಹೇಳಿದರೆ, ನಮ್ಮನ್ನು ನಾವೇ ಮೋಸಗೊಳಿಸುತ್ತೇವೆ, ಮತ್ತು ಸತ್ಯವು ನಮ್ಮಲ್ಲಿ ಇಲ್ಲ." (೧ ಯೋಹಾ. ೧, ೮.)

೨) "ದೇವರಿಂದ ಹುಟ್ಟಿದ ಪ್ರತಿ ಮನುಷ್ಯನು ಪಾಪ ಮಾಡುವದಿಲ್ಲ, ಯಾಕಂದರೆ ಅವನ ಬೀಜವು ಅವನಲ್ಲಿ ನೆಲೆಯಾಗಿದೆ. ಮತ್ತು ಅವನು, ದೇವರಿಂದ ಹುಟ್ಟಿದ ಕಾರಣ, ಪಾಪ ಮಾಡಲಾರನು." (೧ ಯೋಹಾ. ೩, ೯.) (ಶ್ಲೋ. ೫, ೧೮.)

೩) "ಯಾರಾದರೂ ಪಾಪ ಮಾಡಿದರೆ," ಇತ್ಯಾದಿ. (೧ ಯೋಹಾ. ೨, ೧. ೨.) (**೨೩೪.**)

**೨೮೪.** ಮೇಲೆ ಹೇಳಿದ ಪರಿಶುದ್ಧಾತ್ಮದ ಕೃಪಾಪ್ರಯತ್ನಗಳು ಒಂದೆ ಪೆಟ್ಟಿಗೆ ಆಗಿ ತೀರಿ ಹೋಗುವದಿಲ್ಲ. ನಾವು ಕೃಪೆಯಲ್ಲಿಯೂ ದೇವರ ಪುತ್ರತ್ವದಲ್ಲಿಯೂ ಉಳಕೊಂಡು ಬೆಳಿಯ ಬೇಕಾದರೆ, ನಮಗೆ ಅವುಗಳ ನವೀಕರಣವೂ ಬಲ ಪಡಿಸೋಣವೂ ವಿಸ್ತರಿಸೋಣವೂ ಅವಶ್ಯ[1]. ಮತ್ತು ಇದು ಪಾಲನೆಯಿಂದ ಆಗುತ್ತದೆ. ಇದು ಯಾಕೆ ಅತ್ಯವಶ್ಯವಾಗಿರುತ್ತದೆಂದರೆ, ನಮ್ಮ ಆತ್ಮಿಕ ಜೀವವು ಎಲ್ಲಾ ಕಡೆಯಿಂದಲೂ ಕಂಟಕಗಳಿಂದ ಬೆದರಿಸಲ್ಪಡುತ್ತದೆ. ಮತ್ತು ಮುಖ್ಯವಾಗಿ ಮೂವರು ಶತ್ರುಗಳು ಎಡೆ ಬಿಡದೆ ನಮ್ಮನ್ನು ಕ್ರಿಸ್ತನಿಂದ ದೂರ ಮಾಡಲಿಕ್ಕೆ ನೋಡುತ್ತವೆ. — ನಮ್ಮ ಸ್ವಂತ ಮಾಂಸದ ಅಭಿಲಾಷೆ,[2] ಲೋಕದ ವಿಮೋಹನ[3], ಪಿಶಾಚನ ಶೋಧನೆಗಳು.[4]

೧) "ಒಳ್ಳೇ ಕೆಲಸವನ್ನು ನಿಮ್ಮಲ್ಲಿ ಆರಂಭಿಸಿದವನು, ಯೇಸು ಕ್ರಿಸ್ತನ ದಿನದ ಮುಟ್ಟಿಗೂ, ಅದನ್ನು ಪೂರೈಸುವನೆಂಬುವದನ್ನೇ ನಂಬಿ ಕೊಂಡಿದ್ದೇನೆ." (ಫಿಲಿ. ೧, ೬.)

೨) "ಒಬ್ಬೊಬ್ಬನು" ಇತ್ಯಾದಿ. (ಯಾಕೊ. ೧, ೧೪.) (**೧೨೭.**) (ರೋಮಾ. ೭, ೧೪ — ೨೪.) (**೧೪೨, ೨.**)

೩) "ಲೋಕವನ್ನಾದರೂ," ಇತ್ಯಾದಿ. (೧ ಯೋಹಾ. ೨, ೧೫—೧೭.) (**೨೮.**)

೪) "ರಕ್ತಮಾಂಸಕ್ಕೆ," ಇತ್ಯಾದಿ. (ಎಫೆ. ೬, ೧೨.) (**೨೫೭, ೨.**)

**೨೮೫.** ದೇವರ ರಾಜ್ಯದ ಇಹದ ವಿಕಾಸಗತಿಯ ಕಾಲದಲ್ಲಿ ಖಂಡಿತ ವಿಶ್ವಾಸಕ್ಕೂ ಖಂಡಿತ ಅವಿಶ್ವಾಸಕ್ಕೂ ಮಧ್ಯದಲ್ಲಿ ಅಮಿತ ಪರ್ಯಾಯಗಳು ಉಂಟು (ತಾರತಮ್ಯ ಸ್ಥಾನಗಳು). ಆದರೆ ಪರಿಶುದ್ಧಾತ್ಮದ ಕೆಲಸವು, ತನ್ನ ಕೃಪಾಪ್ರಯತ್ನಗಳನ್ನು ಮುಂದಿಟ್ಟು ಕೊಟ್ಟು, ಎಲ್ಲಾ ಚಂಚಲತ್ವವನ್ನು ಇತ್ತ ಕಡೆಯಲ್ಲಿಯಾಗಲಿ ಅತ್ತ ಕಡೆಯಲ್ಲಿ ಆಗಲಿ ಪೂರ್ಣವಾದ ಖಂಡಿತ ಅಚಾಂಚಲ್ಯಕ್ಕೆ ತರುವದಾಗಿರುತ್ತದೆ. ಯಾಕಂದರೆ ಅಷ್ಟಾಗುವ ಮೊದಲು, ನ್ಯಾಯಶೀರ್ಪೂ ಎಲ್ಲಾದರ ಸಂಪೂರ್ತಿಯೂ ಬರ ಕೂಡದು. ಆದರೆ ಈ ಕೃಪಾಪ್ರಯತ್ನಗಳಿಗೆ ತನ್ನ ಹೃದಯವನ್ನು ತೆರದು, ಆ ಪ್ರಕಾರ ಪರಿಶುದ್ಧನೂ ಭಾಗ್ಯವಂ

ತನೂ ಆಗುವದೂ, ಅಥವಾ ಅವುಗಳನ್ನು ತನ್ನ ಕಡೆಗೆ ಬರುವಷ್ಟು ಸಾರಿ ತಿರಿಗಿ ತಿರಿಗಿ ಕಠಿಣ ಮನಸ್ಸಿನಿಂದ ಧಿಕ್ಕರಿಸಿ, ಆ ಪ್ರಕಾರ ತನ್ನ ಮೇಲೆ ತಾನೇ ನಿತ್ಯ ಶಿಕ್ಷೆನಿರ್ಣಯದ ತೀರ್ಪು ಉಚ್ಚರಿಸುವದೂ, ಈ ಎರಡೂ ಮನುಷ್ಯನ ಸ್ವಂತ ಕೆಲಸವಾಗಿರುತ್ತದೆ. ಪರಿಶುದ್ಧಾತ್ಮನ ಯಾವ ಕೃಪಾಪ್ರಯತ್ನವಾದರೂ ನಡಿಯ ಕೂಡದಂತಿರುವ ಮನುಷ್ಯನ ಸ್ಥಿತಿಯು ಕಠಿಣತ್ವವಾಗಿರುತ್ತದೆ. ಮತ್ತು ಅದಕ್ಕೆ ತೀರಿಸುವ ಪಾಪವು ಎಲ್ಲಾ ಪಾಪಗಳಲ್ಲಿ ಅದರ ಸ್ವಭಾವದ ಪ್ರಕಾರ ಇಹದಲ್ಲಿಯಾಗಲಿ ಪರದಲ್ಲಿಯಾಗಲಿ ಕ್ಷಮಿಸಲ್ಪಡ ಕೂಡದ ಒಂದೆಯಾಗಿರುವ ಪರಿಶುದ್ಧಾತ್ಮನಿಗೆ ವಿರೋಧವಾದ ಪಾಪ (ಅಥವಾ ದೂಷಣೆ). ಅದರಿಂದ ಮನುಷ್ಯನು ತಿರಿಗಿ ತರಲ್ಪಡ ಕೂಡದಂತೆ, ತನ್ನನ್ನು ನಿತ್ಯಮರಣದ ತೋಳುಗಳಲ್ಲಿ ಬಿಸಾಡುವದರಿಂದ, ಅದಕ್ಕೆ ಮರಣಕ್ಕೆ ಪಾತ್ರವಾದ ಪಾಪವೆಂದು ಹೆಸರುಂಟು[೧].

೧) "ನಿಮಗೆ ಹೇಳುತ್ತೇನೆ, ಸಮಸ್ತ ಪಾಪವೂ ದೂಷಣೆಯೂ ಮನುಷ್ಯರಿಗೆ ಮನ್ನಿಸಲ್ಪಡುವವು; ಆದರೆ ಆತ್ಮಕ್ಕೆ ವಿರೋಧವಾಗಿರುವ ದೂಷಣೆಯು ಮನುಷ್ಯರಿಗೆ ಮನ್ನಿಸಲ್ಪಡದು." (ಮತ್ತಾ. ೧೨, ೩೧.) "ಮರಣಕ್ಕೆ ಪಾತ್ರವಾದ ಪಾಪ ಉಂಟು; ಅದಕ್ಕೋಸ್ಕರ ಪ್ರಾರ್ಥಿಸ ಬೇಕೆಂದು, ನಾನು ಹೇಳುವದಿಲ್ಲ." (೧ ಯೋಹಾ. ೫, ೧೬.) "ಯಾಕಂದರೆ ನಾವು ಸತ್ಯದ ತಿಳುವಿಕೆಯನ್ನು ಹೊಂದಿದ ಮೇಲೆ ಬೇಕಾಗಿ ಪಾಪ ಮಾಡಿದರೆ" ಇತ್ಯಾದಿ. (ಇಬ್ರಿ. ೧೦, ೨೬. ೨೭.) (ಸಮ ನೋಡು **೨೭೬**, ೩.) "ಯಾಕಂದರೆ ಒಂದು ಸಾರಿ ಬೆಳಕನ್ನು ಹೊಂದಿ," ಇತ್ಯಾದಿ. (ಇಬ್ರಿ. ೬, ೪—೬.) (**೨೭೭**, ೪.)

## ಇ.) ಪರಿಶುದ್ಧ ಕ್ರೈಸ್ತಸಭೆ.

**೨೮೬.** ಸಭೆ ಅಂದರೆ ಕ್ರಿಸ್ತನ ಶರೀರ[೧], ಅಂದರೆ, ಸ್ನಾನದಿಂದಲೂ ಪುನರ್ಜನ್ಮದಿಂದಲೂ ಕ್ರಿಸ್ತನ ಜೀವದ ಅನ್ಯೋನ್ಯದಲ್ಲಿ ಒಳನೆಡಲ್ಪಟ್ಟವರೆಲ್ಲರ ಅವಯವಸಹಿತವಾದ (೧ಕೊರಿ. ೧೨, ೧೨—೨೭.) ಏಕತ್ವ. ಅದು, ಕ್ರಿಸ್ತನು ತೀರಿಸಿದ ರಕ್ಷಣೆಯಲ್ಲಿ ವಾಕ್ಯಪ್ರಸಾದಗಳ ಪರಿಮುಖವಾಗಿ ಪರಿಶುದ್ಧಾತ್ಮದಿಂದ ಸ್ಥಾಪಿಸಲ್ಪಡುತ್ತದೆ. ಅದೇ ಆತ್ಮವು ಅದನ್ನು ವಾಕ್ಯದಿಂದಲೂ ಪ್ರಸಾದಗಳಿಂದಲೂ ಎಡೆ ಬಿಡದೆ ಹೊರಗಿನ ಕಡೆಗೆ ವಿಸ್ತರಿಸಿ, ಒಳಗಿನ ಕಡೆಯಲ್ಲಿ ಕಟ್ಟಿ, ಬಲ ಪಡಿಸುತ್ತಾ ಬರುತ್ತದೆ[೨].

೧) "ಅವನ ಶರೀರವೂ, ಎಲ್ಲವನ್ನು ಎಲ್ಲವುಗಳಲ್ಲಿ ತುಂಬಿಸುವವನ ಸಂಪೂರ್ಣತೆಯೂ, ಆಗಿರುವ ಸಭೆಗೆ ಅವನನ್ನು ಎಲ್ಲಾದರ ಮೇಲೆ ತಲೆಯಾಗಿ ಕೊಟ್ಟಿದ್ದಾನೆ." (ಎಫೆ. ೧, ೨೩.)

೨) "ಹೀಗಿರುವದರಿಂದ ಇನ್ನು ಅನ್ಯರೂ ಪರವಾಸಿಗಳೂ ಅಲ್ಲ, ಪರಿಶುದ್ಧರ ಸಂಗಡ ಪಟ್ಟಣವಾಸಿಗಳೂ, ದೇವರ ಮನೆತನದವರೂ ಆಗಿ, ಅಪೊಸ್ತಲರ, ಪ್ರವಾದಿಗಳ ಅಸ್ತಿವಾ

ರದ ಮೇಲೆ ಕಟ್ಟಲ್ಪಟ್ಟವರಾಗಿದ್ದೀರಿ; ಯೇಸು ಕ್ರಿಸ್ತನು ತಾನೇ ಮೂಲೇ ಕಲ್ಲಾಗಿದ್ದಾನೆ. ಅವನಲ್ಲಿ ಕಟ್ಟುವಿಕೆ ಎಲ್ಲಾ ಚನ್ನಾಗಿ ಜೋಡಿಸಲ್ಪಟ್ಟು, ಕರ್ತನಲ್ಲಿ ಪರಿಶುದ್ಧ ಮಂದಿರವಾಗ ಬೆಳೆಯುತ್ತದೆ; ಅವನಲ್ಲಿ ನೀವೂ, ದೇವರಿಗೆ ಆತ್ಮದಿಂದ ವಾಸಸ್ಥಾನವಾಗುವ ಹಾಗೆ, ಕೂಡ ಕಟ್ಟಲ್ಪಟ್ಟಿದ್ದೀರಿ." (ಎಫೆ. ೨, ೧೯—೨೨.)

ಪರಿಶಿ. ಸಭೆಯು, ಚನ್ನಾಗಿ, ದೃಷ್ಟಿಸಿದರೆ, ಎರಡು ವಿಧವಾಗಿರುತ್ತದೆ. ಆಕಾರದ ಪ್ರಕಾರ ಕಾರ್ಯಾನೆಯಾಗಿದ್ದು, ಅದರ ಮಧ್ಯದಲ್ಲಿಯೂ ವಸ್ತುವಿನ ಪ್ರಕಾರ ದೇವರ ಕಟ್ಟುವಿಕೆಯಾಗಿದ್ದು ಅದರ ಮೇಲೆಯೂ ಪರಿಶುದ್ಧಾತ್ಮವು ವಾಕ್ಯದಿಂದಲೂ ಪ್ರಸಾದಗಳಿಂದಲೂ ತನ್ನ ಉದ್ಯೋಗವನ್ನೂ ಕೆಲಸವನ್ನೂ ಮಾಡಿ ತೀರಿಸುತ್ತದೆ.

**೨೮೭.** ಸಭೆಯಲ್ಲಿ ಎಲ್ಲಾ ಅಂಗಗಳು ಕರಣರಹಿತವಾಗಿ ತಲೆಗೆ ಕೂಡಿಯವೆ. ಮತ್ತು ಎಲ್ಲರಿಗೂ ತಪ್ಪದೆ ಕೃಪಾಸನದ ಬಳಿಗೆ ಪ್ರವೇಶವು ತೆರದದೆ. (ಇಬ್ರಿ. ೪, ೧೬.) (**೨೭೩.**) (ಸಮ ನೋಡು ಮತ್ತಾ. ೨೭, ೫೧.) ಹ್ಯಾಗಂದರೆ, ಅವರೆಲ್ಲರು ಆತ್ಮಿಕ ಯಾಜಕತನಕ್ಕೆ ಕರಿಯಲ್ಪಟ್ಟಿದ್ದಾರೆ೧). ಮತ್ತು ದೇವರ ಬಲಗಡೆಯಲ್ಲಿ ಕೂತುಕೊಂಡು, ಒಬ್ಬನೆ ಆಗಿರುವ ನಿತ್ಯ ಪ್ರಧಾನಯಾಜಕನ ಹೊರ್ತು, ಮತ್ತೊಬ್ಬ ಮಧ್ಯಸ್ಥನೂ ಯಾಜಕನೂ ಅವರಿಗಾಗಿ ಕಾರ್ಯ ನಡಿಸ ಬೇಕೆಂಬ ಅವಶ್ಯ ಅವರಿಗಿಲ್ಲಾ. (**೨೨೬.**)

೧) "ನೀವು ಸಹ ಜೀವವುಳ್ಳ ಕಲ್ಲುಗಳಂತೆ ಆತ್ಮಭಾವವಾದ ಮನೆಯಾಗಿಯೂ, ಯೇಸು ಕ್ರಿಸ್ತನ ಮುಖಾಂತರ ದೇವರಿಗೆ ಸಮರ್ಪಕವಾದ ಆತ್ಮಭಾವವಾದ ಬಲಿಗಳನ್ನು ಅರ್ಪಿಸುವ ಪರಿಶುದ್ಧ ಯಾಜಕತ್ವವಾಗಿಯೂ, ಕಟ್ಟಲ್ಪಡಿರಿ. . . ಆದರೆ ನೀವು ಆಯಲ್ಪಟ್ಟ ಸಂತತಿಯೂ, ರಾಜಯಾಜಕತ್ವವೂ, ಪರಿಶುದ್ಧ ಜನಾಂಗವೂ, ಸ್ವಂತ ಪ್ರಜೆಯೂ, ಆಗಿದ್ದೀರಿ." (೧ ಪೇತ್ರ. ೨, ೫. ೯.)

**೨೮೮.** ಆದರೆ ದೇವರ ಕ್ರಮದ ಪ್ರಕಾರವಾಗಿಯೂ (೧ ಕೊರಿ. ೧೨, ೨೮.) ಮನುಷ್ಯರಿಗೆ ಅವಶ್ಯವಾಗಿರುವ ಪ್ರಕಾರವಾಗಿಯೂ ಇಲ್ಲಿ ಭೂಮಿಯಲ್ಲಿ ಪುಷ್ಟಿಯಾಗಿದ್ದು ಪ್ರವರ್ತಿಸುವದಕ್ಕೋಸ್ಕರ, ಸಭೆಗೆ ಪರಿಶುದ್ಧಾತ್ಮದ ಅದೃಶ್ಯವಾದ ನಡಿಸೋಣ ಅಧ್ಯಕ್ಷತನ ಸಾಕೋಣಗಳ ಹೊರ್ತು, ವಾಕ್ಯದ ನಿಯಮಿಸಲ್ಪಟ್ಟ ಸೇವಕರ ದೃಶ್ಯವಾದ ಸಾಕೋಣವೂ ನಡಿಸೋಣವೂ ಬೇಕು. ಇವರು ಕ್ರಿಸ್ತನ ಹೆಸರಿನಲ್ಲಿಯೂ ಅಪ್ಪಣೆಯಿಂದಲೂ (೨ ಕೊರಿ. ೫, ೧೯. ೨೦.) (**೨೬೭**, ೩.) ಅಪೊಸ್ತೊಲಿಕ ಅಧಿಕಾರದಿಂದಲೂ, ವಾಕ್ಯದ ಪ್ರಸಂಗವನ್ನೂ ಪ್ರಸಾದಗಳನ್ನೂ ಹಂಚಿ, ಆತ್ಮಿಕ ಜೀವದ ಪಾಲನೆಯನ್ನು ಸಭೆಯಲ್ಲಿ ನಡಿಸ ಬೇಕು. (ಅ. ಕ್ರಿ. ೨೦, ೨೮.) ಹಾಗೆಯೆ ಅದೆ ಕಾರಣದಿಂದ, ಅದಕ್ಕೆ ಕ್ರಿಸ್ತನೆಂಬ ಸಾಮಾನ್ಯ ತಲೆಯಾಗಿರುವ ಏಕತ್ವದ ಹೊರ್ತು, ಬಹಿರಂಗದ ಭದ್ರವಾದ ಸಂಬಂಧವೂ, ಎಲ್ಲಾ

ಕ್ರೈಸ್ತ ತಿಳುವಿಕೆಗೆ ಬುಗ್ಗೆಯೂ ಸೂತ್ರವೂ ಆಗಿರುವ ದೇವರ ವಾಕ್ಯದ ಹೊರ್ತು, ತನ್ನ ಸಾಮಾನ್ಯ ವಿಶ್ವಾಸಕ್ಕೂ ದೇವರ ವಾಕ್ಯದಲ್ಲಿ ತನಗಾದ ತಿಳುವಿಕೆಗೂ ಸಾಕ್ಷಿಯಾಗಿಯೂ ಸಭಾಸೇವಕರಿಗೆ ಬೋಧನೆಯ ಅವಶ್ಯವಾದ ಸೂತ್ರವಾಗಿಯೂ, ಮನಸೋ ಇಚ್ಛೆ ಬೋಧಿಸುವವರಿಗೂ ಸುಳ್ಳು ಬೋಧನೆಗೂ ಪ್ರತಿಯಾದ ಸ್ಥಿರ ನಿರ್ಬಂಧವಾಗಿಯೂ ಇರ ತಕ್ಕ ಪ್ರತ್ಯೇಕವಾದ ಅರಿಕೆಯ **ಪುಸ್ತಕವೂ** ಸಹಾ ಬೇಕು. (ಸಮ ನೋಡು **೭.**)

ಪರಿಶಿ. ಪರಿಶುದ್ಧ ಬರಹವು ನಂಬ ತಕ್ಕದ್ದನ್ನು ನಮಗೆ ನಿಶ್ಚೈಸುತ್ತದೆ; ಅರಿಕೆಯ ಪುಸ್ತಕಗಳು ನಾವು ನಂಬಿದ್ದನ್ನು ತಿಳಿಸುತ್ತವೆ.

**೨೮೯.** ದೃಶ್ಯಸಭೆ ಅಂದರೆ, ಈ ಪಾಪ ಅಪೂರ್ಣತ್ವಗಳ ಲೋಕದಲ್ಲಿ ಕ್ರೈಸ್ತಸಭೆಯ ಬಹಿರಂಗದ ಪ್ರತ್ಯಕ್ಷತೆಯೂ ಅವಯವತ್ವವೂ ಆಗಿರುತ್ತದೆ. ದೃಶ್ಯಸಭೆಯು, ಕ್ರಿಸ್ತನ ಹೆಸರಿನಲ್ಲಿ ಸ್ನಾನ ಹೊಂದಿ, ಅವನ ಹೆಸರನ್ನು ಅರಿಕೆ ಮಾಡುವವರೆಲ್ಲರನ್ನು ಆವರಿಸುತ್ತದೆ. ಇವರಲ್ಲಿ ಬಲವಿಲ್ಲದೆ ಹೆಸರೂ, ಸತ್ಯವಿಲ್ಲದೆ ತೋರಿಕೆಯೂ ಇರುವ ಕೆಲವು ತೋರಿಕೆಯ ಮತ್ತು ಹೆಸರಿನ ಕ್ರೈಸ್ತರು ಬರುತ್ತಾರೆ[೧]. ಹ್ಯಾಗಂದರೆ, ಅವಿಶ್ವಾಸಿಗಳಾದ ನಂಬಿಕೆ ಇಲ್ಲದ ಅಂಗಗಳು ಸಹಾ ಇನ್ನೂ ಸಭೆಗೆ ಶೇರಿದವರಾಗಿ, ಕ್ರಿಸ್ತನ ಅಂಗಗಳ ಮಧ್ಯದಲ್ಲಿ ಸ್ನಾನದಿಂದ ಒಳನೆಡಲ್ಪಟ್ಟವರಾಗಿ ತೋರಿಕೆಗೆ ಅಂಗಗಳಾಗಿರುತ್ತಾರೆ. ಆದರೆ ಅದೆ ಕಾರಣದಿಂದ, ಜೀವದ ಅನ್ಯೋನ್ಯದಲ್ಲಿ ಸತ್ತವರಾಗಿಯೆ ಉಳ ಕೊಂಡರೆ, ಅವರ ಶಿಕ್ಷೆನಿರ್ಣಯವು ಮತ್ತೊಬ್ಬರಿಗಿಂತ ದೊಡ್ಡದಾಗಿರುತ್ತದೆ[೨]. ಆದರೆ ಶರೀರಕ್ಕೆ ತಗಲಿರುವ ಪರ್ಯಂತಕ್ಕೆ ಅವರು ಶರೀರ ಜೀವದಲ್ಲಿ ಪಾಲು ಹೊಂದಿದವರೂ ತಲೆಯ ಸಂಗಡ ಜೀವವುಳ್ಳ ಅನ್ಯೋನ್ಯದಲ್ಲಿ ನವೀಕರಿಸಲ್ಪಟ್ಟವರೂ ಆಗ ಬಹುದು.

೧) ಪ್ರಕಟ. ೩, ೧. ೩, ೧೫—೧೮. ೨ ತಿಮೊ. ೩, ೫.

೨) "ಯಾವನಾದರೂ ನನ್ನಲ್ಲಿ ನೆಲೆಯಾಗಿರದಿದ್ದರೆ, ಕೊಂಬೆಯು ಹಾಗೆ ಹೊರಗೆ ಬಿಸಾಡಲ್ಪಟ್ಟು, ಒಣಗಿ ಹೋಗುವನು." (ಯೋಹಾ. ೧೫, ೬.)

**೨೯೦.** ಅದೃಶ್ಯಸಭೆ ಅಂದರೆ, ಬಹಿರಂಗದ ಸಭೆಯ ಯಥಾರ್ಥವಾಗಿ ಜೀವವುಳ್ಳ ಎಲ್ಲಾ ಅಂಗಗಳ ಅನ್ಯೋನ್ಯವಾಗಿರುತ್ತದೆ. ಇವರು ಬರೇ ಸ್ನಾನದಿಂದ ಕ್ರಿಸ್ತನ ಜೀವದ ಅನ್ಯೋನ್ಯದಲ್ಲಿ ಶೇರಿದವರು ಮಾತ್ರವಲ್ಲ, ಜೀವವುಳ್ಳ ವಿಶ್ವಾಸದಿಂದ ಅದರೊಳಗೆ ಶೇರಿ ನೆಲೆಯಾಗಿದ್ದವರು ಸಹಾ. ಆದರೆ ಅದೃಶ್ಯಸಭೆಯು ದೃಶ್ಯಸಭೆಯ ಹೊರ್ತು ಯಾವಾಗಲಾದರೂ ಎಲ್ಲಿಯಾದರೂ ಇರುವದೇ ಇಲ್ಲ. ಅದು ಇದರ ಹೊರಗೆಯಾಗಲಿ ಇದರ ಮೇಲೆಯಾಗಲಿ ಇರುವದಿಲ್ಲಾ. ಇದರಲ್ಲಿಯೂ ಇದರಲ್ಲಿ ಮಾತ್ರವೆ ಇರುತ್ತದೆ.

ಹ್ಯಾಗಂದರೆ ಕೃಪಾಕರಣಗಳು ಅದೃಶ್ಯಸಭೆಗೆ ಅಲ್ಲಾ, ದೃಶ್ಯಸಭೆಗೆ ಕೊಡಲ್ಪಟ್ಟವೆ. ಮತ್ತು ವಿಶ್ವಾಸಿಯು, ದೇವರ ಕೃಪೆಯಲ್ಲಿ ದೃಶ್ಯಸಭೆಯ ಅಂಗವಾಗಿರುವದರಿಂದಲೂ, ಇರುವ ಮಟ್ಟಿಗೂ, ಇರುವಷ್ಟಕ್ಕೆ ಮಾತ್ರವೆ, ದೇವರ ಕೃಪೆಯಲ್ಲಿ ಪಾಲು ಹೊಂದಬಹುದು. ಆದಕಾರಣ ಕ್ರಿಸ್ತನ ನಿಜ ಅಂಗಗಳಾಗಿರುವ ದೃಶ್ಯಸಭೆಯಿಂದ ಬೇರೆ ಆದವನು ಕ್ರಿಸ್ತನಿಂದ ಸಹಾ ಬೇರೆಯಾಗಿದ್ದಾನೆ.

**೨೯೧.** ಹ್ಯಾಗೆ ಸ್ವಸ್ಥ ಅಂಗಗಳು ಅಸ್ವಸ್ಥವಾಗಿರುವದರ ಸಂಗಡ ಒಟ್ಟಿಗೆ ಶ್ರಮ ಪಟ್ಟು, ಅದು ಎಷ್ಟು ಅಸ್ವಸ್ಥವಾಗಿರುತ್ತದೊ, ಅಷ್ಟಕ್ಕೆ ಹೆಚ್ಚಾಗಿ ಪರಾಮರ್ಶಿಸುತ್ತವೊ, ಹಾಗೆಯೆ ಸಭೆಯಲ್ಲಿರುವ ಸಮಸ್ತ ಯಥಾರ್ಥ ವಿಶ್ವಾಸಿಗಳು ಅವಿಶ್ವಾಸಿಗಳನ್ನೂ ಸಭೆಯಲ್ಲಿರುವ ನಂಬಿಕೆಯಿಲ್ಲದ ಅಂಗಗಳನ್ನೂ ಪೂರ್ಣ ಹೃದಯದಿಂದ ಕರುಣಿಸುವದಕ್ಕೂ, ಬಹಳ ಜಾಗ್ರತೆಯಿಂದ ಪರಾಮರ್ಶಿಸುವದಕ್ಕೂ, ಅತಿ ಆಸಕ್ತಿಯಿಂದ ಅವರಿಗೋಸ್ಕರ ಪ್ರಾರ್ಥಿಸುವದಕ್ಕೂ ಕರಿಯಲ್ಪಟ್ಟಿದ್ಧೇವೆಂದು ತಿಳಕೊಳ್ಳುತ್ತಾರೆ[೧)]. ಆದರೆ ವಿಶ್ವಾಸಿಗಳು ತಮ್ಮೊಳಗೆ ಒಬ್ಬರ ಪರಿಚಿತಿ ಒಬ್ಬರಿಗೆ ಇರದಿದ್ದರೂ, ಒಬ್ಬರ ವಿಷಯ ಒಬ್ಬರಿಗೆ ತಿಳಿಯದೆ ಇದ್ದರೂ, ಅತ್ಯಂತ ಅನ್ಯೋನ್ಯದಲ್ಲಿರುತ್ತಾರೆ. ಹ್ಯಾಗಂದರೆ, ವಿಶ್ವಾಸದ ಮತ್ತು ಪುತ್ರತ್ವದ ಒಂದೇ ಆತ್ಮದಿಂದ ಒಂದೇ ತಲೆಯ ಕೆಳಗೆ ಪ್ರೀತಿಯಲ್ಲಿರುವ ಒಂದೇ ಪರಿಶುದ್ಧ ಜೀವಕ್ಕೂ ನಿತ್ಯ ಜೀವದ ಒಂದೇ ಕೋರಿಕೆಗೂ ಬದ್ಧರಾಗಿದ್ಧಾರೆ[೨)]. ಈಗ ಬದುಕುವ ವಿಶ್ವಾಸಿಗಳು ಮಾತ್ರವಲ್ಲಾ, ಮುಖ್ಯವಾಗಿ ವಿಶ್ವಾಸದ ಹೋರಾಟವನ್ನು ಜಯವಾಗಿ ಹೋರಾಡಿ, ಜೀವದ ಕಿರೀಟವನ್ನು (ಪ್ರಕಟ. ೨, ೧೦.) ಕರ್ತನ ಬಳಿಯ (ಫಿಲಿ. ೧, ೨೩.) ಹೊಂದಿ ಇರುವ ಇಲ್ಲಿಂದ ಹೋದವರು ಸಹಾ ಶೇರಿರುವ ಆ ಸಂಬಂಧವೆ ಪರಿಶುದ್ಧರ ಅನ್ಯೋನ್ಯವಾಗಿರುತ್ತದೆ.

೧) "ಒಂದು ಅಂಗ ನೊಂದರೆ, ಎಲ್ಲಾ ಅಂಗಗಳು ಕೂಡ ನೋಯುತ್ತವೆ. ಇಲ್ಲವೆ ಒಂದು ಅಂಗ ಮಹಿಮೆ ಪಟ್ಟರೆ, ಎಲ್ಲಾ ಅಂಗಗಳು ಕೂಡ ಸಂತೋಷ ಪಡುತ್ತವೆ. ಆದರೆ ನೀವು ಕ್ರಿಸ್ತನ ಶರೀರವಾಗಿಯೂ, ಭಾಗವಾಗಿ ಅಂಗಗಳಾಗಿಯೂ ಇದ್ಧೀರಿ." (೧ಕೊರಿ. ೧೨, ೨೬. ೨೭.) "ಸಹೋದರರೇ, ಮನುಷ್ಯನು ಒಂದು ತಪ್ಪಿನಲ್ಲಿ ಮೊದಲು ಶಿಕ್ಕಿಕೊಂಡರೂ, ಆತ್ಮಭಾವದವರಾದ ನೀವು ಅಂಥವನನ್ನು ಸಾತ್ವೀಕತ್ವದ ಆತ್ಮದಿಂದ ನೆಟ್ಟಗೆ ಮಾಡಿರಿ. ನೀನು ಶೋಧನೆ ಪಡದ ಹಾಗೆ, ನಿನ್ನನ್ನು ನೋಡಿಕೋ. ಒಬ್ಬೊಬ್ಬರ ಹೊರೆಗಳನ್ನು ಹೊತ್ತು, ಹೀಗೆಯೇ ಕ್ರಿಸ್ತನ ನ್ಯಾಯಪ್ರಮಾಣವನ್ನು ಪೂರೈಸಿರಿ." (ಗಲಾ. ೬, ೧. ೨.) "ಸಹೋದರರೇ, ನಿಮ್ಮಲ್ಲಿ ಒಬ್ಬನು ಸತ್ಯ ಬಿಟ್ಟು ತಪ್ಪಿ ಹೋಗಲಾಗಿ, ಮತ್ತೊಬ್ಬನು ಅವನನ್ನು ತಿರುಗಿಸಿದರೆ, ಪಾಪಿಷ್ಠನನ್ನು ಅವನ ತಪ್ಪಾದ ಮಾರ್ಗದಿಂದ ತಿರುಗಿ

ಸಿದವನು ಅವನ ಪ್ರಾಣವನ್ನು ಮರಣದಿಂದ ರಕ್ಷಿಸಿ, ಪಾಪಗಳ ಸಮೂಹವನ್ನು ಅಡಗಿಸುವನೆಂದು, ತಿಳಿದಿರಲಿ.” (ಯಾಕೊ. ೫, ೧೯. ೨೦.) (**೯೨**, ೩.)

೨) “ವಿಶ್ವಾಸಿಸುವವರ ಸಮೂಹದ ಹೃದಯವೂ ಆತ್ಮವೂ ಒಂದೇ ಆಗಿತ್ತು.” (ಅ. ಕ್ರಿ. ೪, ೩೨.) “ಆತ್ಮದ ಐಕ್ಯವನ್ನು ಸಮಾಧಾನದ ಬಂಧದಲ್ಲಿ ಕಾಪಾಡ ಜಾಗ್ರತೆ ಪಡ ಬೇಕು. ಶರೀರವೂ ಒಂದೇ, ಆತ್ಮವೂ ಒಂದೇ— ನೀವು ನಿಮ್ಮ ಕರೆಯುವಿಕೆಯ ಒಂದೇ ನಿರೀಕ್ಷೆಯಲ್ಲಿ ಕರೆಯಲ್ಪಟ್ಟ ಹಾಗೆಯೇ—ಕರ್ತನೂ ಒಬ್ಬನೇ, ವಿಶ್ವಾಸವೂ ಒಂದೇ, ಸ್ನಾನವೂ ಒಂದೇ, ಎಲ್ಲರ ತಂದೆಯಾದ ದೇವರು ಒಬ್ಬನೇ; ಅವನು ಎಲ್ಲರ ಮೇಲೆಯೂ, ಎಲ್ಲರ ಮೂಲವಾಗಿಯೂ, ನಿಮ್ಮೆಲ್ಲರಲ್ಲಿಯೂ, ಇದ್ದಾನೆ.” (ಎಫೆ. ೪, ೩—೬.)

**೯೨.** ಕ್ರೈಸ್ತಸಭೆಯು ಸರ್ವಸಾಧಾರಣವಾದದ್ದಾಗಿರುತ್ತದೆ (ಕಥೋಲಿಕ), ಯಾಕಂದರೆ ಎಲ್ಲಾ ಭೂಮಂಡಲದಲ್ಲಿರುವ ಎಲ್ಲಾ ಜನಾಂಗಗಳೂ ಭಾಷೆಗಳೂ ಇದರಲ್ಲಿ ಅಂಗೀಕರಿಸಲ್ಪಡ ಬೇಕು. ಹಾಗೆಯೆ ಅದು ಒಂದೇಯಾಗಿರುತ್ತದೆ. ಯಾಕಂದರೆ ಅದರ ತಲೆ ಸಹಾ ಒಂದೆ. ಆದರೆ ಈ ಒಂದೆ ಸರ್ವಸಾಧಾರಣ ಕ್ರೈಸ್ತ ಸಭೆಯು ಕೆಲವು ಪ್ರತ್ಯೇಕ ಸಭೆಗಳಾಗಿ ಭಾಗವಾಯಿತು. ಆದರೂ ಇವುಗಳಿಗೆಲ್ಲಾ ಸಾಮಾನ್ಯವಾದ ಸರ್ವಾನ್ಯೋನ್ಯದ ಸಂಬಂಧ ಉಂಟು. (ಸಮ ನೋಡು **೬**, ಪರಿಶಿ.) ಈ ಭೇದವು ಮನುಷ್ಯರ ಅಪರಾಧದಿಂದ ಉಂಟಾಯಿತು. ಆದ್ದರಿಂದ ಅದಕ್ಕೋಸ್ಕರ ಕರ್ಕರೆ ಪಟ್ಟಷ್ಟು ಸಾಲದು. ಆದರೆ ಪರಿಶುದ್ಧಾತ್ಮವು ನಡಿಸುತ್ತಿರಲಾಗಿ, ಅದು ಸಹಾ, ಅದರ ಸಂತೋಷಕರವಾದ ವಿಕಾಸಗತಿಗೆ ಬಹಳ ವಿಷಯದಲ್ಲಿ ಅಟಕವಾಗಿದ್ದರೂ, ದೇವರ ರಾಜ್ಯಕ್ಕೆ ಕೆಲವು ವಿಷಯದಲ್ಲಿ ಹ್ಯಾಗೂ ಉಪಯೋಗವಾಗಿರುತ್ತದೆ. ಹ್ಯಾಗಂದರೆ ಬಹು ವಿಧವಾದ ಬೇರೆ ಬೇರೆ ಪ್ರತ್ಯಪ್ರತ್ಯೇಕ ಭಕ್ತಿಯ ಆಚಾರಗಳಿಗೂ ಅವಸರಗಳಿಗೂ ಬಹು ವಿಧವಾಗಿ ವಿಕಸಿಸುವದಕ್ಕೆ ಮಾರ್ಗವಾಗುತ್ತದೆ. ಮತ್ತು ಒಂದೊಂದು ಭಾಗವು ತನಗೆ ಶಿಕ್ಕಿದ ತಿಳಿವಿಕೆ ವಿಶ್ವಾಸಗಳ ತಲಾಂತದಿಂದ, ಸಾಧ್ಯವಾಗುವಷ್ಟು ಬಹಳ ಫಲ ಉಂಟು ಮಾಡುವದಕ್ಕೆ, ಒಳ್ಳೇ ಪಂಥ ಉಂಟಾಗುತ್ತದೆ. (ಮತ್ತಾ. ೨೫, ೧೪—೩೦.) ಯಾರಿಗೆ ಬಹಳ ಕೊಡಲ್ಪಟ್ಟದೆಯೊ, ಅವನಿಂದ ಬಹಳ ಕೇಳಲ್ಪಡುವದು. (ಲೂಕ. ೧೨, ೪೮.) ಮತ್ತು ಯಾರು ನಂಬಿಕೆಯಾಗಿರುವದಿಲ್ಲವೊ, ಅವರ ದೀಪಸ್ತಂಭವು ಅದರ ಸ್ಥಳದಿಂದ ತೆಗಿಯಲ್ಪಡುವದು. (ಪ್ರಕಟ. ೨, ೫. ೩, ೧೬.)

ಪರಿಶಿ. ಕಥೋಲಿಕವೆಂದು ರೋಮಿನಾಯ ಪೋಪನ ಸಭೆಗೆ ಸಾಧಾರಣವಾಗಿ ಹೆಸರು ಬಂದದೆ. ಆದರೆ ಸುವಾರ್ತಾಸಭೆಯವರು, ಮತ್ತೊಬ್ಬರು ಹೇಳುವ ಪ್ರಕಾರ, ರೋಮಿನಾಯ ಸಭೆಗೆ ಕಥೋಲಿಕವೆಂದು ಹೇಳಿದರೂ, ಮೂಲಶಬ್ದದ ಅಭಿಪ್ರಾಯಕ್ಕೆ ಅದು ಸರಿಯುಲ್ಲವೆಂದು ತಿಳಕೊಂಡಿದ್ದಾರೆ.

**೨೯೩.** ಕ್ರೈಸ್ತ ಸರ್ವಸಭೆಯು ಬಹಿರಂಗದಲ್ಲಿ ಭಾಗವಾಗಿ ಕಾಣ ಬಂದರೂ, ಒಳ ಸ್ವಭಾವದ ಪ್ರಕಾರ ಒಂದೇಯಾಗಿರುತ್ತದೆ. ಪ್ರತ್ಯಪ್ರತ್ಯೇಕ ಸಭೆಗಳು ಭೂಮಿಯಲ್ಲಿ ಒಂದರಿಂದ ಒಂದು ಬೇರೆಯಾಗಿದ್ದರೂ, ಸ್ವರ್ಗದಲ್ಲಿರುವ ಒಂದೆ ಸಾಮಾನ್ಯವಾದ ತಲೆಯ ಸಂಬಂಧವಿಂದ ಹ್ಯಾಗೂ ಒಂದೇಯಾಗಿರುತ್ತವೆ. ಈಗ ತಾತ್ಕಾಲದಲ್ಲಿ ಮರೆಯಾಗಿಯೂ, ಮನುಷ್ಯರ ತಪ್ಪು, ಬಲಹೀನತ್ವ, ಕೋಪಗಳಿಂದ ಕಳಂಕವಾಗಿಯೂ ಇರುವ ಐಕತ್ವವು ಮತ್ತೆ ಒಂದೇ ಸಾರಿ ದೃಶ್ಯವಾಗಿ ಕಾಣ ಬರುವದು[1]. ಮತ್ತು ಒಂದೊಂದು ಸಭೆಯು ತನ್ನಲ್ಲಿ ಬೆಳದು, ಈ ಪ್ರಕಾರ ಸತ್ಯವನ್ನು ಹೆಚ್ಚಿಸಿ, ನಿರ್ಮಲ ಮಾಡಿ, ಸುಳ್ಳನ್ನು ಬಿಸಾಡುವಷ್ಟಕ್ಕೆ, ಸರ್ವರ ಐಕ್ಯವು ಹೆಚ್ಚು ಹೆಚ್ಚಾಗಿ ಪ್ರಾಪ್ತಿಯಾಗುವದಕ್ಕೆ ಮಾರ್ಗವಾಗುತ್ತದೆ.

೧) "ಆಗ ಒಂದೇ ಮಂದೆಯೂ, ಒಬ್ಬನೇ ಕುರುಬನೂ ಆಗುವದು." (ಯೋಹಾ. ೧೦, ೧೬.)

**೨೯೪.** ಸತ್ಯ ಸಭೆಯು, "ಸುವಾರ್ತೆಯನ್ನು ಶುದ್ಧವಾದ ತಿಳುವಿಕೆಯ ಪ್ರಕಾರ ಪ್ರಸಂಗಿಸಿ, ಪ್ರಸಾದಗಳನ್ನು ದಿವ್ಯ ವಾಕ್ಯದ ಪ್ರಕಾರ ಕೊಡುವಲ್ಲಿ" ಇರುತ್ತದೆ. ಹಾಗಾದರೆ ಸುಳ್ಳು ಸಭೆಯು ಸಮವಾದ ಬೋಧನೆಯಿಂದಲೂ, ಪ್ರಸಾದಗಳ ಸಮವಾದ ಪ್ರಯೋಗದಿಂದಲೂ ಏನೂ ಉಳಿಯದೆ ಇರುವಲ್ಲಿರ ಬೇಕು. ಆದರೆ ಈಗ ಇರುವ ಕ್ರೈಸ್ತ ಪ್ರತ್ಯೇಕ ಸಭೆಗಳಲ್ಲಿ ಅಂಥಾದ್ದು ಇಲ್ಲವಾದ್ದರಿಂದ, ದೇವರಿಗೆ ಸ್ತೋತ್ರ! ಅವುಗಳೊಳಗೆ ಇರುವ ಪ್ರತೀಕಾರತ್ವವು, ಕೆಲವು ವಿಷಯಗಳಲ್ಲಿ ಖಂಡಿತವಾಗಿಯೂ ಚುರುಕಾಗಿಯೂ ಕಾಣ ಬಂದರೂ, ಸತ್ಯಕ್ಕೂ ಸುಳ್ಳಿಗೂ ಇರುವ ಪ್ರತೀಕಾರವೆ ಅಲ್ಲಾ. ಅದು ಹೆಚ್ಚು ಅಥವಾ ಕಡಿಮೆ ಶುದ್ಧತ್ವ, ಅಗಾಧವಾಗಿಯೂ ವಿಸ್ತಾರವಾಗಿಯೂ ಇರುವ ತಿಳುವಿಕೆ, ಪ್ರಸಾದಗಳ ಹೆಚ್ಚು ಅಥವಾ ಕಡಿಮೆ ಸಮವಾದ ಪ್ರಯೋಗ, ಇವುಗಳಲ್ಲಿ ಮಾತ್ರವೆ ಇರುತ್ತದೆ. ಮೇಲೆ ಹೇಳಿದ ಎರಡು ಲಕ್ಷಣಗಳು ಇರುವಷ್ಟಕ್ಕೂ ಇರುವ ಮಟ್ಟಿಗೂ ಒಂದೊಂದು ಸಭೆಗೆ ಸತ್ಯವಾದ್ದೆಂಬ ಹೆಸರಿರ ಬಹುದು. ವಾಕ್ಯವೂ, ಪ್ರಸಾದಗಳೂ ಇರುವ ಪ್ರತಿ ಸಭೆಯಲ್ಲಿ, ಅದು ಕೊಡುವಂಥಾ ಸತ್ಯವನ್ನು ಮನಸ್ಸಾಕ್ಷಿಪೂರ್ವಕವಾಗಿ ಪ್ರಯೋಗಿಸುವ ವಿಶ್ವಾಸಿಯು ರಕ್ಷಿಸಲ್ಪಡ ಬಹುದು. ಆದಾಗ್ಯೂ ಒಂದಕ್ಕಿಂತ ಮತ್ತೊಂದು ಸಭೆಯಲ್ಲಿ ಹೆಚ್ಚು ಸ್ಥಿರವಾಗಿಯೂ ಅಷ್ಟು ಕಂಟಕವಿಲ್ಲದೆಯೂ ಅದನ್ನು ಹೊಂದ ಬಹುದೆಂಬದು ನಿಶ್ಚಯ.

**೨೯೫.** ಕ್ರೈಸ್ತ ಸಭೆಯು ಈ ಯುಗದಲ್ಲಿ ಹೋರಾಡುವ ಸಭೆಯಾಗಿರುತ್ತದೆ. ಅದು ನಿದ್ರೆಯಲ್ಲಿ ಬೀಳದೆ, ಮೇಲಿನಿಂದ ಬಲವನ್ನೂ ಸಹಾಯವನ್ನೂ ಬೇಡಿ ಕೊಳ್ಳುವದಕ್ಕೆ ಮರೆಯದೆ ಇರುವ ಹಾಗೆ, ಅಭ್ಯಾಸಕ್ಕಾಗಿಯೂ ಆಶೀರ್ವಾದಕ್ಕಾಗಿಯೂ, ಅವಿಶ್ವಾ

ಸದ ಸಂಗಡಲೂ, ಲೋಕದ ಹಗೆಯ ಸಂಗಡಲೂ, ಅಂಧಕಾರದ ಪ್ರಭುವಿನ ಮೋಸದ ಶೋಧನೆಗಳಿಗೂ ವಿರೋಧವಾಗಿ ಹೋರಾಡ ಬೇಕು[೧]. ಆದರೂ ಎಲ್ಲಾ ಉತ್ಪಾತಗಳಲ್ಲಿಯೂ ಹಗೆಗಳಲ್ಲಿಯೂ, ಹಿಂಸೆಗಳಲ್ಲಿಯೂ ಸಭೆಯು, ರಕ್ಷಣೆಯ ನಿತ್ಯ ಬಂಡೆಯಲ್ಲಿ ಸ್ಥಾಪಿಸಲ್ಪಟ್ಟಿರುವದರಿಂದ, ತನ್ನಲ್ಲಿ ಸತ್ಯವಾದ ದೇವಸಮಾಧಾನ ಉಳ್ಳದ್ದಾಗಿಯೂ, ನರಕದ್ವಾರಗಳು ಸಹಾ ತನ್ನನ್ನು ಜೈಸ ಕೂಡದೆಂಬ ನಿಶ್ಚಯತ್ವ ಉಳ್ಳದ್ದಾಗಿಯೂ ಇರುತ್ತದೆ[೨]. ಹ್ಯಾಗೆ ಕ್ರಿಸ್ತನು ಹೋರಾಟದಿಂದ ಜಯಕ್ಕೂ ಅಲ್ಪತ್ವದಿಂದ ಮಹಿಮೆಗೂ ಬರಬೇಕಾಯಿತೊ, ಹಾಗೆಯೆ ಅವನ ಶರೀರವಾಗಿರುವ ಸಭೆ ಸಹಾ. ಮತ್ತು ಶಕ್ತಿಯ ಪ್ರಕಾರ ಮಾತ್ರವಲ್ಲಾ, ಪ್ರತ್ಯಕ್ಷತೆಯ ಪ್ರಕಾರ ಸಹಾ, ಪಾಪವೂ ಮರಣವೂ ಪಿಶಾಚನೂ ಪೂರ್ಣ ಜೈಸಲ್ಪಟ್ಟ ಮೇಲೆ, ಹೋರಾಡುವ ಸಭೆಯು ಜಯೋತ್ಸವ ಮಾಡುವ ಸಭೆಯಾಗುವದು[೩].

೧) "ಲೋಕದಲ್ಲಿ ನಿಮಗೆ ಉಪದ್ರವಿರುವದು; ಆದರೆ ಧೈರ್ಯವಾಗಿರ್ರಿ, ನಾನು ಲೋಕವನ್ನು ಜೈಸಿದ್ದೇನೆ." (ಯೋಹಾ. ೧೬, ೩೩.) "ನನ್ನ ಹೆಸರಿನ ನಿಮಿತ್ತ ಎಲ್ಲರಿಂದ ಹಗೆ ಮಾಡಲ್ಪಡುವಿರಿ. ಆದರೆ ಕಡೆ ವರಿಗೂ ತಾಳುವವನ್ಯಾವನೋ, ಅವನೇ ರಕ್ಷಿಸಲ್ಪಡುವನು." (ಮತ್ತಾ. ೧೦, ೨೨.) "ಎಲ್ಲಾದರಲ್ಲಿ ಉಪದ್ರ ಪಡುತ್ತಿದ್ದೆವು; ಹೊರಗೆ ಯುದ್ಧಗಳು, ಒಳಗೆ ಭಯಗಳು ಇದ್ದವು." (೨ ಕೊರಿ. ೭, ೫.)

೨) "ಸಮಾಧಾನ ನಿಮಗೆ ಬಿಡುತ್ತೇನೆ; ನನ್ನ ಸಮಾಧಾನ ನಿಮಗೆ ಕೊಡುತ್ತೇನೆ. ಲೋಕವು ಕೊಡುವ ಪ್ರಕಾರ ನಾನು ನಿಮಗೆ ಕೊಡುವದಿಲ್ಲ. ನಿಮ್ಮ ಹೃದಯವು ಕಳವಳಗೊಳ್ಳದೆ, ಅಂಜದೆ ಇರಲಿ." (ಯೋಹಾ. ೧೪, ೨೭.) "ಸೀಮೋನ್ ಪೇತ್ರನು ಪ್ರತ್ಯುತ್ತರವಾಗಿ, ನೀನು ಜೀವವುಳ್ಳ ದೇವರ ಮಗನಾದ ಕ್ರಿಸ್ತನು, ಅಂದನು. ಯೇಸು ಅವನಿಗೆ ಪ್ರತ್ಯುತ್ತರವಾಗಿ ಹೇಳಿದ್ದು, ಯೋನನ ಮಗನಾದ ಸೀಮೋನನೇ, ನೀನು ಭಾಗ್ಯವಂತನು; ಯಾಕಂದರೆ ರಕ್ತ ಮಾಂಸವಲ್ಲ, ಪರಲೋಕದಲ್ಲಿರುವ ನನ್ನ ತಂದೆಯು ನಿನಗೆ ಇದನ್ನು ಪ್ರಕಟ ಮಾಡಿದ್ದಾನೆ. ಮತ್ತು ನಾನು ನಿನಗೆ ಹೇಳುತ್ತೇನೆ, ನೀನು ಪೇತ್ರನು; ಮತ್ತು ಈ ಬಂಡೆಯ ಮೇಲೆ ನನ್ನ ಸಭೆಯನ್ನು ಕಟ್ಟುವೆನು; ಪಾತಾಳದ ದ್ವಾರಗಳು ಅದನ್ನು ಜಯಿಸಲಾರವು." (ಮತ್ತಾ. ೧೬, ೧೬—೧೮.)

೩) ಪ್ರಕಟ. ೭, ೯—೧೪.

## ಉ.) ರಕ್ಷಣೆಯ ಕಡೇ ಸಂಪೂರ್ತಿ.

**೨೯೬.** ಪರಿಶುದ್ಧಾತ್ಮದ ಪ್ರವೃತ್ತಿಯ ಫಲವೂ ಗುರಿಯೂ ಯಾವದಂದರೆ — ಸಭೆಯ ಸಂಪೂರ್ತಿಯು, ಮತ್ತು ಅದರೊಡನೆ ಮನುಷ್ಯನ ಮಗನ ಪುನರಾಗಮನದಿಂದ ಎಲ್ಲಾದರ ಸಂಪೂರ್ತಿಯು. (**೨೫೧.**)

**೨೯೭.** ಈ ಆಗಮನದ ಕಾಲವನ್ನೂ ಘಳಿಗೆಯನ್ನೂ ನಿಶ್ಚೈಸುವದನ್ನು ತಂದೆಯು ಸ್ವಂತ ಅಧಿಕಾರದಲ್ಲಿ ಇಟ್ಟು ಕೊಂಡಿದ್ದಾನೆ, (ಅ. ಕ್ರಿ. ೧, ೭.) ಆದರೂ ಅದೇ ಸಮಯದಲ್ಲಿ ಸಹೇತುಗಳಿಗೆ ಗಂಟು ಕಟ್ಟಿದ್ದಾನೆ. ಇವುಗಳ ಈಡೇರುವಿಕೆಯು ಮನುಷ್ಯರ ಕೈಗಳಲ್ಲಿ, ಮುಖ್ಯವಾಗಿ ಸಮಸ್ತ ಲೋಕದಲ್ಲಿ ಆಗ ತಕ್ಕ ಸುವಾರ್ತೆಯ ಪ್ರಸಂಗದಲ್ಲಿಟ್ಟಿದ್ದಾನೆ. ಈ ಪ್ರಕಾರ ಕಡೇ ಆಗಮನವು ಬೇಗ ಆಗುವದೂ, ಅಥವಾ ತಡವಾಗುವದೂ, ತಕ್ಕಷ್ಟಾದರೂ ಕ್ರೈಸ್ತರ ಮಿಶನಾಸಕ್ತಿಗೆ ಒಳಗಾಗಿರುತ್ತದೆ. ಆದರೆ ನಮ್ಮ ಮಿಶನು ಕಾರ್ಯದ ಆಶೀರ್ವಾದವೂ ಪ್ರವರ್ತನೆಯೂ ಕರ್ತನ ಕೈಯಲ್ಲಿ ಮಾತ್ರವೆ ಇರುತ್ತದೆಂಬದನ್ನೂ, ನಮ್ಮ ಲೆಖ್ಖದ ಪ್ರಕಾರ ಹಣ್ಣಾಗುವದಕ್ಕೆ ವರ್ಷಶತಗಳು ಬೇಕೆಂದು ನೆನಸತಕ್ಕ ಪೈರನ್ನು ಕೆಲವು ವರ್ಷಗಳಲ್ಲಿಯೂ ಕೆಲವು ದಿನಗಳಲ್ಲಿಯೂ ಹಣ್ಣು ಮಾಡಲಿಕ್ಕೆ ಅವನು ಆಶ್ಚರ್ಯ ಮಾರ್ಗಗಳನ್ನು ಬಲ್ಲನು ಎಂಬದನ್ನೂ ಮರೆಯ ಬಾರದು. ತಂದೆಯು ಮಾತ್ರವೆ (ಹೀಗೆಯೆ ನಿಶ್ಚಯವಾಗಿ ದಿವಾರೋಹಣದ ಮೇಲೆ ಮಗನು ಸಹಾ) ಕಾಲವನ್ನೂ ಘಳಿಗೆಯನ್ನೂ ಬಲ್ಲನು. ಆದರೆ ಅಪೊಸ್ತಲರು ಹ್ಯಾಗೊ (೧ ಪೇತ್ರ. ೪, ೭. ಯಾಕೊ. ೫, ೮. ಫಿಲಿ. ೪, ೫. ೧ ಕೊರಿ. ೧೦, ೧೧. ಪ್ರಕಟ. ೧, ೩. ೨೨, ೧೦.) ಹಾಗೆಯೆ ಸಮಸ್ತ ಕಾಲಗಳಲ್ಲಿರುವ ಕ್ರೈಸ್ತರು ಸಹಾ ಆತನಿಗೆ ಎದುರಾಗಿ ಹೋಗುವದಕ್ಕೆ ಯಾವಾಗಲೂ ಸಿದ್ಧವಾಗಿರುವ ಹಾಗೆ, ಆ ದಿವಸವನ್ನು ಸಮೀಪವಿರುವಂಥಾದ್ದಾಗಿ ಎದುರು ನೋಡ ಬೇಕು.

"ಆದರೆ ಆ ದಿವಸವನ್ನೂ ಘಳಿಗೆಯನ್ನೂ ಕುರಿತು, ತಂದೆಗೆ ಹೊರ್ತು, ಯಾವನಿಗೂ, ಪರಲೋಕದಲ್ಲಿರುವ ದೂತರಿಗಾದರೂ, ಮಗನಿಗಾದರೂ, ತಿಳಿಯದು. ನೋಡಿಕೊಳ್ಳಿರಿ; ಎಚ್ಚತ್ತು ಪ್ರಾರ್ಥಿಸಿರಿ; ಯಾಕಂದರೆ, ಆ ಸಮಯವು ಯಾವಾಗ ಬರುವದೋ, ಅರಿಯರಿ." (ಮಾರ್ಕ. ೧೩, ೩೨. ೩೩.)

ಪರಿಶಿ. ಆದರೆ ಬರಹವು, ನಾವು ಕಾಲದ ಲಕ್ಷಣಗಳನ್ನು ತಿಳಕೊಳ್ಳುವ ಹಾಗೆ (ಮತ್ತಾ. ೧೬, ೩. ೨೪, ೩೨. ೩೩.) ಸರ್ವಸಾಧಾರಣವಾದ ಸಹೇತುಗಳನ್ನೂ, ಕಡೇ ದಿನದ ಮೊದಲು ಬರುವ ವಿದ್ಯಮಾನಗಳನ್ನೂ, ಲಕ್ಷಣಗಳನ್ನೂ ಪ್ರಕಟಿಸಿ ಅದೆ. ರಾಜ್ಯದ ಈ ಸುವಾರ್ತೆಯು ಸಾರಲ್ಪಡ ಬೇಕು. (ಮತ್ತಾ. ೨೪, ೧೪.) ಜನಾಂಗಗಳ ಪೂರ್ಣತೆಯು ಒಳಗೆ ಶೇರ ಬೇಕು; ಮತ್ತು ಇಸ್ರಯೇಲೆಲ್ಲಾ ರಕ್ಷಿಸಲ್ಪಡ ಬೇಕು. (ರೋಮಾ. ೧೧, ೨೫. ೨೬.) ಇದರಿಂದ ಸರ್ವಸಾಧಾರಣವಾದ ಅಧಿಕಾರ ಹೊಂದಿದ ಕ್ರೈಸ್ತತ್ವವು ಅದರ ಮಹಾ ಆಶ್ಚರ್ಯಕರವಾದ ಆಶೀರ್ವಾದಗಳನ್ನು ಹೊಯ್ಯ ಬೇಕು. (ಪ್ರಕಟ. ೨೦.) ಆದರೆ ತರುವಾಯ ಸ್ವಲ್ಪ ಕಾಲಕ್ಕೆ ಪರಮ ಕಠಿಣವಾದ ಸಂಕಷ್ಟಗಳು ಬರ ಬೇಕು. (ಪ್ರಕಟ. ೨೦, ೩. ೮. ಇತ್ಯಾದಿ ಮತ್ತಾ. ೨೪, ೨೨.) ಆಗ್ಯೆ ಸುಳ್ಳು ಪ್ರವಾದಿಗಳೂ ಸುಳ್ಳು ಕ್ರಿಸ್ತರೂ ಬಹಳ ಅಧಿಕಾರವೂ

ಬಹಳ ಜನರೂ ಇರುವವರಾಗಿ ಏಳುವರು. (ಮತ್ತಾ. ೨೪,೧೧.) ಆಗ್ಯೆ ಅಂಧಕಾರದ ರಾಜ್ಯವು ಚದರಿರುವ ಅದರ ಸಮಸ್ತ ಬಲಿಗಳನ್ನು ಒಂದೇ ದೃಶ್ಯ ಅಧಿಪತಿಯಾಗಿರುವ ಪ್ರತಿ ಕ್ರಿಸ್ತನ ಕೆಳಗೆ (೨ ಥೆಸ್ಸ. ೨,೧—೧೦.) ಕೂಡಿಸುವದು. ಆಗ್ಯೆ ಎಲ್ಲಾ ಅನ್ಯಾಯವೂ ಕೇಡೂ ಅಧಿಕವಾಗುವದು. ಜನಾಂಗಗಳಲ್ಲಿ ಅನೀತಿ ಮಾರ್ಮಲೆ ಯುದ್ಧ, ಪ್ರಕೃತಿಯಲ್ಲಿ ವ್ಯಾಧಿಗಳು ಬರಗಳು ಭೂಕಂಪಗಳು ಬರುವವು. (ಮತ್ತಾ. ೨೪,೭.) ಆಗ್ಯೆ ಆಕಾಶದಲ್ಲಿಯೂ ಭೂಮಿಯಲ್ಲಿಯೂ (ಮತ್ತಾ. ೨೪, ೨೯. ೩೦.) ಗುರ್ತುಗಳು ಮನುಷ್ಯ ಪುತ್ರನ ಸಮೀಪಿಸುವ ಆಗಮನವನ್ನು ಸಾರುವವು. ಮತ್ತು ನ್ಯಾಯತೀರ್ವಿಕೆಯ ಮತ್ತು ವಿಮೋಚನೆಯ ದಿನವು ಫಕ್ಕನೆ ಬರುವದು — ಆ ಮಹಾ ದಿನದ ಬೇರೆ ಬೇರೆ ಭಾಗಗಳನ್ನು ಕಾಲದ ಪ್ರಕಾರ ಚನ್ನಾಗಿ ಪ್ರತ್ಯೇಕಿಸಿ, ಒಂದರ ಮೇಲೊಂದು ಯಾವದು ಬರುವದೆಂದು ನಿಶ್ಚೈಸ ಕೂಡದು. ಅದರ ಹೊರ್ತು ಒಂದರ ಮೇಲೊಂದು ಆದೀತೆಂಬದರ ವಿಷಯದಲ್ಲಿ ಸಂಶಯವುಂಟು. ನಿಶ್ಚಯವಾಗಿ ಎಲ್ಲಾ ಒಂದೇ ಸಾರಿ ಆಗ ಬಹುದು. ಕರ್ತನ ಪ್ರತ್ಯಕ್ಷತೆಯೂ, ಸತ್ತವರ ಉತ್ಥಾನವೂ, ಬದುಕುವವರ ಮಾರ್ಪಡುವಿಕೆಯೂ, ಪ್ರಕೃತಿಯ ಸ್ಫುಟೀಕರಣವೂ, ನ್ಯಾಯತೀರ್ಪು, ತೀರ್ಪಿನ ಉಚ್ಚಾರವೂ, ತೀರ್ಪು ನಡಿಸುವದೂ, ಸಮಸ್ತ ನಿತ್ಯತ್ವದ ಸುಖ ದುಃಖಗಳನ್ನು ಇಟ್ಟುಕೊಂಡಿರುವ ವರ್ಣಿಸ ಕೂಡದಷ್ಟು ದೊಡ್ಡದಾಗಿಯೂ ಪರಿಶುದ್ಧವಾಗಿಯೂ ಇರುವ ಒಂದೇ ನಿಮಿಷದ ಕೆಲಸವಾಗಿರುತ್ತದೆ.

## ೧. ದೇಹದ ಉತ್ಥಾನ.

**೨೯೮.** ಶರೀರದ ಮರಣವು, ಅಂದರೆ ಶರೀರದಿಂದ ಪ್ರಾಣವು ವಿಂಗಡವಾಗುವದು ಪಾಪದ ಸಂಬಳವಾಗಿದೆ. (**೨೦೧.**) ಶರೀರದ ಉತ್ಥಾನವು, ಹಾಗಂದರೆ, ಮಹಿಮೆ ಪಟ್ಟ ಶರೀರದ ಸಂಗಡ ಪ್ರಾಣದ ಪುನರೈಕ್ಯವು — ವಿಮೋಚನೆಯ ಫಲವಾಗಿದೆ. (**೨೩೩.**) ಶರೀರದ ಮರಣವು ಎಲ್ಲಾ ಮನುಷ್ಯರಿಗೆ, ಅವರೆಲ್ಲರು ಪಾಪಿಗಳಾಗಿರುವ ಕಾರಣ, ನಿಶ್ಚಯ[೧]. ಆದರೆ ಮರಣದ ರೀತಿಯೂ ಕಾಲವೂ ಎಲ್ಲಾ ಮನುಷ್ಯರಿಗೆ ಅನಿಶ್ಚಯ. ಆದಕಾರಣ ಮರಣವು ಬರುವಾಗ್ಯೆ, ಅದು ನಮ್ಮ ಈ ಜೂಜೀವದ ಸಮಸ್ತ ಸಂಕಟಗಳಿಂದ ನಮ್ಮ ಕರ್ತನಾದ ಕ್ರಿಸ್ತನ ಬಳಿಗೆ ಕರಕೊಂಡು ಹೋಗುವ[೨]. ಪ್ರಿಯ ಸ್ನೇಹಿತನೆಂಬ ಹಾಗೆ, ತಡ ಮಾಡದೆ ಮಾನಸಾಂತರದಿಂದ[೩] ಮರಣದ ಕೊಂಡಿಯನ್ನು, ಅದು ಬರುವ ಮೊದಲೆ, ಮುರಿಯ ತಕ್ಕದ್ದು[೪].

೧) "ಒಬ್ಬ ಮನುಷ್ಯನಿಂದ ಪಾಪವೂ," ಇತ್ಯಾದಿ. (ರೋಮಾ. ೫,೧೨. **೧೯೮**, ೨.)

೨) "ಬದುಕಿದರೆ, ಕರ್ತನಿಗೆ ಬದುಕುತ್ತೇವೆ; ಸತ್ತರೆ, ಕರ್ತನಿಗೆ ಸಾಯುತ್ತೇವೆ. ಹಾಗಾದರೆ, ಬದುಕಿದರೂ, ಸತ್ತರೂ, ಕರ್ತನವರಾಗಿದ್ದೇವೆ." (ರೋಮಾ ೧೪, ೭. ೮.) "ಬಿಟ್ಟು ಹೋಗಿ ಕ್ರಿಸ್ತನ ಸಂಗಡ ಇರ ನನಗೆ ಅಪೇಕ್ಷೆ ಉಂಟು." (ಫಿಲಿ. ೧, ೨೩.) "ಹೀಗಿ

ರಲಾಗಿ ಯಾವಾಗಲೂ ಧೈರ್ಯ ಪಟ್ಟು, ಶರೀರದಲ್ಲಿ ಸ್ವವಾಸವಾಗಿ ಕರ್ತನಿಗೆ ಪರವಾಸವಾಗಿದ್ದೇವೆಂದು ತಿಳಿದು, ದೃಷ್ಟಿಯಿಂದಲ್ಲ ವಿಶ್ವಾಸದಿಂದಲೇ ನಡೆದು ಕೊಳ್ಳುವವರಾಗಿದ್ದು, ಹ್ಯಾಗಾದರೂ ಧೈರ್ಯ ಪಟ್ಟು, ಶರೀರಕ್ಕೆ ಪರವಾಸವಾಗಿ ಕರ್ತನ ಬಳಿಯ ಸ್ವವಾಸವಾಗ ಬಹು ಹೆಚ್ಚಾಗಿ ಅಪೇಕ್ಷಿಸುತ್ತೇವೆ. ಆದದರಿಂದ ಸ್ವವಾಸವಾಗಿದ್ದರೂ, ಪರವಾಸವಾಗಿದ್ದರೂ, ಅವನನ್ನು ಮೆಚ್ಚಿಸುವ ಮಾನವನ್ನು ಆಶಿಸುತ್ತೇವೆ." (೨ ಕೊರಿ. ೫, ೬—೯.)

೩) "ನಾವು ಜ್ಞಾನವುಳ್ಳ ಹೃದಯವನ್ನು ಹೊಂದುವ ಹಾಗೆ, ನಮ್ಮ ದಿವಸಗಳನ್ನು ಲೆಖ್ಖಿಸುವದಕ್ಕೆ ನಮಗೆ ತಿಳಿಯ ಮಾಡು." (ಕೀರ್ತ. ೯೦, ೧೨.)

೪) "ಮರಣದ ಕೊಂಡಿಯು ಪಾಪವೆ." (೧ ಕೊರಿ. ೧೫, ೫೬.)

**೧೯೯.** ಮರಣದ ತರುವಾಯ ಭೂಶರೀರವು ಕೊಳೆಯುತ್ತದೆ. ಆದರೆ ಪ್ರಾಣವು ಉಳಿಯುತ್ತದೆ[೧], ಮತ್ತು ಆ ಕ್ಷಣದಲ್ಲಿ ಒಂದು ನ್ಯಾಯತೀರ್ಪಿನಿಂದ (ಅದು ಇನ್ನೂ ಕಡೇ ನ್ಯಾಯತೀರ್ಪು ಅಲ್ಲಾ)[೨] ಭೂಮಿಯಲ್ಲಿ ಬದುಕಿದ ಜೀವಕ್ಕೆ ತಕ್ಕದ್ದಾಗಿರುವ ಸ್ಥಳಕ್ಕೆ ಬರುತ್ತದೆ[೩]. ಅಲ್ಲಿ ಕಡೇ ದಿನದ ಉತ್ಥಾನದ ಪರ್ಯಂತಕ್ಕೆ ಉಳ ಕೊಳ್ಳುತ್ತದೆ[೪]. ವಿಶ್ವಾಸಿಗಳು ಕರ್ತನ ಹತ್ತರ ಆನಂದ ಸ್ಥಳಕ್ಕೂ[೫], ಅವಿಶ್ವಾಸಿಗಳೂ ದುಷ್ಟರೂ ಪೀಡೆಯ ಸ್ಥಳಕ್ಕೂ ಬರುತ್ತಾರೆ[೬].

೧) "ನೀನು ಮಣ್ಣು; ಮಣ್ಣಿಗೆ ತಿರುಗುವಿ." (ಉತ್ಪ. ೩, ೧೯.) "ಧೂಳಿಯು ತನ್ನ ಭೂಮಿಗೆ ತಿರುಗುವದು; ಆತ್ಮವು ಅದನ್ನು ಕೊಟ್ಟ ದೇವರ ಬಳಿಗೆ ತಿರುಗುವದು." (ಪ್ರಸ. ೧೨, ೭.)

೨) "ಯಾವ ಪ್ರಕಾರ ಒಂದೇ ಸಾರಿ ಸಾಯುವದೂ, ಇದರ ತರುವಾಯ ನ್ಯಾಯತೀರ್ವಿಕೆಯೂ ಮನುಷ್ಯರಿಗೆ ನೇಮಕವಾಗಿದೆಯೋ," ಇತ್ಯಾದಿ. (ಇಬ್ರಿ. ೯, ೨೭.)

೩) ಐಶ್ವರ್ಯವಂತನು ಮತ್ತು ಲಾಜರನು. (ಲೂಕ. ೧೬, ೧೯—೩೧.)

೪) ೨ ಕೊರಿ. ೫, ೧—೫.

೫) ಆ ಕಳ್ಳನು. (ಲೂಕ. ೨೩, ೪೩.) ಸ್ತೆಫನನು: "ಕರ್ತನಾದ ಯೇಸುವೇ, ನನ್ನ ಆತ್ಮವನ್ನು ಅಂಗೀಕರಿಸು." (ಅ. ಕ್ರಿ. ೭, ೫೯.) (ಫಿಲಿ. ೧, ೨೩. ಮತ್ತು ೨ ಕೊರಿ. ೫, ೮.) (**೧೯೮**, ೪.) "ಇನ್ನು ಮೇಲೆ ಕರ್ತನಲ್ಲಿ ಸಾಯುವ ಮರಣಸ್ಥರು ಭಾಗ್ಯವಂತರು; ಹೌದು, ಅವರು ತಮ್ಮ ಕಷ್ಟಗಳಿಂದ ವಿಶ್ರಾಂತಿಯಾಗುವರೆಂದು, ಆತ್ಮವು ಹೇಳುತ್ತದೆ; ಮತ್ತು ಅವರ ಕ್ರಿಯೆಗಳು ಅವರನ್ನು ಹಿಂಬಾಲಿಸುವವು." (ಪ್ರಕಟ. ೧೪, ೧೩.)

೬) ಯೂದ. (ಅ. ಕ್ರಿ. ೧, ೨೫.) ಐಶ್ವರ್ಯವಂತನು. (ಲೂಕ. ೧೬, ೨೩. ೨೪.)

**೨೦೦.** ಆದರೆ ಭೂಮಿಯಲ್ಲಿ ಹಾಕಿದ ಶರೀರವು ಕೋರಿಕೆಯಲ್ಲಿ ಬಿತ್ತಲ್ಪಡುವ ಬೀಜವಾಗಿರುತ್ತದೆ[೧]. ಹ್ಯಾಗೆ ಭೂಮಿಯಲ್ಲಿ ಹಾಕಿದ ಕೊಳೆಯುವ ಬೀಜದಿಂದ ಸೂರ್ಯ

ನ ಬದುಕಿಸುವ ಶಕ್ತಿಯ ಪರಿಮುಖವಾಗಿ ಹೊಸ ಸಸಿಯು ಉಂಟಾಗುತ್ತದೊ, ಹಾಗೆಯೆ ಕೊಳೆಯುವ ಭೂಶರೀರದಿಂದ ಉತ್ಥಾನವಾದ ಕ್ರಿಸ್ತನ ಶಕ್ತಿಯ ಪರಿಮುಖವಾಗಿ ಕೊಳೆಯದ ಹೊಸ ಶರೀರವು ಉಂಟಾಗುತ್ತದೆ[೨]. ಕ್ರಿಸ್ತನು ತನ್ನಲ್ಲಿಯೂ ನಮಗೋಸ್ಕರವೂ ಮರಣವನ್ನು ಜೈಸಿದ್ದಾನೆ. (**೨೨೨.**) ಆತನು ಮಾರ್ಗ ಮಾಡಿದ್ದಾನೆ. ಮತ್ತು ಈಗ ತನ್ನ ಶರೀರದ ಅಂಗಗಳಾಗಿರುವ ನಮ್ಮನ್ನು ತನ್ನ ಹಿಂದೆ ಎಳ ಕೊಳ್ಳುತ್ತಾನೆ[೩]. ನಮ್ಮ ಭೂಸಂಚಾರದ ಸಮಯದಲ್ಲಿ ಕ್ರಿಸ್ತನು ಆತ್ಮಸ್ನಾನದಲ್ಲಿ (**೩೩೧.**) ತನ್ನ ಆತ್ಮವನ್ನು ನಮಗೆ ಹೊದಿಸುತ್ತಾನೆ[೪]; ಮತ್ತು ಪರಿಶುದ್ಧ ರಾತ್ರಿಭೋಜನದಲ್ಲಿ ಆತ್ಮದ ಪರಿಮುಖವಾಗಿ (**೩೪೩. ೩೪೪.**) ತನ್ನ ಮಹಿಮೆ ಪಟ್ಟ ಶರೀರ ರಕ್ತಗಳನ್ನು ಉಣ್ಣಿಸುತ್ತಾನೆ. ಮತ್ತು ಕಡೆಯಲ್ಲಿ ಲಯವಾಗುವ ಶರೀರವನ್ನು ತನ್ನ ಮಹಿಮೆ ಪಟ್ಟ ಶರೀರದ ಹೋಲ್ಪಿಕೆಯಲ್ಲಿ ಮಹಿಮೆ ಪಡಿಸುತ್ತಾನೆ[೫]. ಇದೇ ಶರೀರದ ಉತ್ಥಾನವು.

೧) "ಲಯವಾಗಿ ಬಿತ್ತಲ್ಪಡುವದು, ನಿರ್ಲಯವಾಗಿ ಎಬ್ಬಿಸಲ್ಪಡುವದು; ಅವಮಾನದಲ್ಲಿ ಬಿತ್ತಲ್ಪಡುವದು, ಮಹಿಮೆಯಲ್ಲಿ ಎಬ್ಬಿಸಲ್ಪಡುವದು; ಅಶಕ್ತಿಯಲ್ಲಿ ಬಿತ್ತಲ್ಪಡುವದು, ಬಲದಲ್ಲಿ ಎಬ್ಬಿಸಲ್ಪಡುವದು; ಪ್ರಾಣ ಭಾವದ ಶರೀರವು ಬಿತ್ತಲ್ಪಡುವದು, ಆತ್ಮಭಾವದ ಶರೀರವು ಎಬ್ಬಿಸಲ್ಪಡುವದು. ಪ್ರಾಣಭಾವದ ಶರೀರ ಉಂಟು, ಆತ್ಮಭಾವದ ಶರೀರ ಉಂಟು." (೧ ಕೊರಿ. ೧೫, ೪೨—೪೪.)

೨) "ಮೂಢನೇ ನೀನು ಬಿತ್ತುವಂಥಾದ್ದು, ಸತ್ತರೆ ಹೊರ್ತು ಬದುಕಿಸಲ್ಪಡದು. ಮತ್ತು ನೀನು ಬಿತ್ತುವಂಥಾದ್ದು ಉಂಟಾಗುವ ಶರೀರವನ್ನಲ್ಲಾ, ಬರೇ ಕಾಳನ್ನೇ, ಒಂದು ವೇಳೆ ಗೋಧಿಯಾಗಲಿ, ಮಿಕ್ಕಾದವುಗಳಲ್ಲಿ ಒಂದು ಆಗಲಿ, ಬಿತ್ತುತ್ತೀ. ಆದರೆ ದೇವರು ತನ್ನ ಮನಸ್ಸಿಗೆ ಬಂದ ಹಾಗೆ ಅದಕ್ಕೆ ಶರೀರವನ್ನು—ಒಂದೊಂದು ಬೀಜಕ್ಕೆ ಸ್ವಂತ ಶರೀರವನ್ನು—ಕೊಡುತ್ತಾನೆ." (೧ ಕೊರಿ. ೧೫, ೩೬—೩೮.)

೩) "ಆದರೆ ಒಬ್ಬೊಬ್ಬನು ಸ್ವಂತ ಕ್ರಮದಲ್ಲಿ; ಪ್ರಥಮ ಫಲ ಕ್ರಿಸ್ತನು; ತರುವಾಯ ಅವನ ಬರುವಿಕೆಯಲ್ಲಿ ಕ್ರಿಸ್ತನವರು." (೧ ಕೊರಿ. ೧೫, ೨೩.)

೪) "ಯೇಸುವನ್ನು ಸತ್ತವರೊಳಗಿಂದ ಎಬ್ಬಿಸಿದವನ ಆತ್ಮವು ನಿಮ್ಮಲ್ಲಿ ವಾಸವಾಗಿದ್ದರೆ, ಕ್ರಿಸ್ತನನ್ನು ಸತ್ತವರೊಳಗಿಂದ ಎಬ್ಬಿಸಿದವನು ನಿಮ್ಮಲ್ಲಿ ವಾಸವಾಗಿರುವ ತನ್ನ ಆತ್ಮದಿಂದ ನಿಮ್ಮ ಮರ್ತ್ಯ ಶರೀರಗಳನ್ನು ಸಹಾ ಬದುಕಿಸುವನು." (ರೋಮಾ. ೮, ೧೧.)

೫) "ನಮ್ಮ ಪಟ್ಟಣವಾಸವು ಪರಲೋಕಗಳಲ್ಲಿ ಉಂಟು; ಅಲ್ಲಿಂದಲೇ ಕರ್ತನಾದ ಯೇಸು ಕ್ರಿಸ್ತನೆಂಬ ರಕ್ಷಕನು ಬರುವದನ್ನು ಎದುರು ನೋಡುತ್ತೇವೆ. ಅವನು ತನಗೆ ಯೆಲ್ಲವನ್ನು ಅಧೀನ ಮಾಡ ಬಹುದಾದ ಯತ್ನದ ಪ್ರಕಾರ, ನಮ್ಮ ನೀಚತನದ ಶರೀರವನ್ನು ತನ್ನ ಮಹಿಮೆಯ ಶರೀರಕ್ಕೆ ಸಾರೂಪ್ಯವಾಗುವ ಹಾಗೆ ಮಾರ್ಪಡಿಸುವನು." (ಫಿಲಿ. ೩, ೨೦. ೨೧.)

**೨೦೧.** ಶರೀರದ ಉತ್ಥಾನವು ಸರ್ವಸಾಧಾರಣವಾಗಿರುತ್ತದೆ. ಅದು ಎಲ್ಲಾ ಸತ್ತವರಿಗೆ ಬರುತ್ತದೆ. ಆದರೆ ಅದು ಎಲ್ಲರಿಗೆ ಒಂದೇ ಪ್ರಕಾರವಲ್ಲಾ, ಒಬ್ಬರಿಗೆ ಅದು ಭಾಗ್ಯಕ್ಕೆ ಜೀವದ ಉತ್ಥಾನ, ಮತ್ತೊಬ್ಬರಿಗೆ ಅದು ಶಿಕ್ಷೆನಿರ್ಣಯಕ್ಕೆ ತೀರ್ಪಿನ ಉತ್ಥಾನ[೧]. ಯಾಕಂದರೆ ಕ್ರಿಸ್ತನ ಸಂಗಡ ಏನೂ ಗೊಡವೆ ಇಲ್ಲದ ದುಷ್ಟರ ಶರೀರಗಳು ಭಕ್ತರ ಶರೀರಗಳ ಹಾಗೆ ಕ್ರಿಸ್ತನ ಶರೀರದ ಸಾರೂಪ್ಯಕ್ಕೆ ಮಾರ್ಪಡಿಸಲ್ಪಡ ಕೂಡದು[೨]. ಮಹಿಮೆ ಪಟ್ಟ ಶರೀರವು ವಿಶ್ವಾಸಿಗಳಿಗೆ ಹ್ಯಾಗೆ ಭಾಗ್ಯದ ಕರಣವಾಗಿರುತ್ತದೊ, ಹಾಗೆಯೆ ದುಷ್ಟರು ತಮ್ಮ ಒಳಸ್ಥಿತಿಗೆ ತಕ್ಕದ್ದಾಗಿಯೂ ಪೀಡೆ ಶಿಕ್ಷೆನಿರ್ಣಯಗಳ ಕರಣವಾಗಿಯೂ ಇರ ತಕ್ಕ ಶರೀರವನ್ನು ಹೊಂದ ಬೇಕು[೩].

೧) "ಯಾಕಂದರೆ ಸಮಾಧಿಗಳಲ್ಲಿರುವವರೆಲ್ಲರು ಅವನ ಶಬ್ದವನ್ನು ಕೇಳುವ ಘಳಿಗೆ ಬರುತ್ತದೆ. ಆಗ ಒಳ್ಳೆಯವುಗಳನ್ನು ಮಾಡಿದವರು ಜೀವದ ಪುನರುತ್ಥಾನಕ್ಕೂ, ಕೆಟ್ಟವುಗಳನ್ನು ಮಾಡಿದವರು ಆಜ್ಞೆಯ ಪುನರುತ್ಥಾನಕ್ಕೂ, ಹೊರಗೆ ಬರುವರು." (ಯೋಹಾ. ೫, ೨೮. ೨೯.) "ಭೂಮಿಯ ಮಣ್ಣಿನೊಳಗೆ ನಿದ್ದೆ ಮಾಡುವವರಲ್ಲಿ ಅನೇಕರು — ಇವರು ನಿತ್ಯ ಜೀವಕ್ಕೂ, ಅವರು ನಾಚಿಕೆಗೂ ನಿತ್ಯ ನಿಂದೆಗೂ ಎಚ್ಚರವಾಗುವರು." (ದಾನಿ. ೧೨, ೨.)

೨) (ಫಿಲಿ. ೩, ೨೦. ೨೧. ಸಮ ನೋಡು **೨೦೦,** ೫.) "ಆಗ ನೀತಿವಂತರು ಸೂರ್ಯನ ಹಾಗೆ ತಮ್ಮ ತಂದೆಯ ರಾಜ್ಯದಲ್ಲಿ ಪ್ರಕಾಶಿಸುವರು." (ಮತ್ತಾ. ೧೩, ೪೩.) (ದಾನಿ. ೧೨, ೩.)

೩) "ಅವರ ಹುಳವು ಸಾಯದೆ ಬೆಂಕಿಯು ಆರದೆ ಇರುವದು." (ಮಾರ್ಕ. ೯, ೪೪.) (ಯೆಶಾ. ೬೬, ೨೪.) "ಅಲ್ಲಿ ಅಳುವಿಕೆಯೂ ಹಲ್ಲುಕಡಿಯುವಿಕೆಯೂ ಇರುವವು." (ಮತ್ತಾ. ೮, ೧೨.)

**೨೦೨.** ಕಡೇ ದಿನದಲ್ಲಿ ಆಗ ಬದುಕುವ ಭಕ್ತರ ಶರೀರಗಳು ಮೊದಲು ಕೊಳತು ಮತ್ತೆ ಮಹಿಮೆಯಲ್ಲಿ ಶೇರುವದಲ್ಲಾ; ಕ್ಷಣದಲ್ಲಿ ಮಹಿಮೆಯ ಸ್ಥಿತಿಯೊಳಗೆ ಮಾರ್ಪಡುವವು.

"ರಕ್ತಮಾಂಸಗಳು" ಇತ್ಯಾದಿ. (೧ಕೊರಿ. ೧೫, ೫೦.) (**೨೫೫,** ೧.) "ಇಗೋ ಮರ್ಮವನ್ನು ನಿಮಗೆ ಹೇಳುತ್ತೇನೆ—ಎಲ್ಲರು ನಿದ್ದೆ ಹೋಗೆವು, ಆದರೆ ಕ್ಷಣದಲ್ಲಿ, ರೆಪ್ಪೆ ಬಡಿಯುವದರಲ್ಲಿ, ಕಡೇ ತುತೂರಿಯಲ್ಲಿ, ಎಲ್ಲರು ಮಾರ್ಪಡುವೆವು. ಯಾಕಂದರೆ ತುತೂರಿಯು ಧ್ವನಿಯಾಗುವದು, ಆಗ ಸತ್ತವರು ನಿರ್ಲಯವಾಗಿ ಎಬ್ಬಿಸಲ್ಪಡುವರು; ಮತ್ತು ನಾವು ಮಾರ್ಪಡುವೆವು." (೧ ಕೊರಿ. ೧೫, ೫೧. ೫೨.)

ಪರಿಶಿ. ಆದರೆ ಮರಣವು ಪಾಪದ ಸಂಬಳವಾಗಿರುವದರಿಂದಲೂ, ಪಾಪದಿಂದ ಎಲ್ಲಾ

ಮನುಷ್ಯರ ಮೇಲೆ ವ್ಯಾಪಿಸಿದರಿಂದಲೂ, ಈ ಮಾರ್ಪಾಟ ಸಹಾ, ಹಳೆ ಮನುಷ್ಯನು ಅನ್ಯಥಾ ಮರಣದಲ್ಲಿ ಅನುಭವಿಸುವ ಭಯವೂ ಕಂಪವೂ ಇಲ್ಲದೆ ಹೋಗದು. ಮರಣದ ಭಯವೂ ಕೊಳೆಯುವಿಕೆಯ ಕಂಪವೂ ಮಹಿಮೆ ಪಡುವದರ ಹರ್ಷವೂ ಇದೆಲ್ಲಾ ಇಲ್ಲಿ ಮಾರ್ಪಾಟದ ಒಂದೆ ಕ್ಷಣದಲ್ಲಿಯೇ ಕೂಡಿ ಬರುತ್ತದೆ.

**೨೦೨.** ಶರೀರದ ಉತ್ಥಾನದ ಸಂಗಡ ಪರಲೋಕ ಭೂಲೋಕಗಳ ಮಹಿಮಾನವಾಗುವದೂ ನವೀಕರಣವೂ ಸಹಾ ಕೂಡಾ ಬರುವದು. ಹ್ಯಾಗೆ ಮನುಷ್ಯಶರೀರ ಕೊಳೆಯಿಂದಲೊ, ಹಾಗೆಯೆ ಪರಲೋಕ ಭೂಲೋಕಗಳು ಬೆಂಕಿಯಿಂದ ಶುದ್ಧವಾಗುವವು.

"ಆದರೆ ಕರ್ತನ ದಿನವು ರಾತ್ರಿ ಕಳ್ಳನ ಹಾಗೆ ಬರುವದು; ಅದರಲ್ಲಿ ಆಕಾಶಗಳು ಮಹಾ ಘೋಷದಿಂದ ಇಲ್ಲದೆ ಹೋಗುವವು; ಮಹಾ ಭೂತಗಳು ಉರಿದು, ಕರಗಿ ಹೋಗುವವು; ಭೂಮಿಯು ಅದರಲ್ಲಿರುವ ಕೆಲಸಗಳೂ ಸುಟ್ಟು ಹೋಗುವವು. ಆದರೆ ಅವನ ವಾಗ್ದತ್ತದ ಪ್ರಕಾರ ನೀತಿಯು ವಾಸವಾಗಿರುವ ಹೊಸ ಆಕಾಶಗಳನ್ನೂ, ಹೊಸ ಭೂಮಿಯನ್ನೂ ನಿರೀಕ್ಷಿಸುತ್ತೇವೆ." (೨ ಪೇತ್ರ. ೩, ೧೦. ೧೩.) (ಸಮ ನೋಡು ಯೆಶಾ. ೬೫, ೧೭. ಪ್ರಕಟ. ೨೧, ೧.)

ಪರಿಶಿ. ಕಡೆಯಲ್ಲಿ ಹಾಗಾದರೆ "ನಿರ್ಮಾಣದ ನರಳುತ್ತಾ ತಾಳುವ ಪ್ರಸವವೇದನೆ" ಸಹಾ "ದೇವರ ಮಕ್ಕಳ ಮಹಿಮೆಯ ಬಿಡುಗಡೆಗೋಸ್ಕರ" ಬಹಳ ಸಾವಿರ ವರ್ಷಗಳು ಕಾದು ಕೊಂಡಿದ್ದ ಮೇಲೆ, ಬಹು ಕಾಲ ಕಾದು ಕೊಂಡಿದ್ದದ್ದನ್ನು ಹೊಂದುವದು. (**೨೦೫.**) ಮನುಷ್ಯನು ಪ್ರಕೃತಿಯನ್ನು ಸಂಪೂರ್ತಿಗೆ ತಕ್ಕೊಂಡು ಹೋಗುವದನ್ನು ಬಿಟ್ಟು (**೧೮೦.**) ಅದನ್ನು ಆರಂಭದಲ್ಲಿ ತನ್ನ ಸಂಗಡ ವಿನಾಶದೊಳಗೆ ಎಳೆ ಕೊಂಡು ಹೋದನು. (**೨೦೨.**) ಮೊದಲನೆ ಆದಮನು ಏನು ಮಾಡದೆ ಬಿಟ್ಟನೊ, ಮತ್ತು ಕೆಡಿಸಿದನೊ, ಅದನ್ನು ಎರಡನೆ ಆದಮನು ನವೀಕರಿಸಿ ಸಂಪೂರ್ತಿ ಮಾಡುತ್ತಾನೆ. (ಈತನು ಭೂಸಂಚಾರದ ಸಮಯದಲ್ಲಿಯೆ ಅದ್ಭುತಗಳಿಂದ ಅದರ ವೇದನೆಗಳನ್ನು ಶಾಂತಿ ಪಡಿಸಿ, ಅದರ ಘಾಯಗಳನ್ನು ವಾಸಿ ಮಾಡಿ ಇದ್ದನು.—**೨೪೪,** ಪರಿಶಿ.) ಇದನ್ನು ಪರಲೋಕ ಭೂಲೋಕಗಳನ್ನು ಮಹಿಮೆ ಪಡಿಸುವದರಿಂದ ಸಾಧಿಸುತ್ತಾನೆ.—ಇದು ಆರಂಭದಲ್ಲಿ ಆಗ ತಕ್ಕದ್ದಾಗಿದ್ದ ಪ್ರಕಾರ, ಸ್ವಾಭಾವಿಕವಾದ ವಿಕಾಸಮಾರ್ಗದಲ್ಲಿ ಆಗ ಕೂಡದೆ ಹೋಯಿತು ಸರಿ, (ಯಾಕಂದರೆ ಈ ಮಾರ್ಗವು ಪಾಪದಿಂದ ಕೆಟ್ಟು ಹೋಯಿತು); ಆದರೆ ಈಗಲೆ ಯತ್ನೈಸುತ್ತಾ ಕಡೆಯಲ್ಲಿ ದಹಿಸುವ ಕರಗಿಸುವ ಶುದ್ಧ ಮಾಡುವ ಬೆಂಕಿಯ ಉತ್ಪಾತಗಳಿಂದ ಪ್ರಕಟವಾಗಿ ಸಂಪೂರ್ತಿಯಾಗುವ ಹೊಸ ವಿಕಾಸಗತಿಯಿಂದ ಪ್ರಾಪ್ತಿಯಾಗುವದು.—ಕ್ರಿಸ್ತನ ಮರಣಕಾಲದಲ್ಲಿ ಎಲ್ಲಾ ಪ್ರಕೃತಿಯ ಕಂಪನವನ್ನು ಆಲೋಚಿಸ ತಕ್ಕದ್ದು. (ಮತ್ತಾ. ೨೭, ೫೨. ಇತ್ಯಾದಿ.)

## ೨. ನಿತ್ಯಜೀವ. ನಿತ್ಯಮರಣ.

**೨೦೪.** ಕಡೇ ನ್ಯಾಯತೀರ್ವಿಕೆಯಿಂದ (**೨೫೧.**) ಶಿಕ್ತರು ನಿತ್ಯ ಜೀವಕ್ಕೂ ದುಷ್ಟರು ನಿತ್ಯಮರಣಕ್ಕೂ ಒಪ್ಪಿಸಲ್ಪಡುವರು[೧]. ದೇವರ ರಾಜ್ಯದ ಇಹದ ವಿಕಾಸಗತಿಯಲ್ಲಿ ಎಲ್ಲರೂ ರಕ್ಷಣೆಯ ಅಂಗೀಕಾರಕ್ಕಾಗಲಿ ತಿರಸ್ಕಾರಕ್ಕಾಗಲಿ ನಿಶ್ಚೈಸಿ ಕೊಂಡಿರ ಬೇಕಾದ್ದರಿಂದ (**೨೮೫.**) ಕಡೇ ತೀರ್ಪಿನಿಂದ ಯಾರು ರಕ್ಷಿಸಲ್ಪಡ ಬೇಕು, ಯಾರು ಶಿಕ್ಷೆನಿರ್ಣಯ ಪಡ ಬೇಕೆಂಬುವದು ನಿಶ್ಚೈಸಲ್ಪಡುವದು ಅವಶ್ಯವಿಲ್ಲಾ, ಸರ್ವಜ್ಞನಾದ ನ್ಯಾಯಕರ್ತನು ಕೇಳಿ ವಿಚಾರಿಸ ಬೇಕು ಎಂಬ ಮಾತು ಏನೂ ಸಮವಲ್ಲಾ. ಅದೇ ಪ್ರಕಾರ ಒಳ್ಳೆ ಕ್ರಿಯೆಗಳನ್ನೂ, ಮತ್ತೊಂದು ಕಡೆಯಲ್ಲಿ ಕೆಟ್ಟ ಕ್ರಿಯೆಗಳನ್ನೂ ತೂಗಿಸುವದು ಸಹಾ ಅವಶ್ಯವಲ್ಲಾ. ಯಾಕಂದರೆ — ಹತ್ತು ಸಾವಿರ ಒಳ್ಳೇ ಕ್ರಿಯೆಗಳು ಒಂದೇ ಕೆಟ್ಟ ಕ್ರಿಯೆಗೆ ಅತಿ ಚಾರವಾಗಿರ ಕೂಡದೆಂಬದನ್ನು ಆಲೋಚಿಸುವದು ಅವಶ್ಯವಲ್ಲಾ. (ಲೂಕ. ೧೭, ೧೦.) (**೧೭೯.**) — ಒಂದು ಪಕ್ಷದವರು ನೀತಿನಿರ್ಣಯದಿಂದ ತಮ್ಮ ಎಲ್ಲಾ ಪಾಪಗಳ ಲಯವನ್ನೂ ಕ್ಷಮೆಯನ್ನೂ ಹೊಂದಿ (**೨೭೫.**) ಶುದ್ಧೀಕರಣದಿಂದ ದೇವರಿಗೆ ಸಮರ್ಪಕವಾದ ಕ್ರಿಯೆಗಳಿಂದ ಅಲಂಕರಿಸಲ್ಪಟ್ಟಿದ್ದಾರೆ; (**೨೭೯.**) ಮತ್ತೊಂದು ಪಕ್ಷದವರಲ್ಲಿ ಬಂದ ಕಠಿಣತ್ವದಿಂದ ಪಾಪಪತನದ ತರುವಾಯ ಇನ್ನೂ ಉಳಿದ ಒಳ್ಳೇದು ಸಹಾ (**೨೦೪.**) ಪೂರ್ಣ ಲಯವಾಗಿದೆ. (**೨೮೫.**)[೨] ಹಾಗಾದರೆ ಕಡೇ ನ್ಯಾಯತೀರ್ಪು ಅಂದರೆ, ಒಬ್ಬೊಬ್ಬನು ತನ್ನ ತನ್ನ ವಿಷಯದಲ್ಲಿ ತಾನೆ ಉಚ್ಚರಿಸಿದ ನ್ಯಾಯತೀರ್ಪನ್ನು ಪ್ರಕಟಿಸುವದೂ, ಅದನ್ನು ಈಡೇರಿಸುವದೂ, ಅಂದರೆ ರಕ್ಷಿಸಲ್ಪಟ್ಟವರನ್ನೂ ಕಠಿಣವಾದವರನ್ನೂ ವಿಂಗಡಿಸಿ, ಒಬ್ಬರನ್ನು ನಿತ್ಯಜೀವಕ್ಕೂ ಮತ್ತೊಬ್ಬರನ್ನು ನಿತ್ಯ ಶಿಕ್ಷೆನಿರ್ಣಯಕ್ಕೂ ಒಪ್ಪಿಸಿ ಕೊಡುವದೂ ಆಗಿರುತ್ತದೆ ಹೊರ್ತು[೩] ಬೇರೊಂದಲ್ಲಾ.

೧) "ಒಬ್ಬೊಬ್ಬನು ಶರೀರದಲ್ಲಿ ಆದವುಗಳನ್ನು, ಒಳ್ಳೇದಾಗಲಿ ಕೆಟ್ಟದ್ದಾಗಲಿ, ಮಾಡಿದ ಪ್ರಕಾರ ಹೊಂದುವ ಹಾಗೆ, ನಾವೆಲ್ಲರು ಕ್ರಿಸ್ತನ ನ್ಯಾಯಾಸನದ ಮುಂದೆ ಕಾಣಿಸಿಕೊಳ್ಳ ಬೇಕು." (೨ಕೊರಿ. ೫, ೧೦.)

೨) "ಲೋಕಕ್ಕೆ ಆಜ್ಞೆನಿರ್ಣಯಿಸುವದಕ್ಕಲ್ಲ, ಲೋಕವು ಅವನಿಂದ ರಕ್ಷಿಸಲ್ಪಡುವ ಹಾಗೆ, ದೇವರು ತನ್ನ ಮಗನನ್ನು ಲೋಕಕ್ಕೆ ಕಳುಹಿಸಿದನು. ಅವನಲ್ಲಿ ವಿಶ್ವಾಸಿಸುವವನಿಗೆ ಆಜ್ಞೆನಿರ್ಣಯವಿಲ್ಲ. ಆದರೆ ವಿಶ್ವಾಸಿಸದವನಿಗೆ, ದೇವರ ಒಬ್ಬನಾಗಿ ಹುಟ್ಟಿದ ಮಗನ ಹೆಸರಿನಲ್ಲಿ ವಿಶ್ವಾಸಿಸದ ಕಾರಣ, ಈಗಲೇ ಆಜ್ಞೆನಿರ್ಣಯವಾಯಿತು. ಆಜ್ಞೆನಿರ್ಣಯವು ಇದೇ — ಬೆಳಕು ಲೋಕಕ್ಕೆ ಬಂದಿದ್ದರೂ, ಮನುಷ್ಯರು, ತಮ್ಮ ಕ್ರಿಯೆಗಳು ಕೆಟ್ಟವಾಗಿರುವ ಕಾರಣ, ಬೆಳಕಿಗಿಂತ ಕತ್ತಲೆಯನ್ನು ಹೆಚ್ಚಾಗಿ ಪ್ರೀತಿ ಮಾಡಿದ್ದಾರೆ." (ಯೋಹಾ. ೩, ೧೭—೧೯.)

೩) "ಇದಲ್ಲದೆ ಮನುಷ್ಯನ ಮಗನು ತನ್ನ ಮಹಿಮೆಯಲ್ಲಿ ತನ್ನ ಪರಿಶುದ್ಧ ದೂತರೆಲ್ಲರ ಸಂಗಡ ಬರುವಾಗ, ತನ್ನ ಮಹಿಮೆಯ ಸಿಂಹಾಸನದ ಮೇಲೆ ಕೂಡ್ರುವನು. ಮತ್ತು ಅವನ ಮುಂದೆ ಜನಾಂಗಗಳೆಲ್ಲಾ ಕೂಡಲ್ಪಡುವವು. ಮತ್ತು ಕುರುಬನು ಕುರಿಗಳನ್ನೂ ಆಡುಗಳನ್ನೂ ಬೇರೆ ಬೇರೆ ಮಾಡುವ ಪ್ರಕಾರ, ಅವರನ್ನು ಬೇರೆ ಬೇರೆ ಮಾಡಿ, ಕುರಿಗಳನ್ನು ತನ್ನ ಬಲ ಪಾರ್ಶ್ವದಲ್ಲಿಯೂ, ಆಡುಗಳನ್ನು ಎಡ ಪಾರ್ಶ್ವದಲ್ಲಿಯೂ ನಿಲ್ಲಿಸುವನು. ಆಗ ಅರಸನು ತನ್ನ ಬಲ ಪಾರ್ಶ್ವದಲ್ಲಿ ಇರುವವರಿಗೆ, ನನ್ನ ತಂದೆಯಿಂದ ಆಶೀರ್ವದಿಸಲ್ಪಟ್ಟವರೇ, ಬನ್ನಿರಿ; ಜಗದುತ್ಪತ್ತಿಯಿಂದ ನಿಮಗೆ ಸಿದ್ಧ ಮಾಡಲ್ಪಟ್ಟ ರಾಜ್ಯವನ್ನು ಬಾಧ್ಯವಾಗಿ ಹೊಂದಿರಿ....ಆಗ ಎಡ ಪಾರ್ಶ್ವದಲ್ಲಿ ಇರುವವರಿಗೆ, ಶಪಿಸಲ್ಪಟ್ಟವರೇ, ನನ್ನನ್ನು ಬಿಟ್ಟು, ಪಿಶಾಚನಿಗೂ ಅವನ ದೂತರಿಗೂ ಸಿದ್ಧ ಮಾಡಲ್ಪಟ್ಟ ನಿತ್ಯ ಬೆಂಕಿಗೆ ಹೋಗಿರಿ.....ಆಗ ಇವರು ನಿತ್ಯ ದಂಡನೆಗೂ, ನೀತಿವಂತರು ನಿತ್ಯ ಜೀವಕ್ಕೂ, ಹೋಗುವರು." (ಮತ್ತಾ. ೨೫, ೩೧—೪೬.)

**೨೦೫.** ನಿತ್ಯ ಜೀವವು ದೇವರ ಸಂಗಡ ಕ್ರಿಸ್ತನಲ್ಲಿ ಪರಿಶುದ್ಧಾತ್ಮದ ಮೂಲವಾಗಿ ನಿತ್ಯ ಸಂಪೂರ್ಣ ಅನ್ಯೋನ್ಯದಲ್ಲಿ ಉಂಟು. ನಿತ್ಯಜೀವದ ಮಹಿಮೆಯನ್ನೂ ಆನಂದವನ್ನೂ ಯಾವ ಮನುಷ್ಯಭಾಷೆಯಾದರೂ ಯೋಗ್ಯವಾಗಿ ವರ್ಣಿಸುವದಕ್ಕೂ ಯಾವ ಮನುಷ್ಯ ಕಲ್ಪನೆಯಾದರೂ ಆಲೋಚಿಸಿ ತೀರಿಸುವದಕ್ಕೂ ಶಕ್ತವಾಗಿರದು[೧]. ಮನುಷ್ಯನದೂ ಭೂಮಿಯದೂ ಮಾತ್ರವಲ್ಲ, ಸಮಸ್ತ ಲೋಕದ ಸಂಪೂರ್ಣತೆಯ ಉನ್ನತ ಸ್ಥಿತಿಯು ಕೈಗೂಡಿ ಬಂತು. ವರ್ಣಿಸ ಕೂಡದ ಮಹಿಮೆಯಲ್ಲಿ ಮಾರ್ಪಟ್ಟ ಭೂಮಿಯು ರಕ್ಷಿಸಲ್ಪಟ್ಟವರ ನಿವಾಸ ಸ್ಥಳವಾಗಿರುತ್ತದೆ. ಅಲ್ಲಿ ನಿತ್ಯತ್ವದಲ್ಲಿ ದೇವರೂ ಮನುಷ್ಯನೂ ಆಗಿರುವ ಕ್ರಿಸ್ತನು ಸಹಾ ತನ್ನ ಪರಮ ಸಾಮೀಪ್ಯದ ಸನ್ನಿಧಿಯ ಸಿಂಹಾಸನವನ್ನು ತನ್ನವರ ಮಧ್ಯದಲ್ಲಿ ಇಟ್ಟಿದ್ದಾನೆ[೨]. ಇವರನ್ನು ಸಹೋದರರೆಂದು ಕರಿಯಲಿಕ್ಕೆ ಆತನು ನಾಚಿಕೆ ಪಡುವದಿಲ್ಲಾ. (ಇಬ್ರಿ. ೨, ೧೧.) ಇವರು ಆತನ ಪರಿಮುಖವಾಗಿ ದಿವ್ಯಸ್ವಭಾವ ಮಹಿಮೆಗಳಲ್ಲಿ ಪಾಲು ಹೊಂದಿದ್ದಾರೆ[೩]. ಇವರು ದೇವರ ಮಕ್ಕಳಾಗಿರುವದರಿಂದ, ದೇವರ ಬಾಧ್ಯರೂ ಕ್ರಿಸ್ತನ ಸಹಬಾಧ್ಯರೂ ಆಗಿದ್ದಾರೆ[೪]. ಅಲ್ಲಿ ವಿಶ್ವಾಸವು ನೋಟವಾಗಿ ಮಹಿಮಾನವಾಯಿತು[೫]. (೨ಕೊರಿ. ೫, ೭.) ತಿಳಕೊಳ್ಳುವದರಲ್ಲಿಯೂ ಇಚ್ಛೈಸುವದರಲ್ಲಿಯೂ ಸ್ಮೃತಿಯಲ್ಲಿಯೂ ಈ ಜೀವದಲ್ಲಿ ಪಾಲು ಪಾಲಾಗಿದ್ದದ್ದೆಲ್ಲಾ ಬಿದ್ದು ಹೋಯಿತು. ಆದರೆ ಎಂದಿಗೂ ಬಿದ್ದು ಹೋಗದ ಪ್ರೀತಿಯು ಶ್ರೇಷ್ಠ ಪರಿಪೂರ್ತಿಯಲ್ಲಿಯೂ ಬಲದಲ್ಲಿಯೂ ಪ್ರಬಲವಾಯಿತು. (೧ಕೊರಿ. ೧೩, ೮—೧೦.) ರಕ್ಷಿಸಲ್ಪಟ್ಟವರು ದೇವರ ನಿತ್ಯ ವಿಶ್ರಾಂತಿಯಲ್ಲಿ ಪ್ರವೇಶಿಸಿದ್ದಾರೆ. (ಇಬ್ರಿ. ೪, ೯. ೧೦. ಸಮ ನೋಡು **೫೭.**) ಆದರೆ ನಿರ್ಮಿಸಿದ ಮೇಲೆ ದೇವರ ವಿಶ್ರಾಂತಿಯು ಹ್ಯಾಗೊ, ಹಾಗೆಯೆ

(**೧೮೮.**) ಜಾಗ್ರ ಪಟ್ಟವರ ವಿಶ್ರಾಂತಿಯು ಪ್ರವೃತ್ತಿಹೀನತ್ವವೂ, ಏಕ ವಿಧವಾದ ಬೇಸರವೂ, ಹಿಂದೂ ಜನರ ಮಿಟಿಮಿಟಿ ಸ್ವರ್ಗವೂ ಅಲ್ಲ; ಎಲ್ಲಾದರಲ್ಲಿಯೂ ಅದಕ್ಕೆ ಪ್ರತೀಕಾರವಾಗಿರುತ್ತದೆ. ರಕ್ಷಿಸಲ್ಪಟ್ಟವರ ನಿತ್ಯ ವಿಶ್ರಾಂತಿಯು ಪ್ರವೃತ್ತಿಗಲ್ಲ, ಎಲ್ಲಾ ಪ್ರಕಾರದ ಚಂಚಲತ್ವಕ್ಕೆ ಪ್ರತಿಯಾಗಿರುತ್ತದೆ. ರಕ್ಷಿಸಲ್ಪಟ್ಟವರ ಪ್ರವೃತ್ತಿಯು ಅತಿ ಶ್ರೇಷ್ಠವೂ ಆನಂದಕರವೂ ಬಹು ವಿಧವಾಗಿಯೂ ಇರುತ್ತದೆ. ಅದು ಒಂದು ಕಡೆಯಲ್ಲಿ ದಿವ್ಯಸ್ವಭಾವದ ಅನಂತ ಪೂರ್ಣತೆಯಲ್ಲಿ ಆಧಾರಗೊಂಡದೆ. ಆತನ ಮಹಿಮೆಯನ್ನೂ ಸ್ವಾಮಿತ್ವವನ್ನೂ ನೋಡುವದಕ್ಕೂ ತಿಳಕೊಳ್ಳುವದಕ್ಕೂ ಕೊಂಡಾಡುವದಕ್ಕೂ ನಿತ್ಯತ್ವವೆಲ್ಲಾ ಬೇಕು, (ಪ್ರಕಟ. ೫, ೧೧—೧೪. ೭, ೯—೧೨.) ಮತ್ತೊಂದು ಕಡೆಯಲ್ಲಿ ಮಾರ್ಪಟ್ಟ ಸಂಪೂರ್ಣವಾದ ಪ್ರಕೃತಿಯಲ್ಲಿ ಆಧಾರಗೊಂಡದೆ. ಮತ್ತು ಇದಕ್ಕೆ ಮನುಷ್ಯನು ಆಗ್ಯೆ ಮಾತ್ರವೆ ಸಂಪೂರ್ಣರೀತಿಯಾಗಿ ಅರಸನೂ ಮಧ್ಯಸ್ಥನೂ ಆಗಿದ್ದಾನೆ. (ಸಮ ನೋಡು **೧೮೦.**)

೧) "ದೇವರು ತನ್ನನ್ನು ಪ್ರೀತಿ ಮಾಡುವವರಿಗೆ ಸಿದ್ಧಮಾಡಿದವುಗಳನ್ನು ಕಣ್ಣು ನೋಡಲಿಲ್ಲ, ಕಿವಿ ಕೇಳಲಿಲ್ಲ, ಅವು ಮನುಷ್ಯನ ಹೃದಯದಲ್ಲಿ ಏರಲಿಲ್ಲ." (೧ ಕೊರಿ. ೨,೯.)

೨) "ಮತ್ತು ಹೊಸ ಆಕಾಶವನ್ನೂ ಹೊಸ ಭೂಮಿಯನ್ನೂ ಕಂಡೆನು; ಯಾಕಂದರೆ ಮೊದಲನೇ ಆಕಾಶವೂ ಮೊದಲನೇ ಭೂಮಿಯೂ ಇಲ್ಲದೆ ಹೋದವು. ಸಮುದ್ರವು ಇನ್ನು ಮೇಲೆ ಇಲ್ಲ. ಮತ್ತು ಯೋಹಾನನೆಂಬ ನಾನು ಪರಿಶುದ್ಧ ಪಟ್ಣವಾದ ಹೊಸ ಯೆರೂಸಲೇಮು, ತನ್ನ ಗಂಡನಿಗೋಸ್ಕರ ಅಲಂಕರಿಸಲ್ಪಟ್ಟ ಮದಲಗಿತ್ತಿಯಂತೆ ಸಿದ್ಧವಾಗಿ, ದೇವರ ಕಡೆಯಿಂದ, ಪರಲೋಕದೊಳಗಿಂದ, ಇಳಿದು ಬರುವದನ್ನು ಕಂಡೆನು. ಮತ್ತು ಪರಲೋಕದಿಂದಾದ ಮಹಾ ಶಬ್ದವನ್ನು ಕೇಳಿದೆನು; ಏನಂದರೆ—ಇಗೋ, ದೇವರ ಗುಡಾರವು ಮನುಷ್ಯರ ಸಂಗಡ ಅದೆ. ಅವನು ಅವರ ಸಂಗಡ ವಾಸ ಮಾಡುವನು. ಅವರು ಅವನ ಪ್ರಜೆಯಾಗಿರುವರು. ದೇವರು ತಾನೇ ಅವರ ದೇವರಾಗಿ, ಅವರ ಸಂಗಡ ಇರುವನು. ಮತ್ತು ದೇವರು ಕಣ್ಣೀರೆಲ್ಲಾ ಅವರ ಕಣ್ಣುಗಳಿಂದ ಒರಸುವನು. ಮತ್ತು ಮರಣವು ಇನ್ನೂ ಇರುವದಿಲ್ಲ. ಗೋಳಾಟವೂ ಅಳುವಿಕೆಯೂ ಕಷ್ಟವೂ ಇನ್ನೂ ಇರುವದಿಲ್ಲ." (ಪ್ರಕಟ. ೨೧, ೧—೪.) "ಅದರಲ್ಲಿ ಮಂದಿರವನ್ನು ಕಾಣಲಿಲ್ಲ. ಯಾಕಂದರೆ ಸರ್ವಶಕ್ತನಾದ ದೇವರಾಗಿರುವ ಕರ್ತನೂ ಕುರಿಮರಿಯೂ ಅದರ ಮಂದಿರವಾಗಿದ್ದಾರೆ. ಮತ್ತು ಪಟ್ಣಕ್ಕೆ, ಅದರಲ್ಲಿ ಪ್ರಕಾಶಿಸುವದಕ್ಕೋಸ್ಕರ, ಸೂರ್ಯನಾದರೂ ಚಂದ್ರನಾದರೂ ಅಗತ್ಯವಿಲ್ಲ. ಯಾಕಂದರೆ ದೇವರ ಮಹಿಮೆಯು ಅದಕ್ಕೆ ಬೆಳಕು ಮಾಡಿತು; ಕುರಿಮರಿಯೇ ಅದರ ದೀಪವು." (ಪ್ರಕಟ. ೨೧, ೨೨. ೨೩.)

೩) ಯೋಹಾ. ೧೭, ೨೧—೨೪. (**೨೫೮**, ೩.) "ಮಹಿಮೆ ಸದ್ಗುಣಗಳಿಂದ ನಮ್ಮನ್ನು

ಕರೆದವನ ತಿಳುವಿಕೆಯ ಮೂಲಕವಾಗಿ ಜೀವಕ್ಕೂ ಭಕ್ತಿಗೂ ಸಮ್ಮಂಧವಾದವುಗಳನ್ನೆಲ್ಲಾ ಅವನ ದಿವ್ಯ ಬಲವೂ, ನಮಗೆ ಕೊಟ್ಟ ಪ್ರಕಾರ ಆ ಮಹಿಮೆ ಸದ್ಗುಣಗಳಿಂದ ಬಹು ದೊಡ್ಡವುಗಳಾದ ಅಮೂಲ್ಯವಾದ ವಾಗ್ದತ್ತಗಳೂ, ಇವುಗಳ ಮುಖಾಂತರ, ನೀವು ಆಶೆಯಿಂದ ಲೋಕದಲ್ಲಿರುವ ನಷ್ಟವನ್ನು ತಪ್ಪಿಸಿ ಕೊಂಡವರಾಗಿ, ದಿವ್ಯ ಸ್ವಭಾವದಲ್ಲಿ ಪಾಲುಗಾರರಾಗುವ ಹಾಗೆ, ನಮಗೆ ಕೊಡಲ್ಪಟ್ಟವೆ." (೨ ಪೇತ್ರ. ೧, ೩. ೪.) "ಮತ್ತು ಮಣ್ಣಿನವನ ಹೋಲಿಕೆಯನ್ನೂ ವಹಿಸಿದ ಹಾಗೆ, ಪರಲೋಕದವನ ಹೋಲಿಕೆಯನ್ನು ಸಹಾ ವಹಿಸುವೆವು." (೧ ಕೊರಿ. ೧೫, ೪೯.) "ಪ್ರಿಯರೇ, ಈಗ ದೇವರ ಮಕ್ಕಳಾಗಿದ್ದೇವೆ; ಮತ್ತು ಏನಾಗಿರುವೆವೋ, ಇನ್ನೂ ಕಾಣಲಿಲ್ಲ; ಆದರೆ ಅವನು ಪ್ರತ್ಯಕ್ಷವಾಗುವಾಗ, ಅವನ ಹಾಗೆ ಇರುವೆವೆಂದು ಬಲ್ಲೆವು. ಯಾಕಂದರೆ ಅವನನ್ನು, ಇರುವ ಪ್ರಕಾರವೇ, ನೋಡುವೆವು." (೧ ಯೋಹಾ. ೩, ೨.)

೪) "ಮತ್ತು ಮಕ್ಕಳಾದರೆ, ಬಾಧ್ಯರೂ; ದೇವರಿಗೆ ಬಾಧ್ಯರೂ; ಕೂಡ ಮಹಿಮೆಯನ್ನು ಹೊಂದುವ ಹಾಗೆ, ಕೂಡ ಶ್ರಮೆ ಪಟ್ಟರೆ, ಕ್ರಿಸ್ತನ ಕೂಡ ಬಾಧ್ಯರೂ ಆಗಿದ್ದೇವೆ." (ರೋಮಾ. ೮, ೧೭.)

೫) "ನಿಮ್ಮ ವಿಶ್ವಾಸದ ಪರೀಕ್ಷೆಯು ಸ್ತೋತ್ರ, ಘನ, ಮಹಿಮೆಗಳುಳ್ಳದ್ದಾಗಿ ಯೇಸು ಕ್ರಿಸ್ತನ ಪ್ರತ್ಯಕ್ಷತೆಯಲ್ಲಿ ಕಾಣಲ್ಪಡುವದು. ಅವನನ್ನು ನೋಡದೆ ಪ್ರೀತಿ ಮಾಡುತ್ತೀರಿ; ಅವನನ್ನು ಈಗ ಕಾಣದೆ, ವಿಶ್ವಾಸಿಸಿ, ಹೇಳಲಾರದಂಥ, ಮಹಿಮೆಯುಳ್ಳಂಥ, ಸಂತೋಷದಿಂದ ಉಲ್ಲಾಸ ಪಟ್ಟು, ನಿಮ್ಮ ವಿಶ್ವಾಸಕ್ಕೆ ಅಂತ್ಯವಾದ ಪ್ರಾಣಗಳ ರಕ್ಷಣೆಯನ್ನು ಸಂಪಾದಿಸಿ ಕೊಳ್ಳುತ್ತೀರಿ." (೧ ಪೇತ್ರ. ೧, ೭—೯.)

**೩೦೬.** ನಿತ್ಯಮರಣವು ಅಂದರೆ, ದೇವರ ಸಮಸ್ತ ಅನ್ಯೋನ್ಯದಿಂದಲೂ ಆನಂದದಿಂದಲೂ ನಿತ್ಯವಾಗಿ ಹೊರಗೆ ಹಾಕಲ್ಪಡುವದು. ಈ ನಕಾರತ್ವದ ಶಿಕ್ಷೆನಿರ್ಣಯದ ಸಂಗಡ ಸ್ಥಾಪಕಾರ್ಥಕ ಶಿಕ್ಷೆನಿರ್ಣಯ ಸಹಾ ಉಂಟು. ಯಾವದಂದರೆ, ಯಾವದರಿಂದಲೂ ಕಿವುಡ ಮಾಡ ಕೂಡದಂಥಾ, ಯಾವದರಿಂದಲೂ ಶಾಂತಿ ಪಡಿಸಲಿಕ್ಕೂ ಕಡಿಮೆ ಮಾಡಲಿಕ್ಕೂ ಕೂಡದಂಥಾ, ಅಂತಪಾರವಿಲ್ಲದ ಮನಸ್ಸಾಕ್ಷಿವೇದನೆ. — ಹಾಗೆಯೆ ಹೇಳ ಕೂಡದ ದುಃಖಕರವಾದ ಅನ್ಯೋನ್ಯದಲ್ಲಿಯೂ ಸಾಮೀಪ್ಯದಲ್ಲಿಯೂ ಸಹವಾಸದಲ್ಲಿಯೂ, ಹೊರಗೆ ಹಾಕಲ್ಪಟ್ಟ ಎಲ್ಲಾ ದೂತ ಮನುಷ್ಯರ ಸಂಗಡ ಇರುವದು. — ಮತ್ತು ಇದರ ಸ್ಥಳವು ಎಲ್ಲಾ ಬೆಳಕೂ ಜೀವವೂ, ಎಲ್ಲಾ ಸಂತೋಷವೂ ಎಲ್ಲಾ ಭೋಗವೂ ವಿನೂ ಇಲ್ಲದಂಥಾದ್ದು ಆಗಿರುತ್ತದೆ. — ಪ್ರವಾದನೆಯು ಶಿಕ್ಷೆನಿರ್ಣಯ ಪಡುವವರ ಸ್ಥಿತಿ ಸ್ಥಳಗಳ ಮೇಲೆ ವೊಬ್ಬಾದ ಮುಸುಕಿನಿಂದ ಮಾತ್ರವೆ ನೋಡ ಬಿಡುತ್ತದೆ. ಕ್ರಿಸ್ತನು (ಮಾರ್ಕ. ೯, ೪೪. ೪೫.) "ಅವರ ಹುಳವು ಸಾಯದೆ ಬೆಂಕಿಯು ಆರಿ ಹೋಗದೆ ಇರುವ ನಿತ್ಯ ಬೆಂಕಿಯ" ವಿಷಯದಲ್ಲಿಯೂ, ಆರಿ ಹೋಗದ ಬೆಂಕಿಯೊಳಗೂ ಎಂದೂ, (ಮ

ತ್ತಾ. ೮, ೧೨.) "ಅಳುವಿಕೆಯೂ ಹಲ್ಲು ಕಡಿಯುವಿಕೆಯೂ ಇರುವ ಹೊರಗಿನ ಕತ್ತಲೆಯ" ವಿಷಯದಲ್ಲಿಯೂ ಮಾತಾಡುತ್ತಾನೆ. ಪೇತ್ರನು (೨ ಪೇತ್ರ. ೨, ೧೭.) ಪೌಲನು, "ನಿತ್ಯವಾದ ಕಾರ್ಗತ್ತಲು" ಎಂದೂ, (೨ ಥೆಸ್ಸ. ೧, ೯.) "ಅವರು ಕರ್ತನ ಮುಖದಿಂದಲೂ ಅವನ ತ್ರಾಣದ ಮಹಿಮೆಯಿಂದಲೂ ನಿತ್ಯ ನಾಶವಾದ ದಂಡನೆಯನ್ನು ಅನುಭವಿಸುವರು" ಎಂದೂ ಹೇಳುತ್ತಾನೆ. ಯೋಹಾನನು, (ಪ್ರಕಟ. ೨೦, ೧೦. ೧೪.) ದರ್ಶನದಲ್ಲಿ "ಯುಗಯುಗಾಂತರಗಳ ವರೆಗೂ ರಾತ್ರಿ ಹಗಲು ಪೀಡಿಸಲ್ಪಡುವ ಬೆಂಕಿ ಗಂಧಕಗಳ ಕೆರೆಯನ್ನು," (ಪ್ರಕಟ. ೧೪, ೧೧.) ಯುಗಯುಗಾಂತರಗಳ ವರೆಗೂ ಏರುವ ಅವರ ಪೀಡೆಯ ಹೊಗೆಯನ್ನು" ಕಂಡನು.

**೨೦೭.** ಈ ಪ್ರಕಾರ ಒಂದು ಕಡೆಯಲ್ಲಿ ಅತಿ ಶ್ರೇಷ್ಠವಾದ ಆನಂದವೂ ಮತ್ತೊಂದು ಕಡೆಯಲ್ಲಿ ಆಲೋಚಿಸ ಕೂಡದ ಶಿಕ್ಷೆನಿರ್ಣಯವೂ ನಮಗೆ ಮುಂದಿಟ್ಟಿರುವ ಕಾರಣ, ಪೂರ್ಣ ಖಂಡಿತ ಮನಸ್ಸಿನಿಂದ ನಮಗೆ ಮುಂದಿಟ್ಟ ರಕ್ಷಣೆಯನ್ನು ಹಿಡ ಕೊಂಡು, ಭಯದಿಂದಲೂ ನಡುಗಿನಿಂದಲೂ ನಾವು ನಮ್ಮ ರಕ್ಷಣೆಯನ್ನು ಉಂಟು ಮಾಡಿ ಕೊಳ್ಳ ಬೇಕು೧). ದೇವರ ಕೃಪೆಯು ನಮಗೆ ಅದಕ್ಕೋಸ್ಕರ ಕೊಟ್ಟ ಕರಣಗಳನ್ನು ಕೆಳಗೆ ಬರುವ ಮುಖ್ಯ ಸಂಗತಿಗಳು ಕಲಿಸುತ್ತವೆ. (ಕೃಪಾಕರಣಗಳ ವಿಷಯ.)

೧) "ಭಯದಿಂದಲೂ ನಡುಗಿನಿಂದಲೂ ನಿಮ್ಮ ರಕ್ಷಣೆಯನ್ನು ಉಂಟು ಮಾಡಿ ಕೊಳ್ಳಿರಿ." (ಫಿಲಿ. ೨, ೧೨.) "ಆದದರಿಂದ ಅವನ ವಿಶ್ರಾಂತಿಯಲ್ಲಿ ಪ್ರವೇಶಿಸುವ ವಾಗ್ದತ್ತವು ಇನ್ನು ಇರಲು, ನಿಮ್ಮಲ್ಲಿ ಯಾವನಾದರೂ ಹಿಂದಾದವನಾಗಿ ತೋರದ ಹಾಗೆ, ಭಯ ಪಡೋಣ." (ಇಬ್ರಿ. ೪, ೧.)

---

# ಮೂರನೆ ಭಾಗ.

## ಕ್ರೈಸ್ತ ಕೃಪಾಕರಣಗಳ ವಿಷಯ.

**೨೦೮.** ಕೃಪಾಕರಣಗಳು ವಾಕ್ಯವೂ ಪ್ರಸಾದವೂ ಆಗಿರುತ್ತವೆ. ವಾಕ್ಯದಲ್ಲಿ ಕೃಪೆಯು ಸಾರಲ್ಪಡುತ್ತದೆ, ಮತ್ತು ಮುಂದಿಡಲ್ಪಡುತ್ತದೆ; ಆದರೆ ಪ್ರಸಾದದಲ್ಲಿ ತಾನೆ ಕೊಡಲ್ಪಡುತ್ತದೆ, ಮತ್ತು ಸ್ವೀಕಾರವಾಗುತ್ತದೆ. ಕೃಪೆಯನ್ನು ಕೊಡುವದಕ್ಕೆ ದೇವರು ಸಿದ್ಧವಾಗಿರುತ್ತಾನೆಂಬದನ್ನು ಉಚ್ಚರಿಸುವಂಥಾ, ಮನುಷ್ಯನಿಗೆ ಬಂದಂಥಾ, ಪರಿಶುದ್ಧ ಬರಹದಲ್ಲಿರುವ ದೇವರ ವಾಕ್ಯಕ್ಕೆ, ಕೃಪೆಯನ್ನು ಅಂಗೀಕರಿಸುವದಕ್ಕೂ, ಅದನ್ನು ದೇವರ

ಚಿತ್ತದ ಪ್ರಕಾರ ಪ್ರಯೋಗಿಸುವದಕ್ಕೂ ಒಪ್ಪಿಕೊಳ್ಳುವ ಮನುಷ್ಯನ ಸಿದ್ಧತ್ವವನ್ನೂ ಅಭಿಲಾಷೆಯನ್ನೂ ಉಚ್ಚರಿಸುವಂಥಾ, ದೇವರಿಗೆ ಪ್ರಾರ್ಥನೆಯಲ್ಲಿ ಹೇಳುವಂಥಾ, ಮನುಷ್ಯನ ವಾಕ್ಯವು ಅನುಸಾರವಾಗುತ್ತದೆ.

## ದೇವರ ವಾಕ್ಯದ ವಿಷಯ.

**೩೦೯.** ಪರಿಶುದ್ಧ ಬರಹವೆಂಬ ದೇವರ ವಾಕ್ಯವು (**೨೬೪.**) ಎಲ್ಲಾ ಮನುಷ್ಯರಿಗೂ ಜನಾಂಗಗಳಿಗೂ ಕಾಲಗಳಿಗೂ, ಎಲ್ಲಾ ಕ್ರೈಸ್ತ ತಿಳುವಿಕೆಯ ಜೀವವುಳ್ಳ ಬುಗ್ಗೆಯೂ ಬೇರೂ ಆಗಿರುತ್ತದೆ. ಅದರಲ್ಲಿರುವ ದೇವರ ಜ್ಞಾನ ತಿಳುವಿಕೆಗಳ ಅಗಾಧಗಳನ್ನೂ ಪರಮಬುದ್ಧಿವಂತನೂ ವಿದ್ವಾಂಸನೂ ಸಹಾ ನಿಶ್ಚೈಸಲಿಕ್ಕೂ ಮೊಗದು ತೀರಿಸಲಿಕ್ಕೂ ಶಕ್ತನಾಗಿರುವದಿಲ್ಲಾ. ಮತ್ತು ಆತ್ಮ ಸುಶಿಕ್ಷೆ ತಿಳುವಿಕೆಗಳಲ್ಲಿ ಪರಮ ಬಡವನು ಸಹಾ, ದೇವರ ರಾಜ್ಯಕ್ಕೆ ಬುದ್ಧಿವಂತನಾಗ ಮಾಡ ತಕ್ಕದ್ದನ್ನು ಅದರಲ್ಲಿ ಪಡ ಕೊಳ್ಳುತ್ತಾನೆ. ಮತ್ತು ಅದನ್ನು ಓದಿದಷ್ಟೂ ತೂಗಿದಷ್ಟೂ ಅದರಲ್ಲಿ ಬೋಧನೆಗೂ ಕಟ್ಟುವಿಕೆಗೂ ಬೇಕಾದ ಹೊಸ ಬಲಗಳು ತಿರಿಗಿ ತಿರಿಗಿ ಕಾಣ ಬರುತ್ತವೆ. ಯಾಕಂದರೆ ಅಪೊಸ್ತಲರ ಆತ್ಮದಲ್ಲಿಯೂ ಪ್ರವಾದಿಗಳ ಆತ್ಮದಲ್ಲಿಯೂ ಅದನ್ನು ಉಂಟು ಮಾಡಿದ ದೇವರ ಆತ್ಮವು, (**೬.**) ಯಾವದಕ್ಕೋಸ್ಕರ ಕೊಡಲ್ಪಟ್ಟದೆಯೋ[೧] ಅದನ್ನು ತೀರಿಸುವ ಹಾಗೆ[೨], ಯಥಾರ್ಥ ಮನಸ್ಸಿನಿಂದ ಓದುವವನ ಮತ್ತು ಕೇಳುವವನ ಆತ್ಮದಲ್ಲಿ ಅದಕ್ಕೆ ಸಾಕ್ಷಿ ಕೊಡುತ್ತದೆ. ಅದರಿಂದಲೆ ಪಾಪಿಯು ಮಾನಸಾಂತರಕ್ಕೆ ಕರಿಯಲ್ಪಡುತ್ತಾನೆ. ಮಾನಸಾಂತರ ಪಡುವವನು ವಿಶ್ವಾಸಕ್ಕೆ ಬೆಳಗಿಸಲ್ಪಡುತ್ತಾನೆ. ವಿಶ್ವಾಸಿಗೆ ನೀತಿನಿರ್ಣಯವು ಸಾರಲ್ಪಡುತ್ತದೆ. ನೀತಿನಿರ್ಣಯ ಹೊಂದಿದವನು ಶುದ್ಧೀಕರಣದ ಮಾರ್ಗದಲ್ಲಿ ನಡಿಸಲ್ಪಡುತ್ತಾನೆ. (**೨೬೭. ೨೭೦. ೨೭೨. ೨೭೩. ೨೭೮.**) ಆದಕಾರಣ ದೇವರ ವಾಕ್ಯದಲ್ಲಿ ಆಸಕ್ತಿಯಾಗಿಯೂ ಜಾಗ್ರತೆಯಾಗಿಯೂ ಶೋಧಿಸಿ, ಪ್ರಾಣದ ಅನುದಿನದ ಆಹಾರವೆಂದು ಅದನ್ನು ಪ್ರೀತಿ ಮಾಡಿ ಪ್ರಯೋಗಿಸುವದು ಒಬ್ಬೊಬ್ಬ ಕ್ರೈಸ್ತನ ಧರ್ಮವಾಗಿರುತ್ತದೆ[೩]. ಮತ್ತು ಇದನ್ನು ಪ್ರಕಾಶೀಕರಣಕ್ಕೋಸ್ಕರ ಹೃದಯಪೂರ್ವಕವಾದ ಪ್ರಾರ್ಥನೆಯಲ್ಲಿಯೂ ದೈನ್ಯವಿಶ್ವಾಸದಲ್ಲಿಯೂ ಸ್ವಂತ ಹೃದಯ ಜೀವಗಳ ವಿಷಯದಲ್ಲಿಯೂ ಪ್ರಯೋಗಿಸುತ್ತಾ ಇರುವದು ಸಹಾ ಅವಶ್ಯ[೪].

೧) "ಕ್ರಿಸ್ತ ಯೇಸುವಿನಲ್ಲಿರುವ ವಿಶ್ವಾಸದಿಂದ ರಕ್ಷಣೆಗಾಗಿ ನಿನಗೆ ಜ್ಞಾನವನ್ನು ಕೊಡ ಶಕ್ತವಾದ ಪರಿಶುದ್ಧ ಬರಹಗಳನ್ನು ಚಿಕ್ಕಂದಿನಿಂದ ಅರಿತಿದ್ದೀ ಎಂದು, ನಿನಗೆ ತಿಳಿಯುತ್ತದಲ್ಲ? ಬರಹವೆಲ್ಲಾ ದೈವಪ್ರೇರಿತವಾದದ್ದು, ಬೋಧನೆಗೂ, ಖಂಡನೆಗೂ,

ತಿದ್ದುಪಾಟಿಗೂ, ನೀತಿಯ ಉಪದೇಶಕ್ಕೂ, ದೇವರ ಮನುಷ್ಯನು ಎಲ್ಲಾ ಸತ್ಕ್ರಿಯೆಗಳಿಗೆ ಸಿದ್ಧನಾಗಿ, ಆಯತ್ತನಾಗುವದಕ್ಕೂ ಪ್ರಯೋಜನವಾಗಿದೆ." (೨ ತಿಮೊ. ೩, ೧೫ — ೧೭.)

೨) "ಯಾಕಂದರೆ, ಮಳೆಯೂ ಹಿಮವೂ ಆಕಾಶದಿಂದ ಇಳಿದು ಬಂದು, ಅಲ್ಲಿ ತಿರಿಗಿ ಹೋಗದೆ, ಭೂಮಿಯನ್ನು ತೋಯಿಸಿ ಬಿತ್ತುವವನಿಗೆ ಬೀಜವನ್ನೂ, ಉಣ್ಣುವವನಿಗೆ ರೊಟ್ಟಿಯನ್ನೂ ಕೊಡುವ ಹಾಗೆ, ಫಲವನ್ನು ಹುಟ್ಟಿಸಿ, ಚಿಗುರ ಮಾಡುವದು ಹ್ಯಾಗೋ, ಹಾಗೆಯೇ ನನ್ನ ಬಾಯಿಯಿಂದ ಹೊರಡುವ ನನ್ನ ವಾಕ್ಯವಿರುವದು; ಅದು ಸುಮ್ಮನೆ ನನ್ನ ಬಳಿಗೆ ತಿರುಗಿಕೊಳ್ಳದೆ, ನಾನು ಯಾವದರಲ್ಲಿ ಮೆಚ್ಚುತ್ತೇನೋ, ಅದನ್ನು ಮಾಡುವದು; ನಾನು ಯಾವದರ ನಿಮಿತ್ತ ಅದನ್ನು ಕಳುಹಿಸಿದೆನೋ, ಅದರಲ್ಲಿ ಸಫಲವಾಗುವದು." (ಯೆಶಾ. ೫೫, ೧೦. ೧೧.) "ನಾನು ನಿಮಗೆ ಹೇಳುವ ಮಾತುಗಳು ಆತ್ಮವೂ ಜೀವವೂ ಆಗಿವೆ." (ಯೋಹಾ. ೬, ೬೩.) "ದೇವರ ವಾಕ್ಯವು ಜೀವವುಳ್ಳದ್ದು, ಚುರುಕಾದದ್ದು, ಯಾವ ಇಬ್ಬಾಯಿ ಕತ್ತಿಗಿಂತಲಾದರೂ ಹದವಾದದ್ದು, ಪ್ರಾಣ, ಆತ್ಮ, ಕೀಲು, ಮಿದಳುಗಳ ಭೇದದವರಿಗೂ ಸೇರುವಂಥಾದ್ದು, ಹೃದಯದ ಇಚ್ಛೆಗಳನ್ನೂ ಆಲೋಚನೆಗಳನ್ನೂ ಶೋಧಿಸುವಂಥಾದ್ದು." (ಇಬ್ರಿ. ೪, ೧೨.) "ನನ್ನ ವಾಕ್ಯವು ಬೆಂಕಿಯ ಹಾಗಲ್ಲವೋ? ಎಂದು, ಯೆಹೋವನು ಅನ್ನುತ್ತಾನೆ. ಅದು ಬಂಡೆಯನ್ನು ಒಡೆಯುವ ಸುತ್ತಿಗೆಯ ಹಾಗಲ್ಲವೋ?" (ಯೆರೆ. ೨೩, ೨೯.)

೩) "ಬರಹಗಳನ್ನು ಶೋಧಿಸಿರಿ." (ಯೋಹಾ. ೫, ೩೯.) (**೨೬೭**, ೨.) "ಈ ಪುಸ್ತಕದಲ್ಲಿ ಬರೆದಿರುವ ನ್ಯಾಯಪ್ರಮಾಣವು ನಿನ್ನ ಬಾಯಿ ಬಿಟ್ಟು ಹೋಗ ಬಾರದು; ಅದರಲ್ಲಿ ಬರೆದಿರುವ ಪ್ರಕಾರವೇ ಮಾಡಿ ಕೈಕೊಳ್ಳುವ ಹಾಗೆ, ರಾತ್ರಿ ಹಗಲು ಅದನ್ನು ಧ್ಯಾನಿಸ ಬೇಕು." (ಯೆಹೋಶು. ೧, ೮.)

೪) "ನನ್ನ ಕಣ್ಣುಗಳನ್ನು ತೆರೆ; ಆಗ ನಿನ್ನ ನ್ಯಾಯಪ್ರಮಾಣದೊಳಗಿಂದ ಅದ್ಭುತಗಳನ್ನು ನೋಡುವೆನು." (ಕೀರ್ತ. ೧೧೯, ೧೮.) "ನಿನ್ನ ಸಾಕ್ಷಿಗಳ ಕಡೆಗೆ ನನ್ನ ಹೃದಯವನ್ನು ಬೊಗ್ಗಿಸು." (ಕೀರ್ತ. ೧೧೯, ೩೬.) "ಮಾತಾಡು, ನಿನ್ನ ದಾಸನು ಕೇಳುತ್ತಾನೆ." (೧ ಸಮು. ೩, ೧೦.) "ನಿನ್ನ ಪಾದಗಳಿಂದ ಕೆರಗಳನ್ನು ತೆಗೆದು ಹಾಕು; ಯಾಕಂದರೆ, ನೀನು ನಿಂತಿರುವ ಸ್ಥಳವು ಪರಿಶುದ್ಧ ಭೂಮಿಯೇ." (ಹೊರ. ೩, ೫.) (ಯೆಹೋಶು. ೫, ೬.) "ನೀನೇ ಆ ಮನುಷ್ಯನು." ಇತ್ಯಾದಿ. (೨ ಸಮು. ೧೨, ೭.)

ಪರಿಶಿ. ಪರಿಶುದ್ಧ ಬರಹವು ಎಲ್ಲಾ ಕ್ರೈಸ್ತ ತಿಳುವಿಕೆಗೆ ಒಂದೇ ಬುಗ್ಗೆಯೂ ಸೂತ್ರವೂ ಆಗಿರುತ್ತದೆ, ಮುಂದೆಯೂ ಆಗಿರ ಬೇಕೆಂಬದು ನಿಶ್ಚಯ. ಆದರೆ ಪರಿಶುದ್ಧ ಬರಹದ ಬೋಧನೆಯನ್ನು ವಿಕಸಿಸಿ ಕಟ್ಟುವದು ಸಮವಲ್ಲವೆಂದೂ, ಬರಹದಲ್ಲಿ ಸ್ಪಷ್ಟವಾಗಿ ಬೋಧಿಸಲ್ಪಡದೆ ಇರುವಂಥಾದ್ದೆಲ್ಲಾ ಅಕ್ರೈಸ್ತವಾದದ್ದೂ ಬರಹಕ್ಕೆ ವಿರೋಧವಾದದ್ದೂ ಎಂದು ನೆನಸುವದು ಸಮವಲ್ಲಾ. ಪರಿಶುದ್ಧ ಬರಹದ ವಾಕ್ಯವು ಆತ್ಮವೂ ಜೀವವೂ ತಿಳು

ವಿಕೆಯು ಜೀವವುಳ್ಳ ಬೀಜಗಳೂ ಆಗಿರುತ್ತವೆ. ಇವುಗಳನ್ನು ಬಿತ್ತಿದ ಅದೇ ಆತ್ಮದ ಅಧ್ಯಕ್ಷತನದ ಕೆಳಗೆ ಅವು ಹೆಚ್ಚೆಚ್ಚು ಮಹಿಮೆಯಾಗಿ ಬೆಳಿಯುವ ಸಸಿಗಳಾಗಿ ವಿಕಸಿಸಬಹುದು, ವಿಕಸಿಸ ಬೇಕು. ಪಾಲನೆಗೆ ಈ ಬೀಜವನ್ನು ಹೊಂದಿದ ಸಭೆಯು ಸಹಾ ಪರಿಶುದ್ಧಾತ್ಮದಿಂದ ಸಜೀವವಾಗಿ ನಡಿಸಲ್ಪಡುತ್ತದೆ. ಆದಕಾರಣ ಸಭೆಯ ವಿಕಾಸಗತಿಯಲ್ಲಿ ಏನೇನು ಬರಹಕ್ಕೆ ವಿರೋಧವಾಗಿರದೆ, ಬರಹದ ಬೋಧನೆಯ ಸ್ವಾಭಾವಿಕವಾದ ವಿಕಾಸವಾಗಿ ಕಾಣ ಬರುತ್ತದೊ, ಅದರ ಪ್ರಕಾರವೆ ಅದನ್ನು ಆತ್ಮದ ಬೋಧನೆಯಾಗಿ ಎಣಿಸ ತಕ್ಕದ್ದು. ಆದರೆ ಏನೇನು ಸಭೆ ಜೀವದ ಸಭೆಯ ಬೋಧನೆಯ ವಿಕಾಸಗತಿಯಲ್ಲಿ ಬರಹಕ್ಕೆ ವಿರೋಧವಾಗಿರುತ್ತದೊ, ಅದು ಆತ್ಮಕೃತ್ಯವಲ್ಲ; ಅದು ಅದೈವಿಕ ಮನುಷ್ಯಕೃತ್ಯವೂ ತಪ್ಪಾಗಿರುವ ಮನುಷ್ಯ ಕಟ್ಟಳೆಯೂ ಆಗಿರುತ್ತದೆ. ಆದಕಾರಣ ನಿಸ್ಸಂದೇಹವಾಗಿ ಅದನ್ನು ಬಿಸಾಡ ತಕ್ಕದ್ದು. (ಸಮ ನೋಡು ಮತ್ತಾ. ೧೫, ೯.) ಎಲ್ಲವನ್ನು ಪರೀಕ್ಷಿಸಿ ಒಳ್ಳೇದನ್ನೇ ಹಿಡಿದು ಕೊಳ್ಳಿರಿ. (೧ ಥೆಸ್ಸ. ೫, ೨೧.)

## ಪ್ರಾರ್ಥನೆಯ ವಿಷಯ.

**೩೧೦.** ಪ್ರಾರ್ಥನೆ ಅಂದರೆ, ದೇವರ ಸಂಗಡ ಹೃದಯದ ವಿಶ್ವಾಸವುಳ್ಳ ಸಂಭಾಷಣೆ. ತನ್ನ ವಾಕ್ಯದಲ್ಲಿ ದೇವರು ನಮ್ಮ ಸಂಗಡ ಮಾತಾಡಿ, ನಮ್ಮ ರಕ್ಷಣೆಗಾಗಿರುವ ತನ್ನ ಚಿತ್ತವನ್ನೂ ಸಂಕಲ್ಪವನ್ನೂ ಸಾರಿ, ಅದರಲ್ಲಿ ಶೇರ ಬೇಕೆಂದು ನಮ್ಮನ್ನು ಕರಿಯುತ್ತಾನೆ. (**೨೬೭.**) ಮನುಷ್ಯನು ಮೂರ್ತಿಯಾಗಿಯೂ ಸ್ವತಂತ್ರಿಯಾಗಿಯೂ ಇರುವ ಕಾರಣ, ಅವನು ತನಗೆ ಮುಂದಿಟ್ಟ ರಕ್ಷಣೆಯನ್ನು ಸ್ವಚಿತ್ತದಿಂದ ಹಿಡಕೊಳ್ಳುವದೂ, ದೇವರ ಕೃಪೆಗೆ ಅಪೇಕ್ಷೆಯಿಂದಲೂ ಅಭಿಲಾಷೆಯಿಂದಲೂ ಎದುರಾಗಿ ಬರುವದೂ, ತನ್ನ ಚಿತ್ತವನ್ನು ದೇವರ ಚಿತ್ತದಲ್ಲಿ ಒಂದು ಮಾಡುವದೂ ಅವಶ್ಯ. ಈ ಪ್ರಾರ್ಥನೆಯು ದೇವರಿಗೆ ಮನುಷ್ಯನು ಎದುರ್ಗೊಂಡು ಉತ್ತರ ಕೊಡುವ ಮಾತಾಗಿರುತ್ತದೆ, ಅಂದರೆ, ದಿವ್ಯ ಚಿತ್ತದಲ್ಲಿ ಮನುಚಿತ್ತದ ಐಕ್ಯವಾಗಿರುತ್ತದೆ.

ಪರಿಶಿ. ಪ್ರಾರ್ಥನೆಗೆ ಧ್ಯಾನ ಸಹಾ ಅವಶ್ಯವಾಗಿ ಕೂಡಿಯದೆ. (ಯೆಹೋಶು. ೧, ೮. ಲೂಕ. ೨, ೧೯. ೫೧.) ಇದರಿಂದ ಮನುಷ್ಯನು ದೇವರ ವಾಕ್ಯವನ್ನು ಹೃದಯದಲ್ಲಿ ಖಚಿತ ಮಾಡಿ ಕೊಂಡು, ಅದನ್ನು ಜಾಗ್ರತೆಯಾಗಿ ತೂಗಿಸಿ, ಸ್ವಂತ ಹೃದಯವನ್ನೂ ಜೀವವನ್ನೂ ವರ ಕಲ್ಲಿಗೆ ಹಾಕುತ್ತಾನೆ.

**೩೧೧.** ಆದರೆ ಪ್ರಾರ್ಥನೆಯು ರಕ್ಷಣೆಯ ಸ್ವೀಕಾರಕ್ಕೆ ಔಪಾಧಿಕ ಮಾತ್ರವಲ್ಲ, ಕರಣ ಸಹಾ ಆಗಿರುತ್ತದೆ[೧]. ಔಪಾಧಿಕವು ಅದು ತನ್ನಿಂದ ತಾನೆ ಆಗಿರುತ್ತದೆ; ಆದರೆ ಕರ

ಣವು, ದೇವರು ವಾಗ್ದತ್ತವನ್ನೂ ಆಶೀರ್ವಾದವನ್ನೂ ಕೂಡಿಸಿ ಅದನ್ನು ಕೃಪಾಕರಣ ಮಾಡಿದ ದೇವರ ಕೃಪೆಯಿಂದ ಮಾತ್ರವೆ ಆಗಿರುತ್ತದೆ. ನಾವು ರಕ್ಷಣೆಯಲ್ಲಿ ಪಾಲುಗಾರರಾಗುವ ಹಾಗೆ ಪ್ರಾರ್ಥನೆ ಮಾಡ ಬೇಕು. ಆದರೆ ನಾವು ಪ್ರಾರ್ಥನೆ ಮಾಡುವದರಿಂದ ಅಲ್ಲಾ, ಪ್ರಾರ್ಥನೆಯನ್ನು ಕೇಳುತ್ತೇನೆಂದು ದೇವರು ವಾಗ್ದತ್ತ ಮಾಡಿದ ಕಾರಣದಿಂದ ಮಾತ್ರವೆ ಅದನ್ನು ಹೊಂದುತ್ತೇವೆ. ಹಾಗಾಗಿ ವಿಶ್ವಾಸದ ಜೀವಪ್ರಕಟಣೆಯಾಗಿರುವ ಪ್ರಾರ್ಥನೆಯು ವಿಶ್ವಾಸ ಹ್ಯಾಗೊ ಹಾಗೆಯೆ (**೨೬೫.**) ಸರ್ವಥಾ **ಪುಣ್ಯ** ಕಾರ್ಯವಲ್ಲಾ.

೧) "ಯಾಕಂದರೆ ಯಾರು ಕರ್ತನ ಹೆಸರನ್ನು ಕರೆಯುವರೋ, ಅವರೆಲ್ಲರೂ ರಕ್ಷಿಸಲ್ಪಡುವರು." (ರೋಮಾ. ೧೦, ೧೩.)

**೨೧೨.** ಆದರೂ ಕೃಪಾಕರಣದ ಹೆಸರಿಗೂ **ಪೂರ್ಣ** ಆಶೀರ್ವಾದಕ್ಕೂ ಕ್ರೈಸ್ತ ಪ್ರಾರ್ಥನೆ ಮಾತ್ರವೆ, ಅಂದರೆ ಯೇಸುವಿನ ಹೆಸರಿನಲ್ಲಿಯೂ ಪರಿಶುದ್ಧಾತ್ಮದ ಬಲದಲ್ಲಿಯೂ ಆಗುವ ಪ್ರಾರ್ಥನೆ ಮಾತ್ರವೆ ಯೋಗ್ಯವಾಗಿರುತ್ತದೆ. ಯೇಸುವಿನ ಹೆಸರಿನಲ್ಲಿ ಪ್ರಾರ್ಥಿಸುವದಂದರೆ, ನಮ್ಮ ಸ್ವಂತ ಹೆಸರಿನಲ್ಲಿ ಅಲ್ಲಾ, ಸ್ವಂತ ಬಲದಿಂದಲೂ ಸ್ವಂತ **ಪುಣ್ಯ**ದಿಂದಲೂ ಅಲ್ಲಾ[೧], ಸಾಧಿಸಲ್ಪಟ್ಟಿರುವ ವಿಮೋಚನೆಯ ಆಧಾರದಿಂದ, ಕ್ರಿಸ್ತನ ಅಪ್ಪಣೆಯಿಂದ, ಆತನ ಶರೀರದ ಅವಯವಗಳಾಗಿ ಪ್ರಾರ್ಥಿಸುವದಾಗಿರುತ್ತದೆ. ಆದಕಾರಣ ನಮ್ಮ ಪ್ರಾರ್ಥನೆಯು ಕ್ರಿಸ್ತನ ಪ್ರಾರ್ಥನೆಯಂತೆ ಕಾಣುತ್ತದೆ, ನಡಿಯುತ್ತದೆ. ಆದರೆ ಅಂಥಾ ಪ್ರಾರ್ಥನೆಯು ಆ ಪ್ರಕಾರ ಪ್ರಾರ್ಥಿಸಲಿಕ್ಕೆ ಕಲಿಸಿ, ಪ್ರಾರ್ಥಿಸಲಿಕ್ಕೆ ಸಹಾಯ ಮಾಡುವ ಪರಿಶುದ್ಧಾತ್ಮದ ಬಲದಿಂದ ಮಾತ್ರವೆ ಸಾಧ್ಯವಾಗಿರುತ್ತದೆ[೨]. ಮತ್ತು ಎಲ್ಲಿ ಪ್ರಾರ್ಥನೆಯು ದೇವರ ಮಗನ **ಪುಣ್ಯ**ದಲ್ಲಿ ಆಧಾರಗೊಂಡು, ಪರಿಶುದ್ಧಾತ್ಮದ ಬಲದಿಂದ ವಹಿಸಲ್ಪಡುತ್ತದೆಯೊ, ಅಲ್ಲಿ ತಂದೆ ಸಹಾ ಕೇಳದೆ ಇರನು[೩]. ಯಾಕಂದರೆ ಅಂಥಾ ಪ್ರಾರ್ಥನೆಯು **ಪೂರ್ಣ**ವಾಗಿ ಒಂದೊಂದು ಪ್ರಾರ್ಥನೆಗೆ ಇರತಕ್ಕ ನಿಜ ಸ್ವಭಾವದ್ದಾಗಿರುತ್ತದೆ, ಅಂದರೆ, ದಿವ್ಯ ಚಿತ್ತದಲ್ಲಿ ಮನುಷ್ಯಚಿತ್ತದ **ಪೂರ್ಣ** ಐಕ್ಯ. (**೨೧೦.**) ಆದಕಾರಣ ಕ್ರೈಸ್ತ ಪ್ರಾರ್ಥನೆಯು ನಿಸ್ಸಂದೇಹವಾಗಿ ಕೇಳಲ್ಪಡುವದೆಂದೂ, ಅದರಲ್ಲಿ ಉಚ್ಚರಿಸಲ್ಪಡುವ ವಿಶ್ವಾಸಕ್ಕೆ ದಿವ್ಯ ಸರ್ವತ್ರಾಣದ ಅದ್ಭುತ ಬಲದಲ್ಲಿ ಪಾಲು ಸಿಕ್ಕುವದೆಂದೂ ಪರಿಶುದ್ಧ ಬರಹದಲ್ಲಿ ಹೇಳಿ ಇದ್ದದ್ದಕ್ಕೆ ಆಶ್ಚರ್ಯ ಪಡ ಕಾರಣವಿಲ್ಲಾ[೪].

೧) "ನಾವು ನಮ್ಮ ನೀತಿಗಳಿಗೋಸ್ಕರವಲ್ಲ, ನಿನ್ನ ದೊಡ್ಡ ಕೃಪೆಗಳಿಗೋಸ್ಕರವೇ, ನಮ್ಮ ವಿಜ್ಞಾಪನೆಗಳನ್ನು ನಿನ್ನ ಮುಂದೆ ಅರ್ಪಿಸುತ್ತೇವೆ." (ದಾನಿ. ೯, ೧೮.)

೨) "ಯಾಕಂದರೆ ತಿರಿಗಿ ಭಯಕ್ಕಾಗಿ ದಾಸತ್ವದ ಆತ್ಮವನ್ನು ಹೊಂದದೆ, ಪುತ್ರ ಸ್ವೀಕಾರದ ಆತ್ಮವನ್ನು ಹೊಂದಿದ್ದೀರಿ." (ರೋಮಾ. ೮, ೧೫.) (**೨೨.**) "ಹಾಗೆಯೇ, ಆತ್ಮವು ಸಹಾ ನಮ್ಮ ಅಶಕ್ತಿಗಳಿಗೆ ಕೂಡ ಸಹಾಯ ಮಾಡುತ್ತದೆ. ಹ್ಯಾಗಂದರೆ, ನಾವು ಯುಕ್ತವಾಗಿ ಏನು ಬೇಡಿ ಕೊಳ್ಳ ಬೇಕೋ, ಅರಿಯೆವು. ಆದರೆ ಆತ್ಮವು ತಾನೇ ಉಚ್ಚರಿಸಲಾರದ ಮೂಲುಗುವಿಕೆಗಳಿಂದ ನಮಗೋಸ್ಕರ ವಿಜ್ಞಾಪನೆ ಮಾಡುತ್ತದೆ." (ರೋಮಾ. ೮, ೨೬.)

೩) "ನಿಶ್ಚಯವಾಗಿ ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ನೀವು ನನ್ನ ಹೆಸರಿನಲ್ಲಿ ತಂದೆಯನ್ನು ಬೇಡಿ ಕೊಳ್ಳುವದೆಲ್ಲಾ ನಿಮಗೆ ಕೊಡುವನು." (ಯೋಹಾ. ೧೬, ೨೩.) (ಸಮ ನೋಡು ಯೋಹಾ. ೧೪, ೧೩. ೧೪.)

೪) "ಯಾಕಂದರೆ ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ಯಾವನು ತನ್ನ ಹೃದಯದಲ್ಲಿ ಸಂದೇಹ ಪಡದೆ, ತಾನು ಹೇಳುವವುಗಳು ಆಗುವವೆಂದು ನಂಬಿ, ಈ ಬೆಟ್ಟಕ್ಕೆ, ಎದ್ದು, ಸಮುದ್ರದಲ್ಲಿ ಬೀಳೆಂದು ಹೇಳುವನೋ, ಅವನು ಹೇಳುವಂಥಾದ್ದು ಅವನಿಗೆ ಆಗುವದು. ಆದದರಿಂದ ನಿಮಗೆ ಹೇಳುತ್ತೇನೆ, ನೀವು ಪ್ರಾರ್ಥಿಸಿ ಬೇಡಿ ಕೊಳ್ಳುವವುಗಳನ್ನೆಲ್ಲಾ ಹೊಂದುವೆವೆಂದು ನಂಬಿದರೆ, ನಿಮಗೆ ಶಿಕ್ಕುವವು." (ಮಾರ್ಕ. ೧೧, ೨೩. ೨೪.) "ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, (ಸಮ ನೋಡು ಮತ್ತಾ. ೧೩, ೩೨.) ಸಾಸಿವೆ ಕಾಳಷ್ಟು ವಿಶ್ವಾಸವು ನಿಮ್ಮಲ್ಲಿ ಇದ್ದರೆ, ನೀವು ಈ ಬೆಟ್ಟಕ್ಕೆ, ಇಲ್ಲಿಂದ ಅಲ್ಲಿಗೆ ಹೋಗು, ಅಂದರೆ, ಹೋಗುವದು; ಮತ್ತು ನಿಮ್ಮಿಂದ ಆಗದ್ದು ಒಂದೂ ಇರದು." (ಮತ್ತಾ. ೧೭, ೨೦.) (ಮತ್ತಾ. ೧೧, ೨೨.) "ವಿಶ್ವಾಸಿಸುವವನಿಗೆ ಎಲ್ಲಾ ಆಗುವದು." (ಮಾರ್ಕ. ೯, ೨೩.)

ಪರಿಶಿ. ಮೇಲೆ ಹೇಳಿದ ಸಂಗತಿಯಿಂದ ಕ್ರಿಸ್ತನ ಪೂರ್ವದಲ್ಲಿ ಆದ ಪ್ರಾರ್ಥನೆಗಳು, ಅವುಗಳಲ್ಲಿ ರಕ್ಷಣೆಯ ಅವಶ್ಯತ್ವ ಅಭಿಲಾಷೆಗಳು ಉಚ್ಚರಿಸಲ್ಪಡುವಷ್ಟಕ್ಕೆ, ಕೇಳಲ್ಪಡುವ ಆಶೀರ್ವಾದ ಇಲ್ಲದೆ ಇದ್ದವೆಂಬರ್ಥವಲ್ಲಾ.

**೩೧೩.** ಕ್ರೈಸ್ತ ಪ್ರಾರ್ಥನೆಯು ಕೃಪಾಕರಣವಾಗಿರುವದರಿಂದ. ಅದಕ್ಕೆ ಮುಖ್ಯವಾಗಿಯೂ ಮೊದಲಾಗಿಯೂ ಆತ್ಮಿಕ ದಾನಗಳೂ ವಸ್ತುಗಳೂ ವಿಷಯಗಳಾಗಿರುತ್ತವೆಂಬದು ಸರಿ[೧]. ಆದರೆ ಅದಕ್ಕಾಗಿ ಶರೀರದ ಮತ್ತು ಭೂಸಂಬಂಧವಾದ ವಸ್ತುಗಳಿಗೋಸ್ಕರವೂ ಅಪೇಕ್ಷೆಗಳಿಗೋಸ್ಕರವೂ, ಪ್ರಾರ್ಥಿಸ ಬಾರದೆಂದು ಆಗುವದಿಲ್ಲಾ. ಶರೀರದ್ದೂ ಆತ್ಮದ್ದೂ ಭೂಸಂಬಂಧವಾದದ್ದೂ ಸ್ವರ್ಗಸಂಬಂಧವಾದದ್ದೂ ಒಂದಕ್ಕೊಂದು ಪರಮ ಸಮೀಪವಾಗಿಯೂ ನಿಜವಾಗಿಯೂ ಕೂಡಿರುವ ಕಾರಣ, ಅದು ಸಹಾ ಇದರಲ್ಲಿ ಬಂತು[೨]. ಆದ್ದರಿಂದ ನಾವು ಆತ್ಮಿಕವಾದವುಗಳನ್ನು ಹ್ಯಾಗೊ, ಹಾಗೆಯೆ ಶರೀರದ ಚಿಂತೆಗಳನ್ನು ಸಹಾ ಪ್ರಾರ್ಥನೆಯ ವಿಷಯವಾಗ ಮಾಡ ಬಹುದು. — ಒಂದು ಮಾತ್ರ ಅ

ವಶ್ಯ — ತಾತ್ಕಾಲಿಕ ದಾನವನ್ನೂ ಸಹಾಯವನ್ನೂ ಬೇಡಿ ಕೊಳ್ಳುವಾಗ್ಯೆ. ಸ್ವಂತ ಅಪೇಕ್ಷೆಯನ್ನೂ ಸ್ವಂತ ಆಲೋಚನೆಯನ್ನೂ ದಿವ್ಯ ಚಿತ್ತಕ್ಕೂ ದಿವ್ಯ ಜ್ಞಾನಕ್ಕೂ ಯಥಾರ್ಥವಾಗಿ ಒಳಬೀಳ ಮಾಡದೆ ಬೇಡಿ ಕೊಳ್ಳ ಬಾರದು[೩].

೧) "ನೀವು ಮೊದಲು ದೇವರ ರಾಜ್ಯವನ್ನೂ," ಇತ್ಯಾದಿ. (ಮತ್ತಾ. ೬, ೩೩.) (**೧೧೦.**) "ಹಾಗಾದರೆ ನೀವು ಕೆಟ್ಟವರಾಗಿದ್ದು, ನಿಮ್ಮ ಮಕ್ಕಳಿಗೆ ಒಳ್ಳೆ ದಾನಗಳನ್ನು ಕೊಡ ತಿಳಿದರೆ, ಎಷ್ಟು ಹೆಚ್ಚಾಗಿ ನಿಮ್ಮ ಪರಲೋಕದ ತಂದೆಯು ತನ್ನನ್ನು ಬೇಡಿ ಕೊಳ್ಳುವವರಿಗೆ ಪರಿಶುದ್ಧಾತ್ಮವನ್ನು ಕೊಡುವನು!" (ಲೂಕ. ೧೧, ೧೩.)

೨) "ನೀವು ಮಾತಿನಿಂದಾಗಲಿ, ಕ್ರಿಯೆಯಿಂದಾಗಲಿ, ಏನು ಮಾಡಿದರೂ, ಎಲ್ಲವನ್ನು ಕರ್ತನಾದ ಯೇಸುವಿನ ಹೆಸರಿನಲ್ಲಿ ಮಾಡಿ, ಅವನ ಮುಖಾಂತರ ತಂದೆಯಾದ ದೇವರನ್ನು ಸ್ತುತಿಸಿರಿ." (ಕೊಲೊ. ೩, ೧೭.) "ಹಾಗಾದರೆ, ಉಂಡರೂ, ಕುಡಿದರೂ, ಏನು ಮಾಡಿದರೂ, ಎಲ್ಲಾ ದೇವರ ಮಹಿಮೆಗಾಗಿ ಮಾಡಿರಿ." (೧ ಕೊರಿ. ೧೦, ೩೧.)

೩) "ತಂದೆಯೇ, ನೀನು ಈ ಪಾತ್ರೆಯನ್ನು ನನಗೆ ದೂರ ಮಾಡ ಮನಸ್ಸಾಗಿದ್ದರೆ, ಮಾಡು. ಆದಾಗ್ಯೂ ನನ್ನ ಚಿತ್ತವಲ್ಲ, ನಿನ್ನದೇ ಆಗಲಿ." (ಲೂಕ. ೨೨, ೪೨.) (೨ ಕೊರಿ. ೧೨, ೮. ೯.)

ಪರಿಶಿ. ಒಂದು ಕಡೆಯಲ್ಲಿ ಕ್ರಿಸ್ತನಲ್ಲಿರುವ ರಕ್ಷಣೆಯು ಒಳಗಿನ ಆತ್ಮಿಕ ಜೀವದ ನವೀಕರಣದಲ್ಲಿ ಮಾತ್ರವೆ ಅಡಗದೆ, ಪುನರೂಪಿಸುವಂಥಾದ್ದಾಗಿಯೂ ನವೀಕರಿಸುವಂಥಾದ್ದಾಗಿಯೂ ಹೊರಗಿನ ಸಾಧಾರಣವಾದ ಜೀವವನ್ನು ಸಹಾ ಆವರಿಸ ತಕ್ಕದ್ದು. ಇಡೀ ಮನುಷ್ಯನು ಶುದ್ಧವಾಗ ಬೇಕು. ಎಲ್ಲಾ ಜೀವದ ಕನಿಷ್ಟ ವಿಷಯಗಳು ಸಹಾ ನಿರ್ಮಲವಾಗ ಬೇಕು. ಮತ್ತು ಸ್ವಭಾವವು ಎಲ್ಲಾ ವಿಷಯದಲ್ಲಿಯೂ ಕೃಪೆಯಿಂದ ಮಾರ್ಪಡ ಬೇಕು. ಆದಕಾರಣ ನಾವು ಮಾಡುವದನ್ನೂ, ನಡಿಸುವದನ್ನೂ, ನಾವು ತಾಳುವದನ್ನೂ, ಸಂತೋಷ ಪಡುವದನ್ನೂ, ಎಲ್ಲಾ ಪ್ರಾರ್ಥನೆಯ ಆತ್ಮವು ವಹಿಸಿ ನಿರ್ಮಲ ಮಾಡ ಬೇಕು. ಪ್ರಾರ್ಥನೆಯು ಜೀವದಲ್ಲಿ ಎಲ್ಲಾ ಕ್ರೈಸ್ತ ಮತ್ತು ಅಕ್ರೈಸ್ತವಾದ್ದಕ್ಕೆ ವರಗಲ್ಲಾಗಿರ ಬೇಕು. ಎಲ್ಲಾ ಕೆಲಸಗಳೂ ಪ್ರಯತ್ನಗಳೂ ಅಪೇಕ್ಷೆಗಳೂ ಕೋರಿಕೆಗಳೂ ಭೋಗಗಳೂ ಬೇಕಾದ ವಸ್ತುಗಳೂ, ಇವುಗಳೆಲ್ಲಾ ಪ್ರಾರ್ಥನೆಯ ಪರೀಕ್ಷೆಯಲ್ಲಿ ನಿಲ್ಲದಿದ್ದರೆ, ಅವುಗಳಿಗೋಸ್ಕರ ಪೂರ್ಣ ಹೃದಯದಿಂದ ದೇವರ ಸಹಾಯವನ್ನೂ ಆಶೀರ್ವಾದವನ್ನೂ ಬೇಡಿ ಕೊಳ್ಳಲಾಗದಿದ್ದರೆ, ಕೇಡಿನದಾಗಿರುತ್ತವೆ. — ಅತ್ತ ಕಡೆಯಲ್ಲಿ ಹೊರಗಿನ ಜೀವವು ಸುಖ ದುಃಖಗಳೊಡನೆ ಆತ್ಮಿಕಜೀವದ ಮೇಲೆ ಬಲ ತೋರಿಸುವದು. ಹ್ಯಾಗೆ ದೇವರನ್ನು ಪ್ರೀತಿ ಮಾಡುವವರಿಗೆಲ್ಲಾ (ಐಶ್ವರ್ಯ ದಾರಿದ್ರ್ಯಗಳೂ, ಮಾನಾವಮಾನಗಳೂ, ರೋಗಾರೋಗ್ಯಗಳೂ, ದೀರ್ಘ ಅಲ್ಪಾಯುಷ್ಯಗಳೂ ಇತ್ಯಾದಿ) ಒಳ್ಳೇದಕ್ಕೆ ಕೈಗೂಡಿ

ಬರುತ್ತವೆಯೊ (ರೋಮಾ. ೮, ೨೮.) ಹಾಗೆಯೆ ದೇವರಿಲ್ಲದೆ ಬದುಕ ಬೇಕೆಂಬುವವರಿಗೆ ಅದೆಲ್ಲಾ ಶಾಪಕ್ಕೂ ಆತ್ಮದ ವಿನಾಶಕ್ಕೂ ಕಾರಣವಾಗುತ್ತವೆ.

**೩೧೪.** ದೇವರು, ನಾವು ಪ್ರಾರ್ಥನೆ ಮಾಡದೆ ಇದ್ದರೆ ಸಹಾ, ನಮಗೇನು ಬೇಕೆಂಬದನ್ನೂ ಅಪೇಕ್ಷೆಗಳನ್ನೂ ಎಲ್ಲಾ ಬಲ್ಲನು[೧]. ಆದರೆ ಅದಕ್ಕಾಗಿ ಪ್ರಾರ್ಥನೆಯು ಅನವಶ್ಯವಲ್ಲಾ. ಯಾಕಂದರೆ ನಮ್ಮ ಹೃದಯದಲ್ಲಿ ಏನುಂಟೆಂಬದನ್ನು ದೇವರು ತಿಳಕೊಳ್ಳುವ ಹಾಗೆ, ನಾವು ಪ್ರಾರ್ಥಿಸುವದು ಅಲ್ಲಾ. ಪ್ರಾರ್ಥನೆಯು ನಮ್ಮ ಆತ್ಮಿಕ ಜೀವದ ಸ್ವಾಭಾವಿಕ ಅವಶ್ಯ ಪ್ರಕಟಣೆಯಾಗಿರುತ್ತದೆ. ಎಲ್ಲಿ ದಿವ್ಯ ರಕ್ಷಣೆಗೋಸ್ಕರ ಜೀವವುಳ್ಳ ಅಪೇಕ್ಷೆಯೂ ಮನಸ್ಸೂ ಉಂಟೊ, ಅಲ್ಲಿ ಪ್ರಾರ್ಥನೆ ಸಹಾ ಅವಶ್ಯವಾಗಿರುತ್ತದೆ. ಶರೀರದ ಜೀವವು ಶ್ವಾಸ ಇಲ್ಲದೆ ಹ್ಯಾಗೆ ಇರ ಕೂಡದೊ, ಹಾಗೆಯೆ ಆತ್ಮಿಕ ಜೀವವು ಪ್ರಾರ್ಥನೆ ಇಲ್ಲದೆ ಇರ ಕೂಡದು.

೧) "ನಿಮಗೆ ಯಾವದು ಅಗತ್ಯವೋ, ನೀವು ಅವನನ್ನು ಬೇಡಿ ಕೊಳ್ಳುವದಕ್ಕಿಂತ ಮುಂಚೆ ನಿಮ್ಮ ತಂದೆ ಬಲ್ಲನು." (ಮತ್ತಾ. ೬, ೮.)

**೩೧೫.** ದೇವರು ತನ್ನ ಕೃಪೆಯ ಆತ್ಮಿಕ ವಸ್ತುಗಳನ್ನು ನಮಗೆ ನಮ್ಮ ಚಿತ್ತವೂ ನಮ್ಮ ಸಮ್ಮತಿಯೂ ಇಲ್ಲದೆ (ಅಂದರೆ ನಮ್ಮ ಪ್ರಾರ್ಥನೆ ಇಲ್ಲದೆ) ಕೊಡಲೊಲ್ಲನು, ಕೊಡ ಕೂಡದು. ಆದರೆ ಈ ಜೀವದ ಶರೀರಕ್ಕೆ ಬೇಕಾದ ವಸ್ತುಗಳ ವಿಷಯದಲ್ಲಿ ಸಹಾ ಪ್ರಾರ್ಥಿಸದೆ ಇದ್ದರೆ, ಮಾಡದೆ ಇರ ಬಹುದಾದದ್ದನ್ನು ಪ್ರಾರ್ಥಿಸಿದರೆ, ಅನೇಕ ಸರ್ತಿ ಮಾಡುತ್ತಾನೆ. (ಲೂಕ. ೧೧, ೫—೮. ೧೮, ೧—೭.) ಯಾಕಂದರೆ ಪ್ರಾರ್ಥನೆಯಿಂದಲೂ, ದೇವರು ಪ್ರಾರ್ಥನೆ ಕೇಳುವದರಿಂದಲೂ, ನಮ್ಮ ಹೃದಯಗಳು ಆತನ ಪ್ರೀತಿಯಲ್ಲಿಯೂ ಅನ್ಯೋನ್ಯದಲ್ಲಿಯೂ ಸ್ಥಿರವಾಗುತ್ತವೆ.

ಪರಿಶಿ. ದೇವರು ಪ್ರಾರ್ಥನೆಗಳನ್ನು ಕೇಳಿ, ನಾವು ಪ್ರಾರ್ಥಿಸದೆ ಇರುವಲ್ಲಿ ತಾನಾಗಿ ಮಾಡ ಬಹುದಾದ್ದದನ್ನು ಬಿಟ್ಟು, ಪ್ರಾರ್ಥನೆಗೋಸ್ಕರ ಬೇರೆ ಏನಾದರೂ ಮಾಡುವದಾದರೆ, ಆತನು ತನ್ನ ಸಂಕಲ್ಪವನ್ನು ಬೇರೆ ಮಾಡಿದರೆ, ಅಚಂಚಲನು ಎಂಬದು ಹೋದೀತಲ್ಲಾ ಎಂಬ ಮಾತು ಅಪ್ರಬುದ್ಧವಾಗಿರುತ್ತದೆ. ಯಾಕಂದರೆ ನಿತ್ಯತ್ವದಿಂದ ದೇವರು ತಿಳಕೊಂಡಿರುವ ಪ್ರಾರ್ಥನೆಗಳು ಸಹಾ ದೇವರ ಸಂಕಲ್ಪದಲ್ಲಿ ಸೇರಿಯವೆ. ಆದಕಾರಣ ನಾವು ಉಚ್ಚರಿಸುವ ಮೊದಲೆ ದೇವರು ಬಹಳ ಸರ್ತಿ ಪ್ರಾರ್ಥನೆಗಳನ್ನು ಕೇಳುತ್ತಾನೆ. ಉದಾ: ದಾನಿ. ೯, ೨೩. ಯೆಶಾ. ೬೫, ೨೪.—ಮತ್ತು ಆಗುವದೇನಂದರೆ, ಅವರು ಕರಿಯುವ ಮೊದಲೆ ಉತ್ತರ ಕೊಡುವೆನು, ಅವರು ಮಾತಾಡುವಾಗಲೆ ನಾನು ಕೇಳುವೆನು.

**೨೧೬.** ಸಮವಾದ ಪ್ರಾರ್ಥನೆಗೆ ಶಿಕ್ಕುವದೆಂದು ವಾಗ್ದತ್ತವಿದ್ದಲ್ಲಿ ದೇವರು ಒಂದು ಪ್ರಾರ್ಥನೆಯನ್ನು ನಿರುಪಾಧಿಕವಾಗಿ ಕೇಳದೆ ಹೋದ್ದಾದರೆ (**೨೧೨.**), ಆ ಪ್ರಾರ್ಥನೆಯು ಸುಳ್ಳಾಗಿತ್ತು ಅಂದರೆ ವಿಶ್ವಾಸವಿಲ್ಲದ್ದಾಗಿತ್ತು೧); ಅಥವಾ ಪ್ರಾರ್ಥನೆಯ ವಿಷಯವು ಲಕ್ಷ್ಯವಾಗದೆ ಇದ್ದದ್ದು ತೋರಿಕೆಗೆ ಮಾತ್ರ ಹಾಗೆ ಕಾಣುತ್ತದೆ. ಯಾತರಿಂದೆಂದರೆ, ದೇವರು ಬಹಳ ಸರ್ತಿ ಪ್ರತ್ಯಕ್ಷವಾಗಿ ನಮ್ಮ ಬಿನ್ನಹಗಳನ್ನು ಸಲಿಸುವದರಲ್ಲಿ, ತನ್ನ ಮಾರ್ಗಗಳ ಅಶೋಧ್ಯ ಜ್ಞಾನದ ಪ್ರಕಾರ, ಒಂದು ವೇಳ್ಯ ನಮ್ಮ ವಿಶ್ವಾಸವನ್ನು ಪರಗಲ್ಲಿಗೆ ಹಾಕುವದಕ್ಕೆ ಅಥವಾ ನಮ್ಮಲ್ಲಿಯಾಗಲಿ ನಮ್ಮ ಹೊರಗಾಗಲಿ ಇರುವ ಬೇರೆ ಪ್ರಯೋಜನಗಳಿಗಾಗಿ ತಾಮಸ ಮಾಡುತ್ತಾನೆ. (೨ ಪೇತ್ರ. ೩, ೯.) ಬಹಳ ಸರ್ತಿ ನಮ್ಮ ಅಲ್ಪದೃಷ್ಟಿಯಿಂದಲೂ ಆತ್ಮಿಕತ್ವ ವಿಹೀನತೆಯಿಂದಲೂ ನಾವು ನೋಡದೆ ಇದ್ದರೂ, ನಮ್ಮ ಪ್ರಾರ್ಥನೆಗಳನ್ನು ಬಹಳ ಸರ್ತಿ ತತ್ಕ್ಷಣದಲ್ಲಿ ಕೇಳುತ್ತಾನೆ. ಹ್ಯಾಗಂದರೆ ನಾವು ನಿರೀಕ್ಷಿಸಿದಕ್ಕಿಂತ ಪೂರ್ಣ ಬೇರೆ ರೀತಿಯಾಗಿ ಆತನು ನಮ್ಮ ಪ್ರಾರ್ಥನೆಗಳನ್ನು ಕೇಳುತ್ತಾನೆ.

೧) "ಆದರೆ ಏನೂ ಸಂದೇಹ ಪಡದೆ, ವಿಶ್ವಾಸವಾಗಿ ಬೇಡಿ ಕೊಳ್ಳಲಿ; ಯಾಕಂದರೆ ಸಂದೇಹ ಪಡುವವನು ಘಾಳಿಯಿಂದ ಬಡಿಯಲ್ಪಟ್ಟು ಕದಲುವ ಸಮುದ್ರದ ತೆರೆಗೆ ಸಮಾನನಾಗಿದ್ಧಾನೆ. ಆ ಮನುಷ್ಯನು ಕರ್ತನಿಂದ ಏನಾದರೂ ಹೊಂದುವೆನೆಂದು ನೆನಸದಿರಲಿ. ಎರಡು ಮನಸ್ಸುಳ್ಳವನು ತನ್ನ ಸಕಲ ಮಾರ್ಗಗಳಲ್ಲಿ ಚಂಚಲನಾಗಿದ್ಧಾನೆ." (ಯಾಕೋ. ೧, ೬—೮.) "ಬೇಡಿ ಕೊಂಡರೂ, ನಿಮ್ಮ ಆಶೆಗಳಲ್ಲಿ ವೆಚ್ಚ ಮಾಡುವ ಹಾಗೆ, ತಪ್ಪಾಗಿ ಬೇಡಿ ಕೊಳ್ಳುವ ಕಾರಣ ನೀವು ಹೊಂದುವದಿಲ್ಲ." (ಯಾಕೋ. ೪, ೩.)

**೨೧೭.** ಪ್ರಾರ್ಥನೆ ಅಂದರೆ, (ಕೇಡು ನಿವಾರಿಸಿ ಒಳ್ಳೇದನ್ನು ದಯ ಮಾಡ ಬೇಕೆಂಬ) ಬಿನ್ನಹವಾಗಿರುವದು; ಅಥವಾ (ಹೊಂದಿದ ಉಪಕಾರಗಳಿಗೋಸ್ಕರ) ಕೃತಜ್ಞಾಪನೆಯೂ ಸ್ತೋತ್ರವೂ ಆಗಿರ ಬಹುದು. ಎರಡು ತರದ ಪ್ರಾರ್ಥನೆಗಳೂ, ಪ್ರಾರ್ಥಿಸುವವನ ಸ್ವಂತ ಅಪೇಕ್ಷೆಗಳನ್ನು ಕುರಿತು ಮಾತ್ರವಲ್ಲ, ಸಹೋದರರ ರಕ್ಷಣೆ ಕ್ಷೇಮಗಳನ್ನು ಕುರಿತು ಸಹಾ ಆಗಿರ ತಕ್ಕದ್ದು. ಯಾತಕ್ಕಂದರೆ, ಮೊದಲಾಗಿ ಅವರು ಸ್ವಭಾವದಿಂದ ನಮ್ಮ ಮಾಂಸವಾಗಿರುತ್ತಾರೆ೧), ಮತ್ತು ಮುಖ್ಯವಾಗಿ ಅವರು ನಮ್ಮ ಹಾಗೆಯೆ ಕ್ರಿಸ್ತನ ಶರೀರದ ಅಂಗಗಳಾಗಿದ್ಧಾರೆ, ಅಥವಾ ಆಗಲಿಕ್ಕೆ ಕರಿಯಲ್ಪಟ್ಟಿದ್ಧಾರೆ೨). ಮತ್ತೊಬ್ಬರಿಗೋಸ್ಕರ ಬೇಡಿ ಕೊಳ್ಳುವದು ಕ್ರೈಸ್ತ ಪ್ರಾರ್ಥನೆಯಲ್ಲಿ ವಿಶೇಷ ಭಾಗವಾಗಿರಲಾಗಿ, ಬೇರೊಬ್ಬರಿಗೋಸ್ಕರ ಬೇಡಿ ಕೊಳ್ಳದೆ, ಪ್ರಾರ್ಥನೆಯ ಜೀವವು ಇರಲಿಕ್ಕೆಯೆ ಕೂಡದು. ಐದನೆ ಕಟ್ಟಳೆಯು ಸನ್ಮಾನಿಸಲಿಕ್ಕೆ ಅಪ್ಪಣೆ ಕೊಡುವಂಥವರ ವಿಷಯದಲ್ಲಿ ಮುಖ್ಯವಾಗಿ ಬೇಡಿ ಕೊಳ್ಳುವದು ಅವಶ್ಯ. (**೮೦.**) ಮತ್ತು ಮನುಷ್ಯರ ಆತ್ಮ ಶರೀರಗಳ ಕ್ಷೇಮದ

ವಿಷಯದಲ್ಲಿ ಅವನ ಸ್ಥಾನವೂ ಉದ್ಯೋಗವೂ ಎಷ್ಟು ವಿಶೇಷವಾಗಿಯೂ ಬಲವುಳ್ಳದ್ದಾಗಿಯೂ ಇರುತ್ತದೋ, ಅಷ್ಟು ಹೆಚ್ಚಾಗಿ ಹೃದಯಪೂರ್ವಕವಾಗಿಯೂ ಎಡೆ ಬಿಡದೆಯೂ ಅವರಿಗೋಸ್ಕರ ಬೇಡಿ ಕೊಳ್ಳ ತಕ್ಕದ್ದು. ಇದರಲ್ಲಿ ಮುಖ್ಯವಾಗಿ ಸರ್ಕಾರಕ್ಕೋಸ್ಕರವೂ[೧] ಸುವಾರ್ತೆಯ ಸೇವಕರಿಗೋಸ್ಕರವೂ[೨], ಪ್ರಾರ್ಥಿಸುವದು ಅವಶ್ಯ. ಮತ್ತೊಬ್ಬರಿಗೋಸ್ಕರ ಪ್ರಾರ್ಥಿಸುವಾಗ್ಯೆ, ದೇವರ ರಾಜ್ಯವು ಸಮೀಪದಲ್ಲಿಯೂ ದೂರದಲ್ಲಿಯೂ ಅಭಿವೃದ್ಧಿಯಾಗಿ ವಿಸ್ತಾರವಾಗ ಬೇಕೆಂದು ಮಾಡ ತಕ್ಕ ಪ್ರಾರ್ಥನೆ ಸಹಾ ಸೇರುತ್ತದೆ.

೧) "ಆದದರಿಂದ ಎಲ್ಲಾದರ ಮೊದಲು, ಬಿನ್ನಹ ಪ್ರಾರ್ಥನೆ ವಿಜ್ಞಾಪನೆ ಸ್ತೋತ್ರಗಳನ್ನು, ಎಲ್ಲಾ ಮನುಷ್ಯರಿಗೋಸ್ಕರವೂ, ಅರಸರಿಗೋಸ್ಕರವೂ, ಅಧಿಕಾರದಲ್ಲಿರುವವರೆಲ್ಲರಿಗೋಸ್ಕರವೂ, ನಾವು ಸಕಲ ಭಕ್ತಿಯಿಂದಲೂ, ಮರ್ಯಾದೆಯಿಂದಲೂ, ಶಾಂತವಾಗಿಯೂ, ಸಮಾಧಾನವಾಗಿಯೂ, ಕಾಲಕ್ಷೇಪ ಮಾಡುವ ಹಾಗೆ, ಮಾಡ ಬೇಕೆಂದು ಬುದ್ಧಿ ಹೇಳುತ್ತೇನೆ. ಯಾಕಂದರೆ ಸಕಲ ಮನುಷ್ಯರು ರಕ್ಷಿಸಲ್ಪಟ್ಟು ಸತ್ಯದ ತಿಳುವಿಕೆಗೆ ಬರ ಇಚ್ಛೈಸುವ ನಮ್ಮ ರಕ್ಷಕನಾದ ದೇವರ ಮುಂದೆ ಇದು ಒಳ್ಳೇದೂ ಸಮರ್ಪಕವೂ ಆಗಿದೆ." (೧ ತಿಮೊ. ೨, ೧—೪.) "ನಿಮ್ಮನ್ನು ಸೆರೆಯಾಗಿ ವೈಯ ಗೊಡಿಸಿದ ಪಟ್ಣದ ಸಮಾಧಾನವನ್ನು ಹುಡಿಕಿರಿ; ಅದಕ್ಕೋಸ್ಕರ ಯೆಹೋವನಿಗೆ ಪ್ರಾರ್ಥನೆ ಮಾಡಿರಿ; ಯಾಕಂದರೆ ಅದರ ಸಮಾಧಾನದಿಂದ ನಿಮಗೆ ಸಮಾಧಾನವಾಗುವದು." (ಯೆರೆ. ೨೯, ೭.)

೨) "ಸಕಲ ಪ್ರಾರ್ಥನೆ ವಿಜ್ಞಾಪನೆಗಳಿಂದ ಸರ್ವ ಕಾಲ ಆತ್ಮದಲ್ಲಿ ಪ್ರಾರ್ಥಿಸಿ, ಇದಕ್ಕಾಗಿಯೇ ಸಕಲ ಪರಿಶುದ್ಧರಿಗೋಸ್ಕರ ಸಕಲ ಸ್ಥಿರತ್ವದಿಂದಲೂ ವಿಜ್ಞಾಪನೆಯಿಂದಲೂ ಎಚ್ಚರವಾಗಿರಿ. ನನಗೋಸ್ಕರ ಸಹ, ಧೈರ್ಯವಾಗಿ ನನ್ನ ಬಾಯಿ ತೆರೆದು, ಸುವಾರ್ತೆಯ ಮರ್ಮವನ್ನು ತಿಳಿಸುವದಕ್ಕೆ, ನನಗೆ ವಾಕ್ಯವು ಕೊಡಲ್ಪಡುವ ಹಾಗೆಯೂ, ಯಾವದಕ್ಕೋಸ್ಕರ ಬಂಧಕದಲ್ಲಿ ರಾಯಭಾರಿಯಾಗಿದ್ದೇನೋ, ಅದರಲ್ಲಿ ಮಾತಾಡ ತಕ್ಕ ಪ್ರಕಾರ ಧೈರ್ಯವಾಗಿ ಮಾತಾಡುವ ಹಾಗೆಯೂ, ಬೇಡಿ ಕೊಳ್ಳಿರಿ." (ಎಫೆ. ೬, ೧೮—೨೦.) (ಕೊಲೊ. ೪, ೩. ೪. ರೋಮಾ. ೧೫, ೨೫. ೩೦. ೨ ಥೆಸ್ಸ ೩, ೧.)

೩) "ಬೆಳೆ ಬಹಳ;" ಇತ್ಯಾದಿ. (ಮತ್ತಾ. ೯, ೩೭. ೩೮.) (**೨೬೮.**) "ನಿನ್ನ ರಾಜ್ಯವು ಬರಲಿ." (ಮತ್ತಾ. ೬, ೧೦.)

**೨೧೮.** ಸಮವಾದ ಕೇಳಲ್ಪಡ ತಕ್ಕ ಪ್ರಾರ್ಥನೆಗೆ, ಬಹಳ[೧] ಛಂದವಾಗಿ ಸಂಧಿಸುವ ವಾಕ್ಯಗಳು ಬೇಡ — ಹೃದಯದ ನಿಟ್ಟುಸುರು ತೊದಲು ಮಾತು ದೇವರ ಮುಂದೆ, ಪರಮ ವಿಚಿತ್ರವಾದ ಛಂದವಾದಕ್ಕಿಂತಲೂ, ವಾಗ್ಬಲತ್ವ ಉಳ್ಳದಾಗಿರುತ್ತದೆ. ಆದರೆ ಅದು ದೈನ್ಯವಾಗಿಯೂ[೨] ಮನಃಪೂರ್ವಕವಾಗಿಯೂ[೩] ಎಡೆ ಬಿಡದೆಯೂ[೪]

ಸಂತೋಷತೆಯಿಂದಲೂ[೫] ಬಿಡಲೊಲ್ಲದ್ದಾಗಿಯೂ[೬] ಇರ ತಕ್ಕದ್ದು. (ಲೂಕ. ೧೧, ೫—೧೩. ಮತ್ತು ೧೮, ೧—೮. ಈ ಎರಡು ಸಾಮ್ಯಗಳನ್ನು ಮುಖ್ಯವಾಗಿ ನೋಡ ತಕ್ಕದ್ದು.)

೧) "ಆದರೆ ಪ್ರಾರ್ಥನೆ ಮಾಡುವಾಗ, ಜನಾಂಗಗಳವರ ಹಾಗೆ ವ್ಯರ್ಥ ಮಾತುಗಳನ್ನು ಆಡ ಬೇಡಿರಿ. ಯಾಕಂದರೆ ಅವರು ತಮ್ಮ ಬಹು ಮಾತುಗಳಿಗೋಸ್ಕರ ಕೇಳಲ್ಪಡುವೆವೆಂದು ನೆನಸುತ್ತಾರೆ." (ಮತ್ತಾ. ೬, ೭.)

೨) "ಇಗೋ, ಮಣ್ಣೂ ಬೂದಿಯೂ ಆಗಿರುವ ನಾನು ಸ್ವಾಮಿಯ ಸಂಗಡ ಮಾತಾಡ ಮುಂಗೊಂಡಿದ್ದೇನೆ." (ಉತ್ಪ. ೧೮, ೨೭.)

೩) "ನೀತಿವಂತನ ಚುರುಕಾದ ಪ್ರಾರ್ಥನೆಯು ಬಹು ಶಕ್ತಿಯುಳ್ಳದ್ದಾಗಿದೆ." (ಯಾಕೋ. ೫, ೧೬.)

೪) "ನೀನು ನನ್ನನ್ನು ಆಶೀರ್ವದಿಸಿದರೆ ಹೊರ್ತು, ನಿನ್ನನ್ನು ಹೋಗಲೀಸೆನು." (ಉತ್ಪ. ೩೨, ೨೬.)

೫) "ಮತ್ತು ಅವನ ಕಡೆಗೆ ನಮಗಿರುವ ಧೈರ್ಯವು ಏನಂದರೆ— ಅವನ ಚಿತ್ತದ ಪ್ರಕಾರ ಯಾವದನ್ನಾದರೂ ಬೇಡಿ ಕೊಂಡರೆ, ನಮಗೆ ಕಿವಿ ಕೊಡುತ್ತಾನೆ. ಮತ್ತು ನಾವು ಯಾವದನ್ನಾದರೂ ಬೇಡಿ ಕೊಂಡರೆ, ನಮಗೆ ಕಿವಿ ಕೊಡುತ್ತಾನೆಂದು, ನಾವು ತಿಳ್ಕೊಂಡರೆ, ಅವನಿಂದ ಬೇಡಿ ಕೊಂಡ ಬಿನ್ನಹಗಳನ್ನು ಹೊಂದಿದ್ದೇವೆಂದು, ಬಲ್ಲೆವು." (೧ ಯೋಹಾ. ೫, ೧೪. ೧೫.)

೬) "ನನ್ನ ಮುಖವನ್ನು ಹುಡುಕಿರಿ, ಅಂದಿ; ನಿನ್ನ ಮುಖವನ್ನು, ಯೆಹೋವನೇ, ಹುಡುಕುವೆನೆಂದು, ನನ್ನ ಹೃದಯವು ನಿನಗೆ ಹೇಳಿತು." (ಕೀರ್ತ. ೨೭, ೮.)

ಪರಿಶಿ. ೧. ಓಡ್ಯಾಡುವ ಮನಸ್ಸೂ, ಪ್ರಾರ್ಥನೆಗೆ ಅನಪೇಕ್ಷೆಯೂ, ಆಲಸ್ಯವೂ ಪ್ರಾರ್ಥನೆಯಿಂದ ನಮ್ಮನ್ನು ಹಿಂದೆಳಿಯಗೊಡಲಾಗದು. ಆಗಲೆ ಇನ್ನು ಹೆಚ್ಚಾಗಿ ಪ್ರಾರ್ಥನೆಯು ಅವಶ್ಯ. ಯಾರು ಪ್ರಾರ್ಥನೆ ಮಾಡಲಾರನೊ, ಅಂಥವನು ಪ್ರಾರ್ಥನೆಯ ವರವನ್ನೂ ಪ್ರಾರ್ಥಸಲಿಕ್ಕೆ ಕಲಿಸುವ ಸಹಾಯ ಮಾಡುವ ಆತ್ಮವನ್ನೂ ಬೇಡಿ ಕೊಳ್ಳಲಿ. (ರೋಮಾ. ೮, ೧೫—೨೬.) (**೩೧೨**, ೨.) ಮತ್ತು ಅಲ್ಪ ವಿಶ್ವಾಸವು, ಪ್ರಾರ್ಥನೆಗೂ ಪ್ರಾರ್ಥನೆ ಕೇಳಲ್ಪಡುವದೆಂಬದಕ್ಕೂ ಸಿದ್ಧ ಸಂತೋಷತೆಯುಳ್ಳ ಭರವಸವನ್ನು ನಮ್ಮಿಂದ ಕಳ ಕೊಳ್ಳಲಿಕ್ಕಿದ್ದರೆ, ಆಗ್ಯೆ "ಕರ್ತನೇ ವಿಶ್ವಾಸಿಸುತ್ತೇನೆ ನನ್ನ ಅವಿಶ್ವಾಸಕ್ಕೆ ಸಹಾಯ ಮಾಡೆಂದು" ಕೂಗ ತಕ್ಕದ್ದು. (ಮಾರ್ಕ. ೯, ೨೪.)

ಪರಿಶಿ. ೨. ಪ್ರಾರ್ಥನೆ ಮಾಡುವಾಗ್ಯೆ ಬಹಿರಂಗದ ರೀವಿ ಮುಖಸ್ಥಿತಿಗಳ ವಿಷಯಗಳಲ್ಲಿ ಇಲ್ಲಿ ಸಹಾ ಆ ಮಾತುಗಳು ಖರೆ. ಯಾವವಂದರೆ, "ಬದುಕಿಸುವಂಥಾದ್ದು ಆತ್ಮವೇ; ಮಾಂಸವು ಯಾವದಕ್ಕೂ ಪ್ರಯೋಜನವಾಗಿರುವದಿಲ್ಲಾ." (ಯೋಹಾ. ೬, ೬೩.)

"ಸತ್ಯವಾಗಿ ಆರಾಧಿಸುವವರು ತಂದೆಯನ್ನು ಆತ್ಮದಿಂದಲೂ ಸತ್ಯದಿಂದಲೂ ಆರಾಧಿಸುವ ತಾಸು ಬರುತ್ತದೆ; ಮತ್ತು ಈಗಲೆ ಅದೆ. ಯಾಕಂದರೆ ತಂದೆಯು ತನ್ನನ್ನು ಈ ಪ್ರಕಾರ ಆರಾಧಿಸುವವರನ್ನು ಇಚ್ಛೈಸುತ್ತಾನೆ." (ಯೋಹಾ. ೪, ೨೩.) ಆದರೂ ಎಲ್ಲಾ ವಸ್ತುಗಳಿಗೆ ಅದಕ್ಕೆ ತಕ್ಕ ಆಕಾರವೂ ಆತ್ಮಕ್ಕೆ ಅದಕ್ಕೆ ತಕ್ಕ ಶರೀರವೂ ಬೇಕು. ಪ್ರಾರ್ಥನೆಯು ಆತ್ಮದ ಕೆಲಸವಾಗಿದ್ದರೂ, ಅದಕ್ಕೆ ಸಹಾ ಎಷ್ಟು ಬಲವಾಗಿಯೂ ಎಡೆ ಬಿಡದೆಯೂ ನಡಿಸುತ್ತದೊ, ಅಷ್ಟಕ್ಕೆ ಹೆಚ್ಚಾಗಿ ಸಹಾ ಅದಕ್ಕೆ ಶರೀರದ ಅಭಿನವ ಬೇಕು. ಕೈ ಜೋಡಿಸುವದೂ, ಮೊಣಕಾಲು ಊರುವದೂ, ಇತ್ಯಾದಿ ಒಳ್ಳೇ ಸುಶಿಕ್ಷೆಯಾಗಿರುತ್ತದೆ ಮಾತ್ರವಲ್ಲಾ, ಶರೀರಕ್ಕೂ ಆತ್ಮಕ್ಕೂ ಇರುವ ಅತ್ಯಂತ ಪರಸ್ಪರ ಸಂಬಂಧದ ದೆಶೆಯಿಂದ, ಪ್ರಾರ್ಥನೆಯ ಸಮಯದಲ್ಲಿ ಒಳಗಿನ ಧ್ಯಾನವನ್ನೂ ದೈನ್ಯತ್ವವನ್ನೂ ಹೆಚ್ಚಿಸುತ್ತದೆ.

**೨೧೯.** ಕ್ರೈಸ್ತನ ಜೀವವೆಲ್ಲಾ ಪ್ರಾರ್ಥನೆಯ ಜೀವವಾಗಿರ ತಕ್ಕದ್ದು[೧]. ಆದರೆ ಈ ಕಾರಣದಿಂದ ಕ್ರೈಸ್ತನು ಪ್ರಾರ್ಥನೆ ಮಾಡುವವನೆಂದು, ಚೂಸಂಬಂಧ ವೃತ್ತಿಯನ್ನೂ ಕೆಲಸಗಳನ್ನೂ ಚನ್ನಾಗಿ ಮಾಡದೆ ಅಲಕ್ಷಿಸ ತಕ್ಕದ್ದೆಂಬ ಅರ್ಥವಲ್ಲಾ. (**೫೬.**) (೨ಥೆಸ್ಸ. ೩, ೧೧. ೧೨. ೧ಥೆಸ್ಸ. ೪, ೧೧.) (**೧೧೬.**) ಹಾಗಲ್ಲಾ, ಪ್ರತಿ ಕೆಲಸವು ಪ್ರಾರ್ಥನೆಯಿಂದ ಪರಿಶುದ್ಧ ಮಾಡಲ್ಪಡ ಬೇಕು, ಮತ್ತು ಪ್ರಾರ್ಥನೆಯಿಂದ ವ್ಯಾಪಿಸಲ್ಪಟ್ಟದ್ದಾಗಿ ತಾನೆ ಪ್ರಾರ್ಥನೆಯಾಗ ಬೇಕು. ಪ್ರಾರ್ಥನೆ ಇಲ್ಲದೆ ಏನಾದರೂ ಆರಂಭಿಸಿದರೆ, ದಿವ್ಯ ಸಹಾಯವನ್ನೂ ಆಶೀರ್ವಾದವನ್ನೂ ಧಿಕ್ಕರಿಸಿ ಅಲಕ್ಷಿಸಿದ ಹಾಗಾಯಿತು[೨]. ಇದನ್ನು ಮುಖ್ಯವಾಗಿ ಬೆಳಿಗ್ಗೆ ಸಂಜೆಗೆ, ಊಟದ ಸಮಯಗಳಲ್ಲಿ, ಪ್ರಾರ್ಥನೆ ಮಾಡದೆ ಇರುವ ವಿಷಯದಲ್ಲಿ ಹೇಳ ಬೇಕು[೩].

೧) "ಪ್ರಾರ್ಥನೆಯಲ್ಲಿ ನೆಲೆಗೊಳ್ಳಿರಿ; ಅದರಲ್ಲಿ ಸ್ತೋತ್ರ ಮಾಡಿ, ಎಚ್ಚರವಾಗಿರಿ." (ಕೊಲೊ. ೪, ೨.) "ಎಡೆ ಬಿಡದೆ ಪ್ರಾರ್ಥಿಸಿರಿ." (೧ ಥೆಸ್ಸ. ೫, ೧೭.)

೨) ಕೀರ್ತ. ೧೨೭, ೧. ೨. (**೧೧೩,** ೩.)

೩) "ನೀನು ಉಂಡು ತೃಪ್ತಿ ಹೊಂದಿದಾಗ, ನಿನ್ನ ದೇವರಾದ ಯೆಹೋವನನ್ನು . . . ಹರಸ ಬೇಕು." (ದ್ವಿತಿ. ೮, ೧೦.) "ನಿನ್ನನ್ನು ನನ್ನ ಹಾಸಿಗೆಯ ಮೇಲೆ ಜ್ಞಾಪಕ ಮಾಡಿಕೊಳ್ಳುವಾಗ, ರಾತ್ರಿಯ ಝಾವುಗಳಲ್ಲಿ ನಿನ್ನನ್ನು ಧ್ಯಾನಿಸುತ್ತೇನೆ." (ಕೀರ್ತ. ೬೩, ೬.)

**೨೨೦.** ವಿಶೇಷವಾದ ಆಶೀರ್ವಾದವು ಒಟ್ಟಿಗೆ ಮಾಡುವ ಪ್ರಾರ್ಥನೆಯಲ್ಲಿ ಉಂಟು. ಅದು ವಿಶ್ವಾಸಿಗಳ ಸಭೆ ಎಲ್ಲಾದರ ಪ್ರಾರ್ಥನೆಯಾಗಿರ ಬಹುದು[೧]. ತಂದೆ ತಾಯಿಗಳೂ ಮಕ್ಕಳೂ, ಯಜಮಾನರೂ, ಸೇವಕರೂ ಕೂಡಿದ ಮನೆತನ ಎಲ್ಲಾದರ ಪ್ರಾರ್ಥನೆಯಾಗಿರ ಬಹುದು. ಅಥವಾ ಕರ್ತನಲ್ಲಿ ಒಬ್ಬರ ಸಂಗಡಲೊಬ್ಬರು ಕೂಡಿ ಕೊಂಡಿರುವ

ಕೆಲವು ಪ್ರಾಣಿಗಳ ಪ್ರಾರ್ಥನೆಯಾಗಿರ ಬಹುದು[೨]. ಆದರೆ ಒಟ್ಟಿಗೆ ಮಾಡುವ ಪ್ರಾರ್ಥನೆಯಿಂದ ಪರಸ್ಪರ ಪ್ರೀತಿಯಲ್ಲಿಯೂ ಎಲ್ಲಾ ಅಂಗಗಳ ಸಾಮಾನ್ಯ ತಲೆಯ ಪ್ರೀತಿಯಲ್ಲಿಯೂ ಸ್ಥಿರವಾಗುವದು ಅವಶ್ಯವಾದ ಕೆಲಸವಾಗಿದ್ದರೂ, ಅದೇ ಪ್ರಕಾರ ಕೋಣೆಯ ಏಕಾಂತದಲ್ಲಿ[೩] ಕರ್ತನ ಸಂಗಡ ಪ್ರಾರ್ಥನೆಯಲ್ಲಿ ಸಂಸರ್ಗವಾಗಿರುವದು ಸಹಾ ಅವಶ್ಯವಾಗಿಯೂ ಆಶೀರ್ವಾದ ಉಳ್ಳದ್ದಾಗಿಯೂ ಇರುತ್ತದೆ.

೧) "ಮತ್ತು ಪ್ರೀತಿಗೂ" ಇತ್ಯಾದಿ. (ಇಬ್ರಿ. ೧೦, ೨೪. ೨೫.) (೬೧.) "ಆತ್ಮದಿಂದ ತುಂಬಿ ಕೊಂಡು" ಇತ್ಯಾದಿ. (ಎಫೆ. ೫, ೧೮.) (೬೧.)

೨) "ನಿಮ್ಮೊಳಗೆ ಇಬ್ಬರು, ತಾವು ಬೇಡಿ ಕೊಳ್ಳುವ ಯಾವ ಕಾರ್ಯವನ್ನು ಕುರಿತಾದರೂ ಭೂಮಿಯ ಮೇಲೆ ಸಮ್ಮತಿ ಪಟ್ಟರೆ, ಅದು ಪರಲೋಕದಲ್ಲಿರುವ ನನ್ನ ತಂದೆಯಿಂದ ಅವರಿಗೆ ಉಂಟಾಗುವದು; ಯಾಕಂದರೆ ಇಬ್ಬರಾದರೂ, ಮೂವರಾದರೂ, ನನ್ನ ಹೆಸರಿನಲ್ಲಿ ಎಲ್ಲಿ ಕೂಡಿ ಇದ್ದಾರೋ, ಅಲ್ಲಿ ಅವರ ಮಧ್ಯದಲ್ಲಿ ಇದ್ದೇನೆ." (ಮತ್ತಾ. ೧೮, ೧೯. ೨೦.)

೩) "ನೀನು ಪ್ರಾರ್ಥಿಸುವಾಗ, ನಿನ್ನ ಕೊಠಡಿಯೊಳಗೆ ಹೋಗಿ, ನಿನ್ನ ಬಾಗಲನ್ನು ಮುಚ್ಚಿ, ಅಂತರಂಗದಲ್ಲಿರುವ ನಿನ್ನ ತಂದೆಗೆ ಪ್ರಾರ್ಥನೆ ಮಾಡು." (ಮತ್ತಾ. ೬, ೬.)

## ಕರ್ತನ ಪ್ರಾರ್ಥನೆ.

## (೩ನೆ ಮುಖ್ಯ ಭಾಗ.)

**೩೨೧.** ಕ್ರೈಸ್ತ ಪ್ರಾರ್ಥನೆಯ ಸ್ವರೂಪ ತಾತ್ಪರ್ಯಗಳ ವಿಷಯದಲ್ಲಿ, ಕರ್ತನು ತಾನೆ ಸಂಪೂರ್ಣ ಬೋಧನೆಯನ್ನು ಪಾದ್ರಿಯಾಗಿರ ತಕ್ಕ ಪ್ರಾರ್ಥನೆಯಲ್ಲಿ ನಮಗೆ ಕೊಟ್ಟಿದ್ದಾನೆ. (ಮತ್ತಾ. ೬, ೯—೧೩. ಲೂಕ. ೧೧, ೨—೪.) ಕಾಲಸ್ಥಿತಿಗಳಿಗೂ, ಹೃದಯದ ವಿಶೇಷವಾದ ಅನುಪತ್ಯ ಅನುಭವಗಳಿಗೂ ಯೋಗ್ಯವಾಗಿರುವ ಬೇರೆ ಬೇರೆ ಬಹುವಿಧವಾದ ಪ್ರಾರ್ಥನೆಯ ವಿಕಾರಗಳಿಗೆಲ್ಲಾ ಕರ್ತನ ಪ್ರಾರ್ಥನೆಯು ಮೂಲಾಧಾರದಂತೆ ಇರುತ್ತದೆ. — ಕರ್ತನ ಪ್ರಾರ್ಥನೆಯು ಮೂರು ಭಾಗವಾಗಿರುತ್ತದೆ. ಸಂಬೋಧನ, ಏಳು ಬಿನ್ನಹಗಳು, ಮತ್ತು ಸ್ತೋತ್ರ. ಏಳು ಬಿನ್ನಹಗಳಲ್ಲಿ, ಮೊದಲನೆ ನಾಲ್ಕು ಮೇಲಿಗೋಸ್ಕರವಾಗಿರುತ್ತವೆ; ಕಡೇ ಮೂರು ಕೇಡಿನ ಪರಿಹಾರಕ್ಕೋಸ್ಕರವಾಗಿರುತ್ತವೆ. ಆರು ಬಿನ್ನಹಗಳು ಆತ್ಮಿಕ ವಸ್ತುಗಳ ವಿಷಯ. ಒಂದೇ ಮಾತ್ರ (೪ನೆದು) ಶರೀರದ ಅವಸರಕ್ಕೋಸ್ಕರ.

## ಸಂಬೋಧನ.

### ಸ್ವರ್ಗಗಳಲ್ಲಿರುವ ನಮ್ಮ ತಂದೆಯೇ.

ಹಾಗಂದರೇನು?

ಇದರಿಂದ ದೇವರು ನಮ್ಮ ನಿಜ ತಂದೆಯೂ, ನಾವು ಆತನ ನಿಜ ಮಕ್ಕಳೂ, ಎಂಬದು ನಾವು ನಂಬಿ ಕೊಂಡು, ಪ್ರಿಯ ಮಕ್ಕಳು ಪ್ರಿಯ ತಂದೆಯನ್ನು ಬೇಡಿ ಕೊಳ್ಳುವ ಪ್ರಕಾರ, ಪೂರ್ಣ ಭರವಸದಿಂದ ಆತನನ್ನು ಬೇಡಿ ಕೊಳ್ಳುವ ಹಾಗೆ, ಆತನು ನಮ್ಮನ್ನು ಧೈರ್ಯ ಪಡಿಸುತ್ತಾನೆ.

## ಮೊದಲನೆ ಬಿನ್ನಹ.

### ನಿನ್ನ ನಾಮವು ಪರಿಶುದ್ಧವಾಗಲಿ.

ಹಾಗಂದರೇನು?

ದೇವರ ನಾಮವು ಪರಿಶುದ್ಧವಾದದ್ದು ಸರಿ; ಆದರೆ ಅದು ನಮ್ಮಲ್ಲಿ ಸಹಾ ಪರಿಶುದ್ಧವಾಗ ಬೇಕೆಂದು ಬೇಡಿ ಕೊಳ್ಳುತ್ತೇವೆ.

ಇದು ಆಗುವದು ಹ್ಯಾಗೆ?

ದೇವರ ವಾಕ್ಯವು ಯಥಾರ್ಥವಾಗಿಯೂ ಶುದ್ಧವಾಗಿಯೂ ಬೋಧಿಸಲ್ಪಟ್ಟರೆ, ಮತ್ತು ನಾವು ದೇವರ ಮಕ್ಕಳಾಗಿ ಅದನ್ನು ಕೈಕೊಂಡು, ಶುದ್ಧವಾಗಿ ನಡ ಕೊಂಡರೆ, ಈ ವಿಜ್ಞಾಪನೆ ಪೂರ್ಣವಾಗುವದು. ಪರಲೋಕದಲ್ಲಿರುವ ಪ್ರಿಯ ತಂದೆಯೆ, ಇದಕ್ಕಾಗಿ ನಮಗೆ ಸಹಾಯಕನಾಗಿರು! ಆದರೆ ದೇವರ ವಾಕ್ಯದ ಬೋಧನೆಗೆ ವಿರೋಧವಾಗಿ ಬೋಧಿಸಿ ನಡ ಕೊಳ್ಳುವವನು, ನಮ್ಮಲ್ಲಿ ದೇವರ ನಾಮವನ್ನು ಅಶುದ್ಧ ಮಾಡುತ್ತಾನೆ. ಪರಲೋಕದಲ್ಲಿರುವ ಪ್ರಿಯ ತಂದೆಯೆ, ಇದರ ದೆಸೆಯಿಂದ ನಮ್ಮನ್ನು ಪಾಲಿಸು.

## ಎರಡನೆ ಬಿನ್ನಹ.

### ನಿನ್ನ ರಾಜ್ಯವು ಬರಲಿ.

ಹಾಗಂದರೇನು?

ದೇವರ ರಾಜ್ಯವು ನಮ್ಮ ಪ್ರಾರ್ಥನೆ ಇಲ್ಲದೆ ಸಹಾ ತನ್ನಷ್ಟಕ್ಕೆ ಬರುತ್ತದೆ ಸರಿ, ಆದರೆ ಅದು ನಮ್ಮ ಬಳಿಗೂ ಬರ ಬೇಕೆಂದು ಈ ಬಿನ್ನಹದಲ್ಲಿ ಪ್ರಾರ್ಥಿಸುತ್ತೇವೆ.

ಇದು ಆಗುವದು ಹ್ಯಾಗೆ?

ನಾವು ದೇವರ ಪರಿಶುದ್ಧ ವಾಕ್ಯದಲ್ಲಿ ನಂಬಿ, ಇಹ ಪರದಲ್ಲಿ ದೈವಿಕವಾಗಿ ಜೀವಿಸುವದಕ್ಕೆ, ತನ್ನ ಕೃಪೆಯಿಂದ ನಮಗೆ ಸಹಾಯ ಮಾಡುವ ಪರಿಶುದ್ಧಾತ್ಮವನ್ನು ಪರಲೋಕದಲ್ಲಿರುವ ತಂದೆಯು ನಮಗೆ ಕೊಟ್ಟರೆ, ಈ ಬಿನ್ನಹವು ಪೂರ್ಣವಾಗುತ್ತದೆ.

## ಮೂರನೆ ಬಿನ್ನಹ.

ನಿನ್ನ ಚಿತ್ತವು ಸ್ವರ್ಗದಲ್ಲಿ ಹ್ಯಾಗೊ, ಹಾಗೆಯೆ ಭೂಮಿಯಲ್ಲಿಯೂ ಆಗಲಿ.

ಹಾಗಂದರೇನು?

ದೇವರ ಒಳ್ಳೇ ಕೃಪೆಯುಳ್ಳ ಚಿತ್ತವು ನಮ್ಮ ಪ್ರಾರ್ಥನೆ ಇಲ್ಲದೆ ಆಗುತ್ತದೆ ಸರಿ, ಆದರೆ ಅದು ನಮ್ಮಲ್ಲಿ ಸಹಾ ಆಗ ಬೇಕೆಂದು ಈ ಬಿನ್ನಹದಲ್ಲಿ ಬೇಡಿ ಕೊಳ್ಳುತ್ತೇವೆ.

ಇದು ಆಗುವದು ಹ್ಯಾಗೆ?

ದೇವರ ನಾಮವು ಪರಿಶುದ್ಧವಾಗ ಬಾರದು, ಆತನ ರಾಜ್ಯವು ಬರ ಬಾರದು ಎಂಬ ಸೈತಾನನಿಂದಲೂ ಪ್ರಪಂಚದಿಂದಲೂ ಮಾಂಸದಿಂದಲೂ ಹುಟ್ಟುವ ಸಮಸ್ತ ದುರಾಲೋಚನೆಯನ್ನೂ ದುಶ್ಚಿತ್ತವನ್ನೂ ಮುರಿದು, ತನ್ನ ವಾಕ್ಯದಲ್ಲಿಯೂ ವಿಶ್ವಾಸದಲ್ಲಿಯೂ ದೇವರು ನಮ್ಮನ್ನು, ತೀರುವನಕ, ಬಲವಾಗಿ ಸ್ಥಾಪಿಸಿದರೆ, ಈ ಬಿನ್ನಹ ಪೂರ್ಣವಾಗುತ್ತದೆ. ಇದು ಆತನ ಕೃಪೆಯುಳ್ಳ ಒಳ್ಳೇ ಚಿತ್ತವಾಗಿದೆ.

## ನಾಲ್ಕನೆ ಬಿನ್ನಹ.

ಅನುದಿನದ ನಮ್ಮ ರೊಟ್ಟಿಯನ್ನು ಇಂದು ನಮಗೆ ಕೊಡು.

ಹಾಗಂದರೇನು?

ದೇವರು ಅನುದಿನ ಬೇಕಾದ ರೊಟ್ಟಿಯನ್ನು ಪ್ರಾರ್ಥನೆ ಇಲ್ಲದೆ ಸಕಲ ದುಷ್ಟರಿಗೆ ಸಹಾ ಕೊಡುತ್ತಾನೆ, ಆದರೆ ಈ ಉಪಕಾರವನ್ನು ನಾವು ನೆನಸಿ, ಅನುದಿನದ ರೊಟ್ಟಿಯನ್ನು ಕೃತಜ್ಞಾಪನೆಯಿಂದ ತಕ್ಕೊಳ್ಳುವ ಹಾಗೆ, ಈ ವಿಜ್ಞಾಪನೆಯಲ್ಲಿ ಪ್ರಾರ್ಥಿಸುತ್ತೇವೆ.

ಅನುದಿನದ ರೊಟ್ಟಿ ಅಂದರೇನು?

ಶರೀರ ಸಂರಕ್ಷಣೆಯ ಸುಖಗಳಿಗೆ ಬೇಕಾದ ಅನ್ನ ಪಾನ, ವಸ್ತ್ರ ಹೊದಿಕೆ, ಹೊಲ ಮನೆ, ದನ ಕರ, ಹೊನ್ನು ಹಣ, ಹೆಂಡತಿ ಮಕ್ಕಳು, ವಕ್ಕಲು ದಕ್ಕಲು, ಒಳ್ಳೇ ರಾಜ ಪ್ರಧಾನಿಗಳು, ಒಳ್ಳೇ ಫಾಳಿ ಮಳೆ, ಸಮಾಧಾನ ಕ್ಷೇಮ, ವೃತ್ತಿ ಮಾನ, ಒಳ್ಳೇ ಸ್ನೇಹಿತರು ನಂಬಿಕೆಯ ನೆರೆಯವರು ಇತ್ಯಾದಿ.

## ಐದನೆ ಬಿನ್ನಹ.

ನಾವು ಸಹಾ ನಮ್ಮ ಸಾಲಗಾರರಿಗೆ ಬಿಡುವ ಪ್ರಕಾರ, ನೀನು ನಮ್ಮ ಸಾಲಗಳನ್ನು ನಮಗೆ ಬಿಡು.

ಹಾಗಂದರೇನು?

ಈ ವಿಜ್ಞಾಪನೆಯಲ್ಲಿ, ನಾವು ಬೇಡುವವುಗಳಲ್ಲಿ ಒಂದಾದರೂ ಹೊಂದುವದಕ್ಕೆ ಯೋಗ್ಯರಾಗಿಯೂ ಪಾತ್ರರಾಗಿಯೂ ಇರದಿರುವದರಿಂದ, ಸ್ವರ್ಗದಲ್ಲಿರುವ ನಮ್ಮ ತಂದೆಯು ನಮ್ಮ ಪಾಪಗಳನ್ನು ನೋಡದೆಯೂ, ಅವುಗಳಿಗಾಗಿ ನಮ್ಮ ಪ್ರಾರ್ಥನೆಯನ್ನು ಉಪೇಕ್ಷಿಸದೆಯೂ, ದಿನಾಲು ನಾವು ಅನೇಕ ಪಾಪಗಳನ್ನು ಮಾಡುವದರಿಂದ, ಶಿಕ್ಷೆಗೆ ಹೊರ್ತು ಬೇರೆ ಯಾವದಕ್ಕೂ ಅಯೋಗ್ಯರಾದ ನಮ್ಮ ಮೇಲೆ ಕೃಪೆಯುಳ್ಳವನಾಗಿ, ಸಮಸ್ತವನ್ನು ಕೊಡ ಬೇಕೆಂದೂ, ತಿರಿಗಿ ನಾವು ಸಹಾ ನಮಗೆ ವಿರೋಧವಾಗಿ ಅಪರಾಧ ಮಾಡುವವರಿಗೆ ಪೂರ್ಣ ಹೃದಯದಿಂದ ಕ್ಷಮಿಸಿ, ಪ್ರೀತಿಯನ್ನು ತೋರಿಸುವೆವೆಂದೂ ಹೇಳಿ, ಪ್ರಾರ್ಥಿಸುತ್ತೇವೆ.

## ಆರನೆ ಬಿನ್ನಹ.

ಮತ್ತು ನಮ್ಮನ್ನು ಶೋಧನೆಯಲ್ಲಿ ಹೊಗಿಸ ಬೇಡ.

ಹಾಗಂದರೇನು?

ದೇವರು ಯಾರನ್ನಾದರೂ ಶೋಧಿಸುವದಿಲ್ಲ ಸರಿ, ಆದಾಗ್ಯೂ, ಸೈತಾನನೂ ಪ್ರಪಂಚವೂ ನಮ್ಮ ಸ್ವಂತ ಮಾಂಸವೂ ನಮಗೆ ಮೋಸ ಮಾಡಿ, ಅಪನಂಬಿಕೆ ಅವಿಶ್ವಾಸ ನಿರಾಶೆ ಮುಂತಾದ ನಾಚಿಕೆಯನ್ನೂ ದುರ್ವ್ಯಸನಗಳನ್ನೂ ನಮ್ಮಲ್ಲಿ ಹುಟ್ಟಿಸದ ಹಾಗೆ ದೇವರು ನಮ್ಮನ್ನು ಕಾಪಾಡಿ, ಅವುಗಳಿಂದ ತಪ್ಪಿಸಿ, ಅಂಥಾ ಪಾಪಗಳ ಶೋಧನೆ ನಮ್ಮ ಮೇಲೆ ಬಂದರೆ ಸಹಾಯ ಮಾಡಿ, ವಿಜಯ ಕೊಡ ಬೇಕೆಂದು ಈ ವಿಜ್ಞಾಪನೆಯಲ್ಲಿ ಪ್ರಾರ್ಥಿಸುತ್ತೇವೆ.

## ಏಳನೆ ಬಿನ್ನಹ.

ನಮ್ಮನ್ನು ಕೇಡಿನಿಂದ ಎಳಕೊ.

ಹಾಗಂದರೇನು?

ನಮ್ಮ ಪ್ರಾರ್ಥನೆಗಳ ಸಾರವಾದ ಈ ವಿಜ್ಞಾಪನೆಯಲ್ಲಿ, ಸ್ವರ್ಗದಲ್ಲಿರುವ ನಮ್ಮ ತಂದೆಯು ಪ್ರಾಣ ಶರೀರ, ಬದುಕು ಮಾನ ಇತ್ಯಾದಿಗಳ ನಷ್ಟದಿಂದ ನಮ್ಮನ್ನು ರಕ್ಷಿಸಿ, ಕ

ಡೆಯಲ್ಲಿ ನಮಗೆ ಮರಣ ಕಾಲ ಬರುವಾಗ ಮಂಗಳವಾದ ಅಂತ್ಯವನ್ನು ನಮಗೆ ದಯ ಪಾಲಿಸಿ, ಈ ಅಳಲು ತಗ್ಗಿನಿಂದ ಕೃಪೆಯಾಗಿ ನಮ್ಮನ್ನು ಕರ ಕೊಂಡು, ಪರಲೋಕದಲ್ಲಿ ಹೊಗಿಸ ಬೇಕೆಂದು ಪ್ರಾರ್ಥಿಸುತ್ತೇವೆ.

ಸ್ತೋತ್ರ.

ಯಾಕಂದರೆ ರಾಜ್ಯವೂ ಬಲವೂ ಮಹಿಮೆಯೂ ಯುಗಗಳೊಳಗೂ ನಿನ್ನದಾಗಿದೆ. ಆಮೆನ್.

ಹಾಗಂದರೇನು?

ಯಾವನಿಗೆ ರಾಜ್ಯವೂ ಬಲವೂ ಮಹಿಮೆಯೂ ಉಂಟೊ, ಆ ತಂದೆಯಾದ ದೇವರು ನಮ್ಮ ಬಿನ್ನಹಗಳನ್ನು ಕೇಳ ಇಚ್ಛೈಸಿ, ಈ ಪ್ರಕಾರ ಪ್ರಾರ್ಥಿಸ ಬೇಕೆಂದು ತಾನು ನಮಗೆ ಬೋಧಿಸಿದ್ದರಿಂದ, ನಾವು ಈ ಬಿನ್ನಹಗಳು ಆತನಿಗೆ ಇಷ್ಟವಾಗಿ ಆತನ ಕೈಯಿಂದ ಪೂರ್ತಿಯಾಗುವವೆಂದು ನಿಶ್ಚಯವಾಗಿ ತಿಳ ಕೊಂಡು, ಆತನ ನಾಮವನ್ನು ಸ್ತುತಿಸಿ, ಆಮೆನ್ ಆಮೆನ್ ಎಂದು ಹೌದು ಹೌದು, ಹಾಗೆಯೆ ಆಗುವದೆಂದು ಧೈರ್ಯವಾಗಿ ಅರಿಕೆ ಮಾಡುತ್ತೇವೆ.

---

## ಪರಿಶುದ್ಧ ಪ್ರಸಾದಗಳ ವಿಷಯ ಒಟ್ಟಾರೆ.

**೨೨೨.** ಪ್ರಸಾದವೆಂದರೆ, ಸಭೆಯ ಭಾಷೆಯ ಪ್ರಕಾರ, ಪರಿಶುದ್ಧವಾದ ಸಭೆಯ ಕರ್ತವ್ಯ. ಅದರಿಂದ ಇಂದ್ರಿಯ ದೃಶ್ಯವಾದ ಭೂಸಂಬಂಧವಾದ ಗುರ್ತುಗಳ ಒಳಗೂ ಸಂಗಡಲೂ ಪರಿಮುಖವಾಗಿಯೂ ನಮಗೆ ಇಂದ್ರಿಯಪರವಾದ ಸ್ವರ್ಗೀಯ ಕೃಪಾದಾನವು ಸಿಕ್ಕುತ್ತದೆ. ಪ್ರಸಾದದಲ್ಲಿ ದೃಶ್ಯವಾದ ಪದಾರ್ಥಕ್ಕೆ ಅದೃಶ್ಯವಾದ ಕೃಪಾದಾನವು ಕೂಡಿಯದೆ ಎಂಬ ನಿಶ್ಚಯತ್ವಕ್ಕೂ ಭರವಸಕ್ಕೂ ಕ್ರಿಸ್ತನ ಸ್ಥಾಪನೆಯೂ ವಾಗ್ದತ್ತದ ವಾಕ್ಯವೂ ಆಧಾರವಾಗಿರುತ್ತವೆ. ಆದರೆ ನಾವು ಈ ಇಹ ಜೀವದಲ್ಲಿ ಸಂಚರಿಸುವಾಗಲೆ, ಪ್ರಸಾದಗಳಿಂದ ಆತನ ಸಂಗಡ ಅತ್ಯಂತ ಪರಮ ನಿಜವಾದ ಜೀವೈಕ್ಯದಲ್ಲಿ ಸೇರಿ, ಈ ಐಕ್ಯತ್ವದಲ್ಲಿ ಯಾವಾಗಲೂ ಕಾಪಾಡಲ್ಪಡುವ ಹಾಗೆಯೂ ಭದ್ರವಾಗುವ ಹಾಗೆಯೂ ಕ್ರಿಸ್ತನು ಅವುಗಳನ್ನು ಸ್ಥಾಪಿಸಿದನು.

ಪರಿಶಿ. ಗುರ್ತಿಗೂ ಪ್ರಸಾದಕ್ಕೂ ನಿಜವಾಗಿ ಭೇದವದೆ. ಗುರ್ತು, ಇಂದ್ರಿಯಪರವಾದ ಆಲೋಚನೆಗೆ ಇಂದ್ರಿಯದೃಶ್ಯವಾದ ರೂಪವೂ ಸಂಜ್ಞೆಯೂ ಆಗಿರುತ್ತದೆ. ಮತ್ತು ಅದರ ಪ್ರಯೋಜನವು, ಪ್ರತ್ಯಕ್ಷವಾದ ಈಗಲಿರುವ ಗುರ್ತಿನಿಂದ ತಾನು ಯಾವದಕ್ಕೆ ಗು

ರ್ತಾಗಿರುತ್ತದೊ, ಆ ದೂರದಲ್ಲಿರುವ ಅದೃಶ್ಯ ವಸ್ತುವನ್ನು ನೆನಪಿಗೆ ತರುವದಾಗಿರುತ್ತದೆ. ಆದರೆ ಈ ಎರಡರಲ್ಲಿ ನಿಜವಾದ ಏಕೀಕರಣವು ಉಂಟಾಗುವದಿಲ್ಲಾ. ಪ್ರಸಾದದಲ್ಲಿ ಸಹಾ ಇಂದ್ರಿಯ ದೃಶ್ಯವಾದದ್ದು ಇಂದ್ರಿಯ ಪರವಾದದರ ಗುರ್ತಾಗಿರುತ್ತದೆಂಬದು ಸರಿ. ಆದರೆ ಇಂದ್ರಿಯಪರವಾದದ್ದು ಇಂದ್ರಿಯದೃಶ್ಯವಾದದರಿಂದ ದೂರವಾಗಿಯೂ ಭೇದವಾಗಿಯೂ ಇರುವದಿಲ್ಲಾ, ಅದು ಇದರ ಸಂಗಡ ಅತ್ಯಂತವಾಗಿ ಕೂಡಿ ಕೊಂಡು, ಐಕ್ಯವಾಗುತ್ತದೆ. ಆದಕಾರಣ, ಯಾರು ಇಂದ್ರಿಯ ದೃಶ್ಯವಾದ ಗುರ್ತನ್ನು ಪಡ ಕೊಳ್ಳುತ್ತಾನೊ, ಅದರಲ್ಲಿಯೂ ಅದರ ಒಳಗೂ ಸಂಗಡಲೂ ಅದರ ಪರಿಮುಖವಾಗಿಯೂ ಇಂದ್ರಿಯಪರವಾದ ದಾನವನ್ನು ಸಹಾ ಹೊಂದ ತಕ್ಕದ್ದು.

**೩೨೩.** ಅದೃಶ್ಯವಾದ ಇಂದ್ರಿಯ ಪರವಾದ ಕೃಪಾದಾನವನ್ನು (ಇದರ ಸ್ವೀಕಾರವೆ ಪ್ರಸಾದದಲ್ಲಿ ಮುಖ್ಯ) ಕರ್ತನು ಜ್ಞಾನದಿಂದಲೂ ಕೃಪೆಯಿಂದಲೂ ನಮ್ಮ ಇಂದ್ರಿಯ ಸ್ವಭಾವದ ಬಲಹೀನತ್ವಕ್ಕೂ ಬಡತನಕ್ಕೂ ತನ್ನನ್ನು ತಗ್ಗಿಸಿ ಕೊಂಡು, ದೃಶ್ಯ ಇಂದ್ರಿಯಕ್ಕೆ ಶಿಕ್ಕುವ ಗುರ್ತುಗಳಲ್ಲಿ ಕೊಟ್ಟಿದ್ದಾನೆ. ಹೀಗಾಗಿ, ನಾವು ಅವುಗಳ ಪರಿಮುಖವಾಗಿ ನಮ್ಮ ಇಂದ್ರಿಯಗಳಿಂದ ಅದನ್ನು ಅಂಗೀಕರಿಸಿ, ಶಿಕ್ಕಿತು ಎಂಬದಕ್ಕೆ ಇಂದ್ರಿಯಗಳಿಂದ ಸಹಾ ನಿಶ್ಚಯವಾಗುವ ಹಾಗೆ, ಅದನ್ನು ಮಾಡಿದ್ದಾನೆ.

ಪರಿಶಿ. ಪರಲೋಕದ ಕೃಪಾದಾನದ ಅಂಗೀಕಾರಕ್ಕೆ ಮಾತ್ರವಲ್ಲ, ಆಶೀರ್ವಾದಕ್ಕೆ ಸಹಾ ನಮ್ಮ ವಿಶ್ವಾಸವು ಸಹೇತುವಾಗಿರುತ್ತದೆ. ವಿಶ್ವಾಸದಿಂದ ಅಂಗೀಕರಿಸಿ ಪ್ರಯೋಗಿಸುವವನಿಗೆ ಮಾತ್ರವೆ ಅದು ರಕ್ಷಣೆಗಾಗಿರುವದು. ಆದರೆ ಅವಿಶ್ವಾಸಿಗೂ ಅಲಕ್ಷಿಸುವವನಿಗೂ ಅದು ಶಿಕ್ಷೆ ನಿರ್ಣಯಕ್ಕೆ ಆಗಿರುವದು.

**೩೨೪.** ಹೊರಗಿನ ಗುರ್ತು—ಪ್ರತಿಷ್ಠೆಯಿಂದ, ಅಂದರೆ, ನೇಮಕ ವಾಗ್ದತ್ತಗಳ ವಾಕ್ಯಗಳನ್ನು, ಕಡಿಮೆ ಮಾಡದೆ ಬೆರಿಕೆ ಮಾಡದೆ, ಅದರ ಮೇಲೆ ಉಚ್ಚರಿಸುವದರಿಂದ—ಪ್ರಸಾದವಾಗುತ್ತದೆ. ಮೇಜಿನ ಸೇವಕನು ವಸ್ತುವನ್ನು ಪ್ರಸಾದವಾಗ ಮಾಡುತ್ತಾನೆಂಬ ಹಾಗಲ್ಲ; ಆತನು ಕ್ರಿಸ್ತನ ಹೆಸರಿನಲ್ಲಿಯೂ ಅಪ್ಪಣೆಯಿಂದಲೂ ಮಾತಾಡುವ ಕ್ರಿಸ್ತನ ವಾಕ್ಯವು ಮುಂಚೆಯೆ ಇರುವ ಪರಲೋಕದ ಕೃಪಾದಾನವನ್ನು ಮುಂದಿಟ್ಟ ಭೂಸಂಬಂಧವಾದ ವಸ್ತುವಿಗೆ ಕೂಡಿಸುತ್ತದೆ. ಹೀಗಾಗಿ ಅವನ ವಿಶ್ವಾಸವಾಗಲಿ ಅವನ ಭಕ್ತಿಯಾಗಲಿ ಪ್ರಸಾದದ ಆಶೀರ್ವಾದದಲ್ಲಿಯೂ ಕರಣಿಯಲ್ಲಿಯೂ ಏನೂ ಹೆಚ್ಚಿಸುವದಿಲ್ಲಾ; ಅದೆ ಪ್ರಕಾರ ಅವನ ಅವಿಶ್ವಾಸವಾಗಲಿ ಅವನ ಅಯೋಗ್ಯತೆಯಾಗಲಿ ಅದರಲ್ಲಿ ಕಡಿಮೆ ಮಾಡುವದೂ ಇಲ್ಲಾ.

ಪರಿಶಿ. ವಸ್ತುವಿಗೆ ವಾಕ್ಯವು ಬರಲಾಗಿ, ಪ್ರಸಾದವಾಗುತ್ತದೆ.

**೩೨೫.** ಎಲ್ಲಾ ಜೀವಕ್ಕೆ, ಅದಿರ ಬೇಕಾದರೆ, ಎರಡು ಬೇಕು.—ಜನ್ಮ ಮತ್ತು ಪೋಷಣ. ಹಾಗೆಯೆ ಪ್ರಸಾದದ ಕರಣದಿಂದುಂಟಾಗುವ ಹೊಸ ಆತ್ಮಿಕ ಜೀವ ಸಹಾ ಇರುತ್ತದೆ. ಆದಕಾರಣ ಎರಡು—ಎರಡೇ ಪ್ರಸಾದಗಳು ಇರ ಬೇಕು. ಒಂದರಿಂದ ನಾವು ಹೊಸ ಜೀವದಲ್ಲಿ ಶೇರುತ್ತೇವೆ. ಇದು ನೀರಿನಿಂದಲೂ ಆತ್ಮದಿಂದಲೂ (ಸ್ನಾನದಿಂದ) ಆಗುತ್ತದೆ. ಮತ್ತೊಂದರಿಂದ ಹೊಸ ಜೀವಕ್ಕೆ ಪೋಷಣವೂ ವೃದ್ಧಿಯೂ ಬರುತ್ತದೆ. ಇದು ರಾತ್ರಿಭೋಜನದಿಂದಾಗುತ್ತದೆ. ಇದರಿಂದಲೆ, ಸ್ನಾನವು ಏಕಾವರ್ತಿ ಆಗ ಬೇಕೆಂಬದೂ, ರಾತ್ರಿಭೋಜನವು ಅನೇಕಾವರ್ತಿ ತಿರಿಗಿ ತಿರಿಗಿ ನಡಿಯ ಬೇಕೆಂಬದೂ ಸಾಧ್ಯವಾಗುತ್ತದೆ.

---

# ಪರಿಶುದ್ಧ ಸ್ನಾನದ ಪ್ರಸಾದ.

## (೪ನೆ ಮುಖ್ಯ ಭಾಗ.)

### ಒಂದನೆ.

ಸ್ನಾನವೆಂದರೇನು?

ಸ್ನಾನವು ಬರೇ ನೀರಲ್ಲಾ; ಅದು ದೇವರ ಕಟ್ಟಳೆಯಲ್ಲಿ ಇಟ್ಟಿರುವಂಥಾ, ದೇವರ ವಾಕ್ಯದ ಸಂಗಡ ಕೂಡಿರುವಂಥಾ ನೀರಾಗಿರುತ್ತದೆ.

ಅಂಥಾ ದೇವರ ವಾಕ್ಯವು ಯಾವದು?

ನಮ್ಮ ಕರ್ತನಾದ ಕ್ರಿಸ್ತನು ಮತ್ತಾಯನ ಕಡೇ ಸಂಧಿಯಲ್ಲಿ ಹೇಳಿದ್ದು (೨೮, ೧೯.) "ನೀವು ಹೊರಟು ಹೋಗಿ ಸಮಸ್ತ ಜನಾಂಗಗಳನ್ನು ಶಿಷ್ಯರಾಗ ಮಾಡಿ, ತಂದೆ ಮಗ ಪರಿಶುದ್ಧಾತ್ಮನ ಹೆಸರಿನಲ್ಲಿ ಅವರಿಗೆ ಸ್ನಾನ ಕೊಟ್ಟು, ನಾನು ನಿಮಗೆ ಆಜ್ಞಾಪಿಸಿದವುಗಳನ್ನೆಲ್ಲಾ ಕೈಕೊಳ್ಳುವದಕ್ಕೆ ಅವರಿಗೆ ಬೋಧಿಸಿರಿ."

ಈ ವಾಕ್ಯವನ್ನು ಸಮವಾಗಿ ಈ ಪ್ರಕಾರ ಸಹಾ ಭಾಷಾಂತರ ಮಾಡ ಬಹುದು. "ಆದ್ದರಿಂದ ಹೊರಟು ಹೋದವರಾಗಿ, ಎಲ್ಲಾ ಜನಾಂಗಗಳನ್ನು, ಅವರನ್ನು ತಂದೆಯ ಮತ್ತು ಮಗನ ಮತ್ತು ಪರಿಶುದ್ಧಾತ್ಮನ ಹೆಸರಿನೊಳಗೆ ಸ್ನಾನಿಸುವವರಾಗಿ, ನಾನು ನಿಮಗೆ ಆಜ್ಞಾಪಿಸಿದವುಗಳನ್ನೆಲ್ಲಾ ಕೈಕೊಳ್ಳ ಅವರನ್ನು ಬೋಧಿಸುವವರಾಗಿ, ಶಿಷ್ಯರಾಗ ಮಾಡಿರಿ."

**೩೨೬.** ತಂದೆಯ ಮತ್ತು ಮಗನ ಮತ್ತು ಪರಿಶುದ್ಧಾತ್ಮದ ಹೆಸರಿನೊಳಗೆ (**೪೨.**) ಸ್ನಾನ ಹೊಂದುವದಂದರೆ, ಸ್ನಾನದಿಂದ ತ್ರಿಯೇಕನಾದ ದೇವರ ಅನ್ಯೋನ್ಯದಲ್ಲಿ ಒಳನೆಡಲ್ಪಟ್ಟು, ತಂದೆಯು ನೇಮಿಸಿದಂಥಾ, ಮಗನು ಪೂರೈಸಿದಂಥಾ, ಪರಿಶುದ್ಧಾತ್ಮವು ಹಂಚಿ ಸ್ವೀಕಾರವಾಗ ಮಾಡುವಂಥಾ, ರಕ್ಷಣೆಯಲ್ಲಿ ಪಾಲು ಹೊಂದುವದಾಗಿರುತ್ತದೆ.

**೩೨೭.** ಕ್ರೈಸ್ತ ಸ್ನಾನವು ಪ್ರಸಾದವಾಗಿರುತ್ತದೆ. ಹ್ಯಾಗಂದರೆ, ಕ್ರಿಸ್ತನ ನೇಮಕದಿಂದಲೂ ವಾಗ್ದತ್ತದಿಂದಲೂ ಇಂದ್ರಿಯ ದೃಶ್ಯವಾದ ನೀರಿನ ಸಂಗಡ ಅದರಲ್ಲಿ ಸೂಚಿಸಿಇರುವ ಇಂದ್ರಿಯ ಪರವಾದ ದಾನವು (**೩೨೮. ೩೩೧.**) ವಾಕ್ಯದ ಆಧಾರದಿಂದ ನಿಜವಾಗಿ ಕೂಡುತ್ತದೆ. ಆದಕಾರಣ ಸ್ನಾನವು ಎಲ್ಲಾ ಮಿಕ್ಕಾದ ಧರ್ಮಗಳ ಬರೇ ಗುರ್ತುಗಳಾಗಿರುವ ಸ್ನಾನಗಳಿಂದ ಅನಂತವಾಗಿ ವ್ಯತ್ಯಾಸವಾಗಿರುತ್ತದೆ. ಯೋಹಾನನ ಸ್ನಾನ ಸಹಾ, ಬರೇ ಮುಂಗುರ್ತಾಗಿದ್ದು ಪ್ರಸಾದವಾಗಿರಲಿಲ್ಲ. ಹ್ಯಾಗಂದರೆ ಅದು ರಕ್ಷಣೆಯನ್ನು ನಿಜವಾಗಿ ಕೊಡದೆ, ಅದಕ್ಕೆ ಬೆರಳು ತೋರಿಸಿ, ಅದರ ಮೇಲೆ ಅಭಿಲಾಷೆಯನ್ನು ಹುಟ್ಟಿಸತಕ್ಕದ್ದಾಗಿತ್ತು. ಆದರೂ ಧರ್ಮಸಂಬಂಧವಾದ ಅನ್ಯ ಸ್ನಾನಗಳಿಂದ ಅದು ಸಹಾ ಪೂರ್ಣ ಬೇರೆಯಾಗಿತ್ತು. ಹ್ಯಾಗಂದರೆ, ಅದು ದೇವರಿಂದ ನೇಮಿಸಲ್ಪಟ್ಟದ್ದಾಗಿ, ನಿಶ್ಚಯವಾಗಿಯೂ ಸ್ವಲ್ಪ ಕಾಲದೊಳಗೂ ಬರುವ ರಕ್ಷಣೆಯ ಕಡೆಗೆ ದಿವ್ಯ ನಿಶ್ಚಯತ್ವದಿಂದ ಬೆರಳು ತೋರಿಸಿತು.

ಪರಿಶಿ. ೧. ಯೋಹಾನನ ಸ್ನಾನಕ್ಕೂ ಕ್ರೈಸ್ತಸ್ನಾನಕ್ಕೂ ಇರುವ ಹೆಚ್ಚು ಕಡಿಮೆಯನ್ನು ಯೋಹಾನನು ತಾನೇ ಹೇಳುತ್ತಾನೆ. "ನಾನು ನೀರಿನಿಂದ ಮಾನಸಾಂತರಕ್ಕೋಸ್ಕರ ನಿಮಗೆ ಸ್ನಾನ ಕೊಡುತ್ತೇನೆ; ಆದರೆ ನನ್ನ ಹಿಂದೆ ಬರುವವನು ನನಗಿಂತ ಶಕ್ತನು; ಅವನು ಪರಿಶುದ್ಧಾತ್ಮದಿಂದಲೂ ಬೆಂಕಿಯಿಂದಲೂ ನಿಮಗೆ ಸ್ನಾನ ಕೊಡುವನು." (ಮತ್ತಾ. ೩, ೧೧.) (ಸಮ ನೋಡು ಅ. ಕ್ರಿ. ೧೯, ೪.) ಆತನ ಉದ್ಯೋಗವು ರಕ್ಷಣೆಯನ್ನೆ ಕೊಡುವದಾಗಿ ಅಲ್ಲ, ಮನುಷ್ಯರ ಮನಸ್ಸುಗಳನ್ನು ಮಾನಸಾಂತರದ ಪ್ರಸಂಗದಿಂದಲೂ, ಅದರ ಗುರ್ತಾಗಿರುವ ಉದಕ ಸ್ನಾನದಿಂದಲೂ ರಕ್ಷಣೆಗೆ ಸಿದ್ಧ ಮಾಡುವದಾಗಿತ್ತು. ಅದರ ಹೊರ್ತು ರಕ್ಷಣೆಯು ಇನ್ನೂ ಪೂರ್ಣವಾಗಿ ಇರಲಿಲ್ಲ, ಪರಿಶುದ್ಧಾತ್ಮ ಇನ್ನೂ ಹೊಯ್ದು ಇರಲಿಲ್ಲ. ಆದ್ದರಿಂದ ಎಫೆಸದಲ್ಲಿದ್ದ ಯೋಹಾನ ಶಿಷ್ಯರು ಯೋಹಾನ ಸ್ನಾನ ಹೊಂದಿದ್ದಾಗ್ಯೂ, ತಿರಿಗಿ ಸ್ನಾನ ತಕ್ಕೊಳ್ಳ ಬೇಕಾಯಿತು. (ಅ. ಕ್ರಿ. ೧೯, ೩. ೫.)

ಪರಿಶಿ. ೨. ಸ್ನಾನದ ಪ್ರಸಾದಕ್ಕೆ ನೀರು ಗುರ್ತಾಗಿ ತಕ್ಕೊಂಡದ್ದು ಅಕಸ್ಮಾತ್ತಾಗಿರುವದಿಲ್ಲಾ. ನೀರಿನ ಸ್ವಾಭಾವಿಕ ಕರಣೆಯು ಸ್ನಾನ ಕೃಪೆಯ ಸ್ವಭಾವಪರವಾದ ಕರಣೆಗೆ ಸಮ ಬೀಳುವದರಿಂದ, ನೀರು ಸ್ನಾನ ಕೃಪೆಯ ವಾಹನವಾಗಲಿಕ್ಕೆ ಭೂಮಿಯ ಸಮಸ್ತ ಭೂತಗಳಲ್ಲಿ ಯೋಗ್ಯವಾಗಿರುತ್ತದೆ. ಸ್ನಾನದ ನೀರು ಶುದ್ಧ ಮಾಡುವಂಥಾದ್ದಾಗಿ ಮಾತ್ರ

ವಲ್ಲಾ, ಮುಖ್ಯವಾಗಿ ಹುಟ್ಟಿಸುವಂಥಾದ್ದಾಗಿಯೂ, ಫಲ ಭರಿತ ಮಾಡುವಂಥಾದ್ದಾಗಿಯೂ, ಜೀವ ಉಂಟು ಮಾಡುವಂಥಾದ್ದಾಗಿಯೂ, ಪುನರ್ಜನ್ಮ ಉಂಟು ಮಾಡುವಂಥಾದ್ದಾಗಿಯೂ ಆಲೋಚಿಸ ತಕ್ಕದ್ದು. ಈ ಆಲೋಚನೆಯು (ನೀರನ್ನು ಧರ್ಮಕಾರ್ಯಗಳಲ್ಲಿ ಪ್ರಯೋಗಿಸುವಾಗ್ಯೆ ಹ್ಯಾಗೂ) ಪೂರ್ವಜರಿಗೆ ಸಮೀಪವಾಗಿತ್ತು. ಮತ್ತು ದೇವರ ವಾಕ್ಯದಲ್ಲಿ, ಪ್ರಕೃತಿಯಲ್ಲಿ ಹ್ಯಾಗೊ ಹಾಗೆಯೆ, ಸ್ಪಷ್ಟವಾಗಿ ಆಧಾರಗೊಳ್ಳುತ್ತದೆ. (ಸಮ ನೋಡು ೨ಪೇತ್ರ. ೩,೫. ಉತ್ಪ. ೧,೨. ೨೦. ೨,೫. ಯೋಬ್. ೧೪,೮.)

## ಎರಡನೆ.

ಸ್ನಾನವು ಏನು ಕೊಡುತ್ತದೆ? ಯಾವದಕ್ಕೆ ಉಪಯೋಗ?

ದೇವರ ವಾಕ್ಯಗಳೂ ವಾಗ್ದತ್ತವೂ, ಬರಹದ ಪ್ರಕಾರ, ವಿಶ್ವಾಸಿಸುವವರೆಲ್ಲರಿಗೆ ಪಾಪಗಳ ಕ್ಷಮೆಯನ್ನು ಯತ್ನೈಸಿ, ಮರಣದಿಂದಲೂ ಸೈತಾನನಿಂದಲೂ ಬಿಡಿಸಿ, ನಿತ್ಯಭಾಗ್ಯವನ್ನು ಕೊಡುತ್ತದೆ.

ದೇವರ ಆ ವಾಕ್ಯಗಳೂ ವಾಗ್ದತ್ತಗಳೂ ಯಾವವು?

ನಮ್ಮ ಕರ್ತನಾದ ಕ್ರಿಸ್ತನು ಮಾರ್ಕನ ಕಡೆಯಲ್ಲಿ ಹೇಳುವದೇನಂದರೆ (೧೬, ೧೬.) "ವಿಶ್ವಾಸಿಸಿ ಸ್ನಾನ ಹೊಂದುವವನು ರಕ್ಷಿಸಲ್ಪಡುವನು, ಆದರೆ ವಿಶ್ವಾಸಿಸದವನು ಆಜ್ಞೆನಿರ್ಣಯ ಪಡುವನು."

**೩೨೮.** ಸ್ನಾನದಲ್ಲಿ ಪರಿಶುದ್ಧಾತ್ಮದ ಕ್ರೈಯಿಂದ, ಕ್ರಿಸ್ತನು ತನ್ನ ಜೀವ ಶ್ರಮ ಮರಣಗಳಿಂದಲೂ ದೇವರ ಬಲಪಾರ್ಶ್ವದಲ್ಲಿ ಕೂತು ಕೊಳ್ಳುವದರಿಂದಲೂ ದುಡಿದು ಸಿದ್ಧ ಮಾಡಿದ ಸಮಸ್ತ ರಕ್ಷಣೆಯ ವಸ್ತುಗಳನ್ನು ಪಡ ಕೊಳ್ಳುತ್ತೇವೆ. ದೇವರ ಬುದ್ಧಿಯುಳ್ಳ ಕ್ಷೇಮಕರವಾದ ಕ್ರಮವು ಆ ವಸ್ತುಗಳನ್ನು ಹೊಂದುವದನ್ನು ಸ್ನಾನಕ್ಕೆ ಕಟ್ಟಿಯದೆ. ಮತ್ತು ಈ ಜೀವದಲ್ಲಿ ಅವುಗಳನ್ನು ಪಡ ಕೊಳ್ಳುವದಕ್ಕೆ ಸ್ನಾನವಲ್ಲದೆ ಬೇರೆ ಯಾವ ಕರಣವಾದರೂ ಬೇರೆ ಯಾವ ಮಾರ್ಗವಾದರೂ ಇರುವದಿಲ್ಲಾ. ಅದನ್ನು ತಿರಸ್ಕರಿಸುವವನು ಎಲ್ಲಾ ಮನುಷ್ಯರಿಗೋಸ್ಕರ ನಿಶ್ಚೈಸಿರುವ ವಿಮೋಚನೆಯನ್ನೂ ನಿತ್ಯಜೀವವನ್ನೂ ಕಳ ಕೊಳ್ಳುತ್ತಾನೆ.

ಪರಿಶಿ. ೧. ನಮಗೆ ಸ್ನಾನದ ಅವಶ್ಯತ್ವವು ಪೂರ್ಣ ನಿರುಪಾಧಿಕವಾಗಿ ಹೇಳಿಯದೆ. ಆದರೆ ಸ್ವಂತ ಅಪರಾಧವಿಲ್ಲದೆ ಯಾರಾದರೂ ಸ್ನಾನ ಹೊಂದದೆ ಸತ್ತರೆ, ಅದಕ್ಕಾಗಿ ಅವರು ಕೇವಲ ಆಶಾಭಗ್ನರಾಗಿ ಎಂದೆಂದಿಗೂ ನಾಶವಾಗುತ್ತಾರೆಂತ ಹೇಳಲಾಗದು. ಸ್ನಾನದ ನೇಮಕದಿಂದ ನಾವು ಬದ್ಧರಾಗಿರುತ್ತೇವೆ, ಆದರೆ ದೇವರಲ್ಲಾ ಈ ಜೀವದಲ್ಲಿ ಸ್ನಾನದ ನೀರಿಗೆ ರಕ್ಷಣೆಯ ಬಾಧ್ಯತೆಯನ್ನು ಕಟ್ಟಿದ ಆತನ ಜ್ಞಾನವೂ ಕೃಪೆಯೂ, ಸ್ನಾನದ ನೀ

ರು ಇಲ್ಲದೆ ಸ್ನಾನ ಕೃಪೆಯನ್ನು, ಸ್ವಂತ ಅಪರಾಧವಿಲ್ಲದೆ ಅದನ್ನು ಪಡದಿರುವವರಿಗೆ, ಕೊ
ಡಲಿಕ್ಕೆ ಕರಣಗಳನ್ನೂ ಮಾರ್ಗಗಳನ್ನೂ ಮಾಡಿರ ಬಹುದು. ಆದಕಾರಣ ಕೋಟ್ಯಾ
ನು ಕೋಟಿ ಅನ್ಯ ಜನರ ವಿಷಯದಲ್ಲಿಯೂ, ಸ್ನಾನ ಹೊಂದದೆ ಸತ್ತ ಕ್ರೈಸ್ತ ಮಕ್ಕಳ
ವಿಷಯದಲ್ಲಿಯೂ (೧ ಕೊರಿ. ೭, ೧೪.), ಅವರು ಅದಕ್ಕಾಗಿಯೆ ನಾಶವಾಗುತ್ತಾರೆಂದು
ನಾವು ಹೇಳಲಾಗದು. ಆದರೆ ಈ ಸ್ನಾನ ಕೃಪೆಯು ದೇವರು ಮಾಡಿದ ಮಾರ್ಗವಾಗಿ
ಇಹದಲ್ಲಿ ಅವರಿಗೆ ಶಿಕ್ಕದೆ ಹೋದದ್ದಕ್ಕೆ ನಮ್ಮ ಉಗುರುಬೆಚ್ಚಗೆತನವೂ ಹಗುರತನವೂ
ಕಾರಣವಾಗಿರುವದರಿಂದ ದುಃಖ ಪಡ ತಕ್ಕದ್ದು. ಆದರೆ (ಅವಿಶ್ವಾಸದಿಂದಾಗಲಿ ಆಲಸ್ಯ
ದಿಂದಾಗಲಿ) ಬೇಕೆಂದು ಸ್ನಾನವನ್ನು ಹೊಂದದವರಿಗೆ ಆಜ್ಞೆನಿರ್ಣಯವು ನಿಶ್ಚಯ.

ಪರಿಶಿ. ೨. ಸ್ನಾನವು ನಿಜವಾದ ಪ್ರಸಾದವಾಗಿರುವದರಿಂದಲೂ, ಸ್ನಾನವನ್ನು ಇಹ
ಜೀವಕ್ಕೆ ನಿಶ್ಚೈಸಿದ ದೇವರ ನೇಮಕಕ್ಕೆ ನಾವು ವಿಧೇಯವಾಗಿರ ಬೇಕಾದ್ದರಿಂದಲೂ, ಈ
ಗಿನ ಸ್ಥಿತಿಗಳ ಪ್ರಕಾರ ವಿಶೇಷವಾಗಿ ಹೊಸ್ತಾಗಿ ಹುಟ್ಟಿದ ಮಕ್ಕಳಿಗೆ ಮಾತ್ರವೆ ಕೊಡ
ತಕ್ಕ ಅನುಪತ್ಯಸ್ನಾನವು ಅವಶ್ಯವಾಗಿರುತ್ತದೆ. ವಾಕ್ಯದ ಉದ್ಯೋಗವಿರುವ ಬೋಧಕ
ನು ಬರುವಷ್ಟರೊಳಗೆ, ಸ್ನಾನ ಹೊಂದದೆ ಮಗುವು ಸತ್ತು ಹೋದೀತೆಂಬ ಭಯವಿದ್ದರೆ,
ತಂದೆ ತಾಯಿಗಳಾಗಲಿ ಮಗುವಿನ ಪಾಲಕರಾಗಲಿ ಅನುಪತ್ಯ ಸ್ನಾನವನ್ನು ಮಾಡ ತಕ್ಕದ್ದು
ಇದನ್ನು ಮಾಡಲಿಕ್ಕೆ ಪ್ರಾಯಸ್ಥನಾದ ಒಬ್ಬೊಬ್ಬ ಕ್ರೈಸ್ತನು (ಗಂಡಸು ಇಲ್ಲದಿದ್ದರೆ ಕ್ರೈ
ಸ್ತ ಹೆಂಗಸು ಸಹಾ) ಸ್ವತಂತ್ರಿಯಾಗಿರುತ್ತಾನೆ, ಮತ್ತು ಮನಸ್ಸಾಕ್ಷಿಯಿಂದ ಅದನ್ನು
ಮಾಡುವ ಹಂಗಿಗೆ ಒಳಗಾಗುತ್ತಾನೆ. ಈ ಅನುಪತ್ಯಸ್ನಾನವು ಬೇರೇನೂ ವಿಶೇಷ ಕರ್ಮ
ಗಳಿಲ್ಲದೆ, ಒಂದು ಸಣ್ಣ ಪ್ರಾರ್ಥನೆ (ಹಾಗೆ ಕರ್ತನ ಪ್ರಾರ್ಥನೆ) ಮಾಡಿ, ಸ್ನಾನ ಕೊಡು
ವವನು ಮಗುವನ್ನು ಮೂರು ಸಾರಿ ನೀರಿನಿಂದ ಚಿಮಿಕಿಸಿ "(ಇಂಥವನೇ ಅಥವಾ ಇಂಥ
ವಳೇ) ನಾನು ನಿನಗೆ ತಂದೆ ಮಗ ಪರಿಶುದ್ಧಾತ್ಮನ ಹೆಸರಿನಲ್ಲಿ ಸ್ನಾನ ಕೊಡುತ್ತೇನೆ" ಎಂ
ತ ಹೇಳಿ, ಕಡೆಯಲ್ಲಿ ತ್ರಿಯೇಕನಾದ ದೇವರ ಆಶೀರ್ವಾದವನ್ನು ಇಡುತ್ತಾನೆ. (೨ ಕೊರಿ.
೧೩, ೧೩. ಅಂಕೆ. ೬, ೧೪—೨೬.) ಆ ಮಗುವು ಜೀವದಲ್ಲಿ ಉಳಿದರೂ, ಆ ಸ್ನಾನವು
ಪೂರ್ಣವಾಗಿ ಸಲ್ಲ ತಕ್ಕದ್ದು; ಪುನಃಸ್ನಾನವು ಅವಶ್ಯವಲ್ಲಾ, ಆದರೆ ಒಳ್ಳೇ ಕ್ರಮದ ಪ್ರ
ಕಾರ ದೇವರ ವಾಕ್ಯದ ನೇಮಕವಾದ ಸೇವಕನಿಂದ ಸಭೆಯ ರೀತಿಯಲ್ಲಿ ಅದನ್ನು ಸ್ಥಿರ ಪ
ಡಿಸುವದು ತಕ್ಕದ್ದಾಗಿರುತ್ತದೆ.

**೩೨೯.** ಆದರೆ ವಿಶ್ವಾಸವಿಲ್ಲದೆ ಸ್ನಾನ ಸಹಾ ಏನೂ ಪ್ರಯೋಜನವಿಲ್ಲ ಮಾ
ತ್ರವಲ್ಲಾ, ಅದರಿಂದ ಸ್ವಾಭಾವಿಕವಾದ ಶಿಕ್ಷೆನಿರ್ಣಯ ಯೋಗ್ಯತೆಯು ಹೆಚ್ಚಾಗುತ್ತದೆ.
ಯಾರು ತ್ರಿಯೇಕನಾದ ದೇವರ ಹೆಸರಿನಲ್ಲಿ ಕ್ರಿಸ್ತನ ನೇಮಕದ ಪ್ರಕಾರ ಸ್ನಾನ ಹೊಂದಿ
ದ್ದಾನೊ, ಅಂಥವನು ವಿಶ್ವಾಸಿಸಿದರೂ. ವಿಶ್ವಾಸಿಸದಿದ್ದರೂ, ಅವನಿಗೆ ರಕ್ಷಣೆಯ ವಸ್ತು

ಗಳು ಹತ್ರ ಬಂದವೆ. ಆದರೆ ಯಾರು, ಅವುಗಳು ತನಗೆ ಹತ್ರ ಬಂದವೆ ಎಂದು ನಂಬು ವದಿಲ್ಲವೊ, ಮತ್ತು ವಿಶ್ವಾಸದಲ್ಲಿ ಅವುಗಳನ್ನು ಸ್ವೀಕರಿಸಿ ಪ್ರಯೋಗಿಸುವದಿಲ್ಲವೊ, ಅಂಥವನು ಹ್ಯಾಗೂ ನಾಶವಾಗುತ್ತಾನೆ. ಒಬ್ಬನು ಬಹಳ ಐಶ್ವರ್ಯ ನಿಧಿಯ ಬಾಧ್ಯನಾಗಿದ್ದರೂ, ಅದನ್ನು ತಿಳಿಯದೆಯೂ ನಂಬದೆಯೂ ಹೋದರೆ, ತನ್ನ ಸಂಪತ್ತಿನ ಆಧಿಕ್ಯದಲ್ಲಿ ಹಸಿವೆಯಿಂದ ಸಾಯುವ ಬಡವನಂತೆ ಹ್ಯಾಗೆ ಇದ್ದಾನೊ, ಹಾಗೆಯೆ ನಂಬದ ಕ್ರೈಸ್ತನು.

**೩೩೦.** ವಿಶ್ವಾಸಿಸಿ ಸ್ನಾನ ಹೊಂದುವವನು ರಕ್ಷಿಸಲ್ಪಡುವನು; ಆದರೆ ವಿಶ್ವಾಸಿಸದವನು, ಸ್ನಾನ ಹೊಂದಿದರೂ ಹೊಂದದಿದ್ದರೂ, ಆಜ್ಞೆನಿರ್ಣಯ ಪಡುವನು. (ಮಾರ್ಕ. ೧೬, ೧೬.) ಸ್ನಾನಕ್ಕೆ ಕೂಡ ತಕ್ಕ ವಿಶ್ವಾಸವು ಇಮ್ಮಡಿಯಾದದ್ದು. ಮುನ್ನಡಿಯು ವಂಥಾದ್ದು (ಪುರೋಗತ); ಇದು ಸ್ನಾನವನ್ನು ಸಮವಾಗಿ ಹೊಂದುವದಕ್ಕೆ ಔಪಾಧಿಕವಾಗಿರುತ್ತದೆ. ಎರಡನೆ ಹಿಂಬಾಲಿಸುವಂಥಾದ್ದು (ಅನುಗತ); ಇದು ಸಮವಾಗಿ ಹೊಂದಿದ ಸ್ನಾನದ ಫಲವಾಗಿರುತ್ತದೆ. ರಕ್ಷಣೆಯ ಅನುಭವವಲ್ಲ, ತಿಳುವಿಕೆ ಮಾತ್ರವೇ; ಕ್ರೈಸ್ತ ಜೀವದಲ್ಲಿ ಸಾಧಿಸಿ ಕೊಂಡ ಪೂರ್ಣ ವಿಶ್ವಾಸವಲ್ಲಾ, ಸಮ್ಮತಿಯೂ ಅಪೇಕ್ಷೆಯೂ ಅಭಿಲಾಷೆಯೂ ಸ್ನಾನಕ್ಕೆ ಔಪಾಧಿಕಗಳಾಗಿರುತ್ತವೆ. ಇದು ಸ್ವಾಭಾವಿಕ ಮನುಷ್ಯನಲ್ಲಿ, ಅವನಿಗೆ ರಕ್ಷಣೆಯ ವಸ್ತುಗಳು ಸಿಕ್ಕುವ ಮೊದಲೆ, ಉಂಟಾಗ ಬಹುದು. ಅವುಗಳನ್ನು ಪೂರ್ಣ ಆಶೀರ್ವಾದದೊಡನೆ ಹೊಂದ ಬೇಕಾದರೆ, ಎಬ್ಬಿಸಲ್ಪಡುವದು ಅವಶ್ಯ. ಆದರೆ ಅದನ್ನು ಸಮವಾಗಿ ಪಡ ಕೊಂಡು ಸಮವಾಗಿ ಪ್ರಯೋಗಿಸುವ ರಕ್ಷಣೆಯ ವಸ್ತುಗಳ ಫಲವಾಗಿಯೂ ಕೃತ್ಯವಾಗಿಯೂ (ಅಂದರೆ ಪ್ರಕಾಶೀಕರಣದಲ್ಲಿಯೂ ನಿತಿನಿರ್ಣಯದಲ್ಲಿಯೂ ಪರಿಶುದ್ಧೀಕರಣದಲ್ಲಿಯೂ) ಸಿಕ್ಕ ಬಹುದು. ಪುರೋಗತ ವಿಶ್ವಾಸವು ಸ್ನಾನದ ಬೀಜಕ್ಕೆ ಒಳ್ಳೇ ಫಲ ಕೊಡುವ ಭೂಮಿಯಾಗಿರುತ್ತದೆ; ಅನುಗತ (ಅಥವಾ ರಕ್ಷಿಸುವ) ವಿಶ್ವಾಸವು ಆ ಬೀಜದಿಂದ ಹುಟ್ಟುವ ಫಲವಾಗಿರುತ್ತದೆ. (ಅ. ಕ್ರಿ. ಲ, ೨೯. ಇತ್ಯಾದಿ.)

## ಮೂರನೆ.

### ನೀರಿನಿಂದ ಅಂಥಾ ದೊಡ್ಡ ಕಾರ್ಯಗಳು ಆಗುವದು ಹ್ಯಾಗೆ?

ನೀರಿನಿಂದಲೆ ಆಗದು. ಆದರೆ ನೀರಿನ ಸಂಗಡಲೂ ನೀರಿನ ಹತ್ರಲೂ ಇರುವ ದೇವರ ವಾಕ್ಯದಿಂದಲೂ, ಈ ವಾಕ್ಯದಲ್ಲಿ ನಂಬುವ ವಿಶ್ವಾಸದಿಂದಲೂ ಆಗುತ್ತದೆ. ದೇವರ ವಾಕ್ಯವು ಇಲ್ಲದಿದ್ದರೆ, ಆ ನೀರು ಬರೇ ನೀರು, ಸ್ನಾನವಲ್ಲ; ಆದರೆ ದೇವರ ವಾಕ್ಯವು ಇದ್ದರೆ ಅದು ಸ್ನಾನವು, ಹಾಗಂದರೆ, ಜೀವದ ದಯಾ ಪೂರಿತ ನೀರೂ ಪರಿಶುದ್ಧಾತ್ಮದಲ್ಲಿ

ರುವ ಹೊಸ ಜನ್ಮದ ಮಜ್ಜನವೂ ಆಗಿದೆ. ಹಾಗೆಯೆ ಪೌಲನು ತೀತನಿಗೆ ೩, ೫ರಲ್ಲಿ ಹೇಳುವದೇನಂದರೆ: "ಪುನರ್ಜನ್ಮದ ತೊಳೆಯುವಿಕೆಯಿಂದಲೂ ತಾನು ನಮ ರಕ್ಷಕನಾದ ಯೇಸು ಕ್ರಿಸ್ತನಿಂದ ಐಶ್ವರ್ಯವಾಗಿ ನಮ್ಮ ಮೇಲೆ ಹೊಯಿದ ಪರಿಶುದ್ಧಾತ್ಮದ ನವೀಕರಣದಿಂದಲೂ ನಾವು ಅವನ ಕೃಪೆಯಿಂದ ನೀತಿನಿರ್ಣಯ ಪಟ್ಟು ನಿತ್ಯಜೀವದ ನಿರೀಕ್ಷೆಯ ಪ್ರಕಾರ ನಮ್ಮನ್ನು ರಕ್ಷಿಸಿದನು." ಇದು ಸತ್ಯವೆ ಸರಿ.

**೩೩೧.** "ಸ್ನಾನವು **ಪುನರ್ಜನ್ಮದ** ತೊಳೆಯುವಿಕೆಯೂ ಪರಿಶುದ್ಧಾತ್ಮದ ನವೀಕರಣವೂ ಆಗಿರುತ್ತದೆ." ಶರೀರಜನ್ಮದಿಂದ ನಾವು ಹ್ಯಾಗೆ ಹಳೆ ಸ್ವಾಭಾವಿಕ ಪಾಪ ಜೀವದಲ್ಲಿ ಶೇರುತ್ತೇವೊ, ಹಾಗೆಯೆ ನೀರಿನಿಂದಲೂ ಆತ್ಮದಿಂದಲೂ ಆಗುವ **ಪುನರ್ಜನ್ಮದಿಂದ** ದೇವರ **ಪುತ್ರತ್ವದ** ಹೊಸ ಆತ್ಮಿಕ ಪರಿಶುದ್ಧ ಜೀವದಲ್ಲಿ ಶೇರುತ್ತವೆ[೧]. ಇದರಲ್ಲಿ ನಾವು ದೇವರ ಬಾಧ್ಯಸ್ಥರೂ ಕ್ರಿಸ್ತನ ಸಹಬಾಧ್ಯಸ್ಥರೂ ಆಗಿರುತ್ತೇವೆ. (ರೋಮಾ. ೮, ೧೭.) ಶರೀರಜನ್ಮದ ಪ್ರಕಾರ ಆದಮನಿಂದ ಹುಟ್ಟಿದ್ಧೇವೆ; ಹೊಸ ಜನ್ಮದ ಪ್ರಕಾರ ಕ್ರಿಸ್ತನಲ್ಲಿ ಹುಟ್ಟಿದ್ಧೇವೆ; ಇದಲ್ಲದೆ ಕ್ರಿಸ್ತನ ಮರಣದ ಮತ್ತು ಜೀವದ ಅನ್ಯೋನ್ಯದಲ್ಲಿ (ರೋಮಾ. ೬, ೩. ೪. ಯೋಹಾ. ೧೫, ೧—೫.) ಸಂಪೂರ್ಣ ನೀತಿಗೂ ಪರಿಶುದ್ಧತ್ವಕ್ಕೂ ಅಂಗೀಕರಿಸಲ್ಪಟ್ಟಿದ್ಧೇವೆ[೨]. ಮಾಂಸದಿಂದ ಮಾಂಸವಾಗಿ ಮಾತೃಗರ್ಭದಲ್ಲಿ ಹುಟ್ಟುವ ಹಳೆ ಮನುಷ್ಯನೊಳಗೆ ಸ್ನಾನದ ನೀರಿನಿಂದ ಆತ್ಮದ ಯತ್ನದ ಮೂಲವಾಗಿ ಹೊಸ ಮನುಷ್ಯನು ವಾಕ್ಯಕ್ಕೂ ವಾಗ್ದತ್ತಕ್ಕೂ ವಿಧೇಯವಾಗಿ ಆತ್ಮದಿಂದ ಆತ್ಮವಾಗಿ ಹುಟ್ಟುತ್ತಾನೆ[೩].

೧) "ಯಾಕಂದರೆ ಕ್ರಿಸ್ತ ಯೇಸುವಿನಲ್ಲಿರುವ ವಿಶ್ವಾಸದ ಮೂಲವಾಗಿ ಎಲ್ಲರು ದೇವರ ಮಕ್ಕಳಾಗಿದ್ಧೀರಿ. ಹ್ಯಾಗಂದರೆ ಕ್ರಿಸ್ತನಿಗಾಗಿ ಸ್ನಾನ ಹೊಂದಿದವರಷ್ಟು ಕ್ರಿಸ್ತನನ್ನು ಧರಿಸಿ ಕೊಂಡಿರಿ." (ಗಲಾ. ೩, ೨೬. ೨೭.)

೨) "ಕ್ರಿಸ್ತನು ಸಭೆಯನ್ನು ಪ್ರೀತಿ ಮಾಡಿ, ಅದನ್ನು ವಾಕ್ಯದಲ್ಲಿ ನೀರಿನ ತೊಳೆಯುವಿಕೆಯಿಂದ ಶುಚಿಸಿ, ಪರಿಶುದ್ಧ ಮಾಡುವದಕ್ಕೂ, ಅದನ್ನು ಕಳಂಕವೂ ಸುಕ್ಕೂ ಮೊದಲಾದವುಗಳಿಲ್ಲದೆ, ಪರಿಶುದ್ಧವೂ ನಿರ್ಮಲವೂ ಆಗಿರುವ ಸಭೆಯನ್ನು ತನ್ನ ಮುಂದೆ ಮಹಿಮೆಯುಳ್ಳದ್ದಾಗಿ ನಿಲ್ಲಿಸುವದಕ್ಕೂ, ಅದಕ್ಕೋಸ್ಕರ ತನ್ನನ್ನು ಕೊಟ್ಟ ಹಾಗೆಯೇ." (ಎಫೆ. ೫, ೨೫—೨೭.) "ಮಾಂಸದ ಮೈಲಿಗೆಯನ್ನು ತೆಗೆದು ಹಾಕುವಂಥಾದ್ದಲ್ಲ, ಒಳ್ಳೇ ಮನಸ್ಸಾಕ್ಷಿಯಿಂದ ದೇವರಿಗೆ ಮಾಡುವ ಬಿನ್ನಹವೇ, ಆಗಿರುವ ಸ್ನಾನವು ಈಗ ನಮ್ಮನ್ನು ಯೇಸು ಕ್ರಿಸ್ತನ ಪುನರುತ್ಥಾನದ ಮೂಲವಾಗಿ ರಕ್ಷಿಸುತ್ತದೆ." (೧ ಪೇತ್ರ. ೩, ೨೧.)

೩) "ನಿಶ್ಚಯವಾಗಿ ನಿಶ್ಚಯವಾಗಿ ನಿನಗೆ ಹೇಳುತ್ತೇನೆ, ಒಬ್ಬನು ನೀರಿನಿಂದಲೂ

ಆತ್ಮದಿಂದಲೂ ಹುಟ್ಟದಿದ್ದರೆ, ದೇವರ ರಾಜ್ಯದಲ್ಲಿ ಪ್ರವೇಶಿಸಲಾರನು ಮಾಂಸದಿಂದ ಹುಟ್ಟಿದ್ದು ಮಾಂಸವೇ; ಆತ್ಮದಿಂದ ಹುಟ್ಟಿದ್ದು ಆತ್ಮವೇ." (ಯೋಹಾ. ೩, ೫. ೬.)

**೨೨೨.** ಈ ಪ್ರಕಾರ ನೀರಿನಿಂದಲೂ ಆತ್ಮದಿಂದಲೂ ಸ್ನಾನ ಹೊಂದಿದ ಒಬ್ಬೊಬ್ಬನು ಪುನರ್ಜನ್ಮದವನಾಗಿ, ಇಮ್ಮಡಿ ಸ್ವಭಾವ ಉಳ್ಳವನಾಗಿರುತ್ತಾನೆ. ತಂದೆ ತಾಯಿಯಿಂದ ಗರ್ಭ ಧರಿಸಿ ಹುಟ್ಟಿದಷ್ಟಕ್ಕೆ ಆದಮನ ಆಕಾರವಾಗಿರುವ ಹಳೆ ಮನುಷ್ಯನು (ಎಫೆ. ೪, ೨೨.); ನೀರಿನಿಂದಲೂ ಆತ್ಮದಿಂದಲೂ ಹೊಸತಾಗಿ ಹುಟ್ಟಿದಷ್ಟಕ್ಕೆ ಕ್ರಿಸ್ತನ ಆಕಾರವಾದ ಹೊಸ ಮನುಷ್ಯನು. ಹಳೆ ಮತ್ತು ಹೊಸ ಈ ಉಭಯ ಸ್ವಭಾವಗಳು ಕೂಡಿ ಒಂದೇ ಮೂರ್ತಿಯಾಗಿರುತ್ತಾನೆ. ಇವುಗಳ ಮಧ್ಯ ಸ್ಥಾನವೂ ಐಕ್ಯ ಸ್ಥಾನವೂ ಸ್ವಯಂಬೋಧ, ಮೂರ್ತಿಪತ್ತಾಗಿರುವ ನಾನು (ಅಹಮ್) ಆಗಿರುತ್ತದೆ.

ಪರಿಶಿ. ಈ ಎರಡು ಸ್ವಭಾವಗಳ ಐಕ್ಯವು ಕೆಲವು ವಿಷಯದಲ್ಲಿ ಕ್ರಿಸ್ತನಲ್ಲಿರುವ ಎರಡು ಸ್ವಭಾವಗಳ ಅನ್ಯೋನ್ಯದ ಹಾಗೆ ಇರುತ್ತದೆ. (**೨೨೪.**) ಆದರೆ ಒಂದು ದೊಡ್ಡ ಹೆಚ್ಚುಕಡಿಮೆಯುಂಟು. ಕ್ರಿಸ್ತನಲ್ಲಿ ಎರಡು ಸ್ವಭಾವಗಳ ಚಿತ್ತದ ಏಕತ್ವವು ಯಾವಾಗಲೂ ಇತ್ತು. ಆದರೆ ಮನುಷ್ಯನಲ್ಲಿ ಅಂಥಾ ಏಕತ್ವವು ಬಹಳ ಬಹು ಕಾಲ ನಡಿಯುವ ಹೋರಾಟದಿಂದ ಉಂಟಾಗ ಬೇಕು. (ಸಮ ನೋಡು **೨೨೨.**) ಆದವಿನಾಯ ಸ್ವಭಾವವು ಹೊಸ ಮನುಷ್ಯನ ಆತ್ಮಿಕ ಸ್ವಭಾವಕ್ಕೆ, ಕಣ್ಣುಗಳನ್ನೂ ಕಿವಿಗಳನ್ನೂ ಬುದ್ಧಿಯನ್ನೂ, ಎಲ್ಲಾ ಇಂದ್ರಿಯಗಳನ್ನೂ ಸಾಮರ್ಥ್ಯಗಳನ್ನೂ ಕೊಡುತ್ತದೆ. ಅದಕ್ಕೆ ಬದಲಾಗಿ ಆತ್ಮಿಕ ಸ್ವಭಾವವು ತನ್ನಲ್ಲಿ ವಾಸವಾಗಿರುವ ದೇವ ಪ್ರಾಣದಿಂದ ಹಳೆ ಮನುಷ್ಯನ ಎಲ್ಲಾ ಅಂಗಗಳನ್ನೂ ಶಕ್ತಿಗಳನ್ನೂ ಮಾರ್ಪಡಿಸಿ ನವೀಕರಿಸುತ್ತದೆ.

## ನಾಲ್ಕನೆ.

### ಇಂಥಾ ಜಲಸ್ನಾನದ ಅಭಿಪ್ರಾಯವೇನು?

ನಮ್ಮೊಳಗಿರುವ ಹಳೆ ಆದಮನು ಅನುದಿನವು ಪಶ್ಚಾತ್ತಾಪದಿಂದಲೂ ಮಾನಸಾಂತರದಿಂದಲೂ ಮುಣುಗಿಸಲ್ಪಟ್ಟು, ಎಲ್ಲಾ ಪಾಪಗಳ ಸಂಗಡಲೂ ಎಲ್ಲಾ ಅಭಿಲಾಷೆಗಳ ಸಂಗಡಲೂ ಸಾಯ ಬೇಕು. ಅತ್ತ ಕಡೆಯಲ್ಲಿ, ದೇವರ ಮುಂದೆ ನೀತಿಯಿಂದಲೂ ಪರಿಶುದ್ಧತ್ವದಿಂದಲೂ ನಿತ್ಯವಾಗಿ ಜೀವಿಸುವ ಹೊಸ ಮನುಷ್ಯನು ಅನುದಿನ ಎದ್ದು ಉತ್ಥಾನವಾಗ ಬೇಕೆಂಬ ಅಭಿಪ್ರಾಯ.

### ಇದು ಎಲ್ಲಿ ಬರದದೆ?

ಅಪೊಸ್ತಲನಾದ ಪೌಲನು ರೋಮಾಯರಿಗೆ ೬, ೪ರಲ್ಲಿ ಹೇಳುವದೇನಂದರೆ: "ಯಾವ ಪ್ರಕಾರ ಕ್ರಿಸ್ತನು ತಂದೆಯ ಮಹಿಮೆಯಿಂದ ಸತ್ತವರೊಳಗಿಂದ ಎಬ್ಬಿಸಲ್ಪಟ್ಟನೋ, ಅ

ದೇ ಪ್ರಕಾರ ನಾವು ಸಹಾ ಹೊಸ ಜೀವದಲ್ಲಿ ನಡೆದು ಕೊಳ್ಳುವ ಹಾಗೆ, ಅವನ ಸಂಗಡ ಸ್ನಾನದಿಂದ ಮರಣಕ್ಕಾಗಿ ಹೂಣಲ್ಪಟ್ಟೆವು."

**೩೩೩.** ಸ್ನಾನದಿಂದ ಮನುಷ್ಯನು ಕ್ರಿಸ್ತನೊಳಗಣ ಹೊಸ ಜೀವದಲ್ಲಿ ಸೇರಿದನು. ಆದರೆ ಅವನು ಅದರಲ್ಲಿ ನೆಲೆಯಾಗಿ ಬೆಳೆಯ ಬೇಕು. ಯಾಕಂದರೆ ಈ ಪರೀಕ್ಷೆಯ ಮತ್ತು ಸಾಕ್ಷಿಯ ಕೆಲಸವು, ಸ್ನಾನದಿಂದ ದೇವರೊಳಗಣ ಹುಟ್ಟಿದ ಹೊಸ ಸೃಷ್ಟಿಯನ್ನು ನಮ್ಮಲ್ಲಿ ಕ್ರಿಸ್ತನ ಸಂಪೂರ್ಣತೆಯ ನೀಳದ ಪ್ರಮಾಣಕ್ಕೆ ಬೆಳಿಸುವದಾಗಿರುತ್ತದೆ. (ಎಫೆ. ೪, ೧೩.) (**೨೮೨**, ೨.) ಈ ಪ್ರಕಾರ ಹೊಸ ನಿರ್ಮಾಣವು ಹಳೆ ಮನುಷ್ಯನನ್ನು ಆಳಿ, ಅವನು ಅದರಲ್ಲಿ ಪ್ರವೇಶಿಸಿ ಇಲ್ಲವಾಗುವ ಪರ್ಯಂತಕ್ಕೆ, ಅವನನ್ನು ಹೆಚ್ಚೆಚ್ಚಾಗಿ ಶುದ್ಧೀಕರಿಸುತ್ತಾ ಪರಿಶೋಧಿಸುತ್ತಾ ವ್ಯಾಪಿಸ ತಕ್ಕದ್ದು. ಇದಕ್ಕಾಗಿ ಆತ್ಮಕ್ಕೆ ಮಾಂಸದ ಸಂಗಡ ಕಠಿಣವಾದ ಬಹು ಕಾಲ ಇರುವ ಹೋರಾಟವು ಬೇಕೆಂಬದು ಸರಿ[1]. ಆದರೆ ನಾವು ಚನ್ನಾಗಿ, ಅಂದರೆ, ಜಾಗ್ರತೆಯಿಂದಲೂ ಪ್ರಾರ್ಥನೆಯಿಂದಲೂ ಆತ್ಮದ ಸರ್ವಾಯುಧಗಳನ್ನು ಧರಿಸಿದವರಾಗಿ (ಎಫೆ. ೬, ೧೦—೧೭.) (**೨೫೭**, ೨.) ಹೋರಾಡಿದರೆ, ಕಡೆಯಲ್ಲಿ ಜಯವು ನಿಸ್ಸಂಶಯವಾಗಿರುತ್ತದೆ[2].

೧) "ಆತ್ಮದಲ್ಲಿ ನಡೆದು ಕೊಳ್ಳಿರಿ," ಇತ್ಯಾದಿ. (ಗಲಾ. ೫, ೧೬. ೧೭.) (ಸಮ ನೋಸು **೨೮೨**, ೧.) (ರೋಮಾ. ೭, ೧೪. ೨೪.) (**೧೪೨.**)

೨) "ಯಾರಾದರೂ ನಿನ್ನ ಕಿರೀಟವನ್ನು ತಕ್ಕೊಳ್ಳದ ಹಾಗೆ, ನಿನಗುಂಟಾದದ್ದನ್ನು ಹಿಡಿದುಕೋ." (ಪ್ರಕಟ. ೩, ೧೧.) "ನಮ್ಮ ಭರವಸದ ಆರಂಭವನ್ನು ಕಡೇ ವರಿಗೂ, ನಾವು ಘಟ್ಟಿಯಾಗಿ ಹಿಡಿದು ಕೊಂಡರೆ, ಕ್ರಿಸ್ತನಲ್ಲಿ ಪಾಲುಗಾರರಾಗಿರುತ್ತೇವೆ." (ಇಬ್ರಿ. ೩, ೧೪.) "ಒಬ್ಬನು ಮಲ್ಲಯುದ್ಧ ಮಾಡಿದರೆ, ನೇಮದ ಪ್ರಕಾರ ಯುದ್ಧ ಮಾಡದಿದ್ದರೆ, ಕಿರೀಟವನ್ನು ಹೊಂದನು." (೨ ತಿಮೊ. ೨, ೫.) "ಆದರೆ ಇವೆಲ್ಲವುಗಳಲ್ಲಿ" ಇತ್ಯಾದಿ. (ರೋಮಾ. ೮, ೩೭—೩೯.) (**೩೪.**) "ಒಳ್ಳೇ ಕೆಲಸವನ್ನು ನಿಮ್ಮಲ್ಲಿ ಆರಂಭಿಸಿದವನು, ಯೇಸು ಕ್ರಿಸ್ತನ ದಿನದ ಮಟ್ಟಿಗೂ, ಅದನ್ನು ಪೂರೈಸುವನೆಂಬದನ್ನೇ ನಂಬಿ ಕೊಂಡಿದ್ದೇನೆ." (ಫಿಲಿ. ೧, ೬.) (**೨೮೪**, ೧.)

**೩೩೪.** ಈ ಹೋರಾಟವು ಬಹಳ ಕಠಿಣವಾಗಿಯೂ ಕಷ್ಟವಾಗಿಯೂ ಇರುವದರಿಂದಲೂ, ನಾವು ಉದ್ವೇಗ ತಪ್ಪು ಬಲಹೀನತ್ವಗಳ ದೆಸೆಯಿಂದ ಅನೇಕ ಸರ್ತಿ, ಎಷ್ಟು ಪ್ರಯತ್ನ ಮಾಡಿದರೂ, ಅಪಜಯವಾಗುವದರಿಂದಲೂ (**೨೮೩.**), ನಮ್ಮ ಕಡೆಯಿಂದ ನಮಗೆ ಸ್ನಾನದ ಒಡಂಬಡಿಕೆಯ ಅನುದಿನದ ನವೀಕರಣವು ಮಾನಸಾಂತರದಲ್ಲಿಯೂ

ಪ್ರಾರ್ಥನೆಯಲ್ಲಿಯೂ[೧], ಪರಿಶುದ್ಧಾತ್ಮದ ಕಡೆಯಿಂದ ಪ್ರಾಪ್ತವಾದ ಸ್ನಾನ ಕೃಪೆಯನ್ನು ದೇವರ ವಾಕ್ಯದ ಮೂಲವಾಗಿ ಅನುದಿನ ಎಚ್ಚರಿಸುವದೂ, ಅದೇ ಪ್ರಕಾರ ಪರಿಶುದ್ಧ ರಾತ್ರಿಭೋಜನದ ಮೂಲವಾಗಿ, ಸ್ನಾನದಲ್ಲಿ ಹುಟ್ಟಿದ ಹೊಸ ಮನುಷ್ಯನಿಗೆ ತಿರಿಗಿ ತಿರಿಗಿ ಭೋಜನವನ್ನೂ ಆಹಾರವನ್ನೂ ಕೊಡುವದೂ ಅವಶ್ಯವಾಗಿರುತ್ತದೆ.

೧) "ನಿಮ್ಮ ಬುದ್ಧಿಯ ಆತ್ಮದಲ್ಲಿ ಹೊಸಬರಾಗಿ" ಇತ್ಯಾದಿ. (ಎಫೆ. ೪, ೨೨—೨೪.) (**೨೮೨**, ೧.) (ಕೊಲೊ. ೩, ೮.)

**೨೨೫.** ಸ್ನಾನದಿಂದ ಕರ್ತನ ಸಂಗಡ ನೆಡಲ್ಪಟ್ಟ ಅನ್ಯೋನ್ಯವನ್ನು ಅವಶ್ಯವಾದ ಆತ್ಮಿಕ ಪೋಷಣದಿಂದಲೂ ಪರಾಮರ್ಶದಿಂದಲೂ ಆಹಾರದಿಂದಲೂ ಕಾಪಾಡಿ, ಸಾರ್ವದಾ ನವೀಕರಿಸದೆ ಇದ್ದರೆ, ಶರೀರದ ಜೀವದಲ್ಲಿ ನಿದ್ರೆ, ಮೂರ್ಛೆ, ಅರೆ ಸಾವುಗಳ ಹಾಗಿರುವ ಆತ್ಮಿಕ ಸ್ಥಿತಿಯು ಉಂಟಾಗುತ್ತದೆ. ಈ ಸ್ಥಿತಿಯು ತಕ್ಕ ಕಾಲದಲ್ಲಿ ಬೇರೆಯಾಗದಿದ್ದರೆ, ನಿಜವಾದ (ಆತ್ಮಿಕ ಮತ್ತು ನಿತ್ಯ) ಮರಣವು ಉಂಟಾಗುತ್ತದೆ. ಮರಣದಂತಿರುವ ಈ ನಿದ್ರೆಯಿಂದ ಎಚ್ಚರವಾಗುವದೆ ಆತ್ಮಿಕ ಎಚ್ಚರ. ಇದೂ ಪುನರ್ಜನ್ಮವೂ ಒಂದೇ ಅಲ್ಲ. ಎಚ್ಚರ ಸಹಾ ಪರಿಶುದ್ಧಾತ್ಮದ ಕೃಪಾಪ್ರಯತ್ನದಿಂದ ಕರೆಯುವಿಕೆಯಲ್ಲಿಯೂ ಪ್ರಕಾಶೀಕರಣದಲ್ಲಿಯೂ ಉಂಟಾಗುತ್ತದೆ. ಆದರೆ ಮನುಷ್ಯನು ಅದಕ್ಕೆ ಪ್ರತಿಯಾಗಿ ತನ್ನನ್ನು ಕಠಿಣ ಮಾಡಿ ಕೊಳ್ಳ ಬಹುದು.

**೨೨೬.** ಕ್ರೈಸ್ತ ಸಭೆಯು, ಅದನ್ನು ಸಮಸ್ತ ಸತ್ಯದಲ್ಲಿ ನಡಿಸುವ ಆತ್ಮದ ಬಲದಿಂದ ಏಕ ಮನಸ್ಸಿನಿಂದ ಬಾಲಕಸ್ನಾನವನ್ನು ಸ್ಥಾಪಿಸಿಯದೆ. ಸಭೆಯು ಮತವಾದಿಗಳಿಗೂ ಭೇದಕಾರಕರಿಗೂ ಪ್ರತಿಯಾಗಿ ಬಾಲಕಸ್ನಾನದ ಅವಶ್ಯತ್ವವನ್ನು ಘಟ್ಟಿಯಾಗಿಯೂ ಜಯವಾಗಿಯೂ ಸಾಧಿಸಿ ಅದೆ. ಮತ್ತು ಅದನ್ನು ಎಂದೂ ಬಿಡಲಿಕ್ಕೆ ಆಗಲಿಕ್ಕಿಲ್ಲಾ. ಪರಿಶುದ್ಧ ಬರಹದಲ್ಲಿ ಸ್ಪಷ್ಟವಾಗಿಯೂ ಅಕ್ಷರಾನುಸಾರವಾಗಿಯೂ ವಿಧೇಯರಾಗುವ ಪ್ರಾಯಸ್ಥರ ಸ್ನಾನದ ಹಾಗೆ ಬಾಲಕಸ್ನಾನವನ್ನು ನೇಮಿಸಿ ಇರದೆ ಇದ್ದರೂ, ಬಾಲಕಸ್ನಾನವು ಆಗ ಬಹುದು ಆಗ ಬೇಕು ಎಂಬ ಸಭಾಬೋಧನೆಯು ದೇವರ ವಾಕ್ಯದ ಬೋಧನೆಯಿಂದ ಸ್ವಾಭಾವಿಕವಾಗಿ ವಿಕಾಸವಾಯಿತು. ಆದಕಾರಣ ಅದಕ್ಕೆ ದಿವ್ಯ ಅಧಿಕಾರದ ಆಧಾರ ಉಂಟು. (**೨೦೯.** ಪರಿಶಿ.)

ಪರಿಶಿ. ಬಾಲಕಸ್ನಾನಕ್ಕೆ ವಿರೋಧವಾದ ಪ್ರತಿಕಕ್ಷಿಯು ತಕ್ಕಷ್ಟು ಅಜ್ಞಾನದಲ್ಲಿಯೂ ಕುಜ್ಞಾನದಲ್ಲಿಯೂ ಆಧಾರಗೊಂಡದೆ. ಸ್ನಾನವಾಕ್ಯವು (ಮತ್ತಾ. ೨೮, ೧೯.) ಅದಕ್ಕೆ ವಿರೋಧವಾಗಿರುತ್ತದೆಂದು ಮೂಢಭಕ್ತಿಯವರು ಮಾತ್ರವೆ ಸಾಧಿಸ ಬಹುದು. ಅಪೊಸ್ತಲರು ಮಕ್ಕ

ಳಿಗೆ ಸ್ನಾನ ಕೊಡಲಿಲ್ಲವೆಂಬದನ್ನು ಇನ್ನೂ ಯಾರೂ ಸ್ಥಾಪಿಸಲಿಲ್ಲ, ಮತ್ತು ಸ್ಥಾಪಿಸಲಿಕ್ಕೆ ಆದರೆ ಸಹಾ, ಈಗಿನ ಸಭೆಯ ಮರ್ಯಾದೆಗೆ ವಿರೋಧವಾಗಿರುತ್ತದೆಂದು ನಿಶ್ಚೈಸಿದ ಹಾಗಾಗಲಿಲ್ಲ. ಯಾಕಂದರೆ ಸಭೆಯು ಅಪೊಸ್ತೊಲಿಕ ಬೋಧನೆಯನ್ನೂ (೨೦೯. ಪರಿಶಿ.) ಮರ್ಯಾದೆಯನ್ನೂ ಹೆಚ್ಚೆಚ್ಚಾಗಿ ಕಟ್ಟುವದಕ್ಕೂ, ಶ್ರೇಷ್ಠವಾದ ಸಂಪೂರ್ಣ ವಿಕಾಸಕ್ಕೆ ತರುವದಕ್ಕೂ ಯತ್ನೈಸ ಬೇಕು. ಸ್ನಾನದ ಸ್ವಭಾವದ ವಿಷಯದಲ್ಲಿ ಮಾಡುವ ಪ್ರತಿಕಕ್ಷಿಗಳಿಗೆ ಹೆಚ್ಚು ಭಾರ ಉಂಟು. ಮಗುವಿಗೆ ತಿಳಿವಿಕೆಯೂ ವಿಶ್ವಾಸವೂ ಇಲ್ಲದಿರುವದರಿಂದ, ಅದು ಸ್ನಾನ ಹೊಂದ ಕೂಡದೆಂದೂ, ಅವಶ್ಯವಾದ ಸ್ವಂತ ಸಮ್ಮತಿಯನ್ನು ಕೊಡ ಅಶಕ್ತವೆಂದೂ ಹೇಳುತ್ತಾರೆ. ಯಾರಿಗಾದರೂ ರಕ್ಷಣೆಯನ್ನು ಹ್ಯಾಗೊ, ಹಾಗೆಯೆ ಸ್ನಾನವನ್ನು ಬಲಾತ್ಕಾರದಿಂದ ಕೊಡ ಕೂಡದೆಂಬದು ಸರಿ. ಆದರೆ ಮಕ್ಕಳಿಗೆ ಸ್ವಂತ ಚಿತ್ತವೂ ಸಮ್ಮತಿಯೂ ಇಲ್ಲದೆ, ಅವುಗಳಿಗೆ ವಿರೋಧವಾಗಿ ಸಹಾ ಮನುಷ್ಯರ ಜ್ಞಾನವನ್ನೂ ಬುದ್ಧಿಯನ್ನೂ ಕಲಿಸಿದರೆ, ಹ್ಯಾಗೆ ಬಲಾತ್ಕಾರವಲ್ಲವೊ, ಹಾಗೆಯೆ ಸ್ನಾನ ಕೊಡುವದರಿಂದ ಬಲಾತ್ಕಾರವಾಗುವದಿಲ್ಲಾ. ತಂದೆ ತಾಯಿಗಳ ಚಿತ್ತವು ಅಡ್ಡಿ ಇಲ್ಲದೆ ಬುದ್ಧಿ ಇಲ್ಲದ ಮಗುವಿನ ಚಿತ್ತ ಸಹಾ ಆಗಿರುತ್ತದೆ. (ಅದೆ ಪ್ರಕಾರ ಸ್ನಾನವನ್ನು ಸಮವಾಗಿ ತಕ್ಕೊಳ್ಳಲಿಕ್ಕೆ ವಿಶ್ವಾಸವು ಔಪಾಧಿಕವಾಗಿರಲಾಗಿ — ೨೨೦.) ತಂದೆ ತಾಯಿಗಳ ವಿಶ್ವಾಸವು ಸ್ವಯಂಬೋಧ ಉಳ್ಳ ಸ್ವಾತಂತ್ರಿಕ ಮೂರ್ತಿತ್ವಕ್ಕೆ ಬೆಳೆಯದೆ ಇರುವ ಮಗುವಿನ ವಿಶ್ವಾಸವಾಗಿರುತ್ತದೆ. (೧ ಕೊರಿ. ೭, ೧೪.) ಮಗುವಿನ ಶರೀರ ಜೀವವು ಭೂಮಿಯಲ್ಲಿ ಹುಟ್ಟುವ ಮೊದಲು ತಾಯಿಯ ಶರೀರ ಜೀವದೊಡನೆ ಒಂದೇಯಾಗಿದ್ದು, ಹೆತ್ತ ಮೇಲೆ ಸ್ವತಂತ್ರ ಉಳ್ಳದ್ದಾಗಿರುತ್ತದೆ ಹ್ಯಾಗೊ, ಹಾಗೆಯೆ ಮಗುವಿನ ಆತ್ಮಿಕ ಜೀವವು ಹೆತ್ತ ಮೇಲೆ ಸಹಾ ಪೂರ್ಣ ಸ್ವಸಾಮರ್ಥ್ಯ ಹೊಂದದೆ, ಸ್ವಚ್ಛವಾದ ಪೂರ್ಣ ಸ್ವಯಂಬೋಧ ಇಲ್ಲದ ಮಟ್ಟಿಗೂ, ಹೆತ್ತವರ ಆತ್ಮ ಜೀವದೊಡನೆ ಒಂದೇಯಾಗಿರುತ್ತದೆ. ಪ್ರಾಯ ಬಂದ ಸ್ನಾನಾಪೇಕ್ಷಿಯು ರಕ್ಷಣೆಯ ತಿಳಿವಿಕೆ (೨೨೦.) ಉಳ್ಳವನಾಗಿರ ಬೇಕೆಂಬದು ಸರಿ. ಆದರೆ ಅದು ಸಹಾ ಅವನು ಕಾಂಕ್ಷೆ, ಅಭಿಲಾಷೆ, ಅಪೇಕ್ಷೆ, ಸಮ್ಮತಿ ಪಡ ಕೊಳ್ಳುವ ಹಾಗೆ ಆದರೆ ಸಾಕು. ಆದರೆ ಬಾಲಕಸ್ನಾನದಲ್ಲಿ ಹೆತ್ತವರ ಚಿತ್ತವು ಸಮ್ಮತ ಇರಲು, ಮಗುವಿನ ಸ್ವಂತ ಚಿತ್ತಕ್ಕೆ ಈಡಾಗುವದರಿಂದ, ವಿಶ್ವಾಸಿಸುವ ಅವಶ್ಯ ಸಹಾ ಮಗುವಿನ ಸ್ಥಳದಲ್ಲಿ ಹೆತ್ತವರ ಮೇಲೆ ಬೀಳುತ್ತದೆ. ತಾವು ಮಗುವಿಗೆ ಯಾಕೆ ಯಾವದಕ್ಕೆ ಸ್ನಾನ ಕೊಡಿಸುತ್ತೇವೆಂಬದನ್ನು ಅವರು ಅವಶ್ಯವಾಗಿ ತಿಳಿಯ ಬೇಕು.

**೨೨೭.** ಬಾಲಕಸ್ನಾನವು ಆಗ ಬಹುದೆಂಬದಕ್ಕೂ ಅವಶ್ಯವಾಗಿರುತ್ತದೆಂಬದಕ್ಕೂ ದೇವರ ವಾಕ್ಯದಿಂದ ಈ ಆಧಾರಗಳನ್ನು ಹೇಳುತ್ತಾರೆ. ಮಕ್ಕಳಿಗೆ ರಕ್ಷಕನು ಬೇಕು. (ಯೋಹಾ. ೩, ೬.) ಅವುಗಳನ್ನು ತನ್ನ ಬಳಿಗೆ ತರಲಿಕ್ಕೆ ಕ್ರಿಸ್ತನು ಅಪ್ಪಣೆ ಕೊಟ್ಟನು. (ಮಾರ್ಕ. ೧೦, ೧೪.) ವಾಗ್ದತ್ತವು ಅವರಿಗೆ ಸಹಾ ತಾಗುತ್ತದೆ. (ಅ. ಕ್ರಿ. ೨, ೩೯.)

ಎಂಟನೆ ದಿವಸದಲ್ಲಿ ಆಗುವ ಪರಿಚ್ಛೇದನೆಯ ಮುಂಗುರ್ತು. (ಕೊಲೊ. ೨, ೧೧. ೧೨.) ಅಪೊಸ್ತಲರು ಪೂರ್ಣ ಕುಟುಂಬಗಳಿಗೆ ಸ್ನಾನ ಕೊಟ್ಟರೆಂಬ ವರ್ತಮಾನ. (ಅ. ಕ್ರಿ. ೧೬, ೧೫. ೩೩. ೧ಕೊರಿ. ೧, ೧೬.) ಪರಿಶುದ್ಧಾತ್ಮವು ಎಳೇ ಕೂಸುಗಳಲ್ಲಿ ಸಹಾಯ ತೈಸಿದದರ ದೃಷ್ಟಾಂತಗಳು. (ಕೀರ್ತ. ೮, ೩೨. ೨೨, ೯. ೧೦. ಮತ್ತಾ. ೧೮, ೬. ಲೂಕ. ೧, ೧೫.)

ಪರಿಶಿ. ಮೇಲೆ ಹೇಳಿದ ಎಲ್ಲಾ ಆಧಾರಗಳು ಬಲವುಳ್ಳವುಗಳಾಗಿರುವದಿಲ್ಲವೆಂಬದು ಸರಿ. ಆದರೆ ಮೊದಲನೆದು ಮತ್ತು ಕಡೆದು ಸ್ಥಿರವಾಗಿ ನಿಂತರೆ ಸಾಕು. ಮತ್ತು ಇದು ಬರಹಕ್ಕೂ ಅನುಭವಕ್ಕೂ ಅನುಸಾರವಾಗಿರುತ್ತದೆ. ಆ ಎರಡರಿಂದ ದೇವರ ವಾಕ್ಯದ ಮತ್ತು ಸಭೆಯ ಸ್ಥಾನದಿಂದ ಆಲೋಚಿಸಿದರೆ, ಬೋಧನೆಯ ಪ್ರಕಾರವಾಗಿಯೂ ಕಾರ್ಯದ ಪ್ರಕಾರವಾಗಿಯೂ ಬಾಲಕ ಸ್ನಾನವು ಆಗ ಬಹುದು, ಮತ್ತು ಆಗುವದು ಅವಶ್ಯ ಎಂಬದನ್ನು ತೋರಿಸುವದಕ್ಕೆ ಸಾಕಾಗಿರುತ್ತದೆ. ಸ್ನಾನದ ಸ್ವಭಾವದಲ್ಲಿ (ಪುನರ್ಜನ್ಮದ ಸ್ನಾನವಾಗಿರುತ್ತದೆಂಬದಾಗಿ) ಬಾಲಕಸ್ನಾನಕ್ಕೆ ವಿರೋಧವಾದದ್ದು ಏನೂ ಇಲ್ಲಾ. ಅದು ಬಿಟ್ಟು, ಎಲ್ಲಾ ಸ್ನಾನ, ಪ್ರಾಯ ಬಂದವರ ಸ್ನಾನ ಸಹಾ ನಿಜವಾಗಿ ಬಾಲಕಸ್ನಾನದಂತಿರುತ್ತದೆ.— ಸಮ ನೋಡು: ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ನೀವು ತಿರುಗಿ ಕೊಂಡು ಕೂಸುಗಳ ಹಾಗೆ ಆದರೆ ಹೊರ್ತು, ಪರಲೋಕ ರಾಜ್ಯದಲ್ಲಿ ಪ್ರವೇಶಿಸಲಾರಿರಿ. (ಮತ್ತಾ. ೧೮, ೩.)

**೩೩೮.** ಬೆಳದ ಕ್ರೈಸ್ತ ಯೌವನಸ್ಥರಿಗೆ ಸಭೆಯಲ್ಲಿ ಆಗುವ ದೃಢೀಕರಣಕ್ಕೆ ದಿವ್ಯ ನೇಮಕವೂ ಪ್ರಸಾದ ಲಕ್ಷಣವೂ ಇಲ್ಲ. ಆದರೂ ಅದು ಬಹಳ ಒಳ್ಳೇ ಕ್ಷೇಮಕರವಾದ ಸಭೆಯ ಮರ್ಯಾದೆಯೂ ಕ್ರಮವೂ ಆಗಿರುತ್ತದೆ. ಅದರಿಂದ ಸಭೆಯು ತನ್ನ ಅಂಗಗಳಿಗೆ ಸಮವಾದ ತಿಳುವಿಕೆಯೂ ಸಮವಾದ ಅರಿಕೆಯೂ ಉಂಟೋ ಎಂಬ ವಿಷಯದಲ್ಲಿ ತನ್ನಿಂದ ಆಗುವಷ್ಟು ನಿಶ್ಚಯ ಮಾಡುತ್ತದೆ. ದೃಢೀಕರಣದಿಂದ ಸಭೆಯು, ಯೌವನ ಕ್ರೈಸ್ತನು ಆತ್ಮಿಕವಾಗಿ ಪ್ರಾಯ ಬಂದವನೆಂದೂ ಮತ್ತು ಮುಖ್ಯವಾಗಿ ಪರಿಶುದ್ಧ ರಾತ್ರಿ ಭೋಜನಕ್ಕೆ ಬರ ಯೋಗ್ಯನಾಗಿರುತ್ತಾನೆಂದೂ, ಹೇಳಿದ ಹಾಗಾಯಿತು.

ಪರಿಶಿ. ದೃಢೀಕರಣವು ಬಾಲಕಸ್ನಾನದ ಮೇಲೆ ಅವಶ್ಯ ಕಾರ್ಯವೆಂದು ಹೇಳುವದು ಸಮವಲ್ಲಾ, ಅದು ಸಭೆಯ ಬೋಧನೆಗೂ ದೇವರ ವಾಕ್ಯದ ಬೋಧನೆಗೂ ವಿರೋಧ. ಸ್ನಾನವು ಮನುಷ್ಯನಲ್ಲಿ ಆಗುವ ದೇವರ ಕಾರ್ಯವಾಗಿರುವದರಿಂದ, ಮನುಷ್ಯ ಸಹಾಯವೂ ಕ್ರಿಯೆಯೂ ಸರ್ವಥಾ ಬೇಡ. ಮತ್ತು ದೃಢೀಕರಣವು ಸ್ನಾನದ ಹಾಗೆ ರಕ್ಷಿಸಲ್ಪಡುವದಕ್ಕೆ ಅವಶ್ಯವಾಗಿರುವದಿಲ್ಲಾ. ಅದು ಸ್ನಾನದ ಎರಡನೆ ಭಾಗವಲ್ಲಾ. ಪರಿಶುದ್ಧ ರಾತ್ರಿ ಭೋಜನವನ್ನು ಮೊದಲನೆ ಸರ್ತಿ ಕೊಳ್ಳುವದಕ್ಕೆ ಸಿದ್ಧ ಮಾಡುವಂಥಾದ್ದು ಆಗಿ

ರುತ್ತದಷ್ಟೆ. ದೃಢೀಕರಣವನ್ನು ಯೋಗ್ಯತೆ ಮೀರಿ ಎತ್ತಿದಷ್ಟಕ್ಕೆ, ಸ್ನಾನವನ್ನು ತಗ್ಗಿಸಿದ ಹಾಗಾಯಿತು. ಅನೇಕರು ದೃಢೀಕರಣವನ್ನು ವಿಪರೀತವಾಗಿ ಘನ ಪಡಿಸುವದಕ್ಕೆ ಪ್ರಯತ್ನ ಮಾಡುವದರಿಂದ, ಸ್ನಾನವೆಂದರೆ ಬರೀ ಹೆಸರಿಡುವ ಕಾರ್ಯವಾಗಿ ಹೋಗುತ್ತದೆ. ಆದರೆ ಸ್ನಾನವನ್ನು ಕರ್ತನು ತಾನೆ ಸ್ಥಾಪಿಸಿದನು.

---

## ಕ್ರೈಸ್ತರು ಮಾಡುವ ಪಾಪದ ಅರಿಕೆ ಮತ್ತು ಬೀಗದ ಕೈಗಳ ಉದ್ಯೋಗ.

ಪಾಪದ ಅರಿಕೆ ಅಂದರೇನು?

ಅರಿಕೆ ಅಂದರೆ ಎರಡು ಉಂಟು. ಪಾಪಗಳನ್ನು ಅರಿಕೆ ಮಾಡುವದೊಂದು. ಎರಡನೆ ಏನಂದರೆ, ಅರಿಕೆ ಮಾಡಿಸಿ ಕೊಳ್ಳುವವನಿಂದ ಕ್ಷಮೆಯನ್ನು ದೇವರಿಂದೆಂಬ ಹಾಗೆ ತಕ್ಕೊಂಡು, ಏನೂ ಸಂಶಯ ಪಡದೆ, ಅದರಿಂದ ಪಾಪವು ಪರಲೋಕದಲ್ಲಿ ದೇವರಿಂದ ಕ್ಷಮಿಸಲ್ಪಟ್ಟಿತೆಂದು ಭದ್ರವಾಗಿ ನಂಬುವದು.

ಯಾವ ಪಾಪವನ್ನು ಅರಿಕೆ ಮಾಡ ಬೇಕು?

ದೇವರ ಮುಂದೆ ಎಲ್ಲಾ ಪಾಪಗಳಿಗೆ, ನಾವು ತಿಳಿಯದೆ ಇದ್ದವುಗಳಿಗೆ ಸಹಾ, ಕರ್ತನ ಪ್ರಾರ್ಥನೆಯಲ್ಲಿ ಮಾಡುವ ಪ್ರಕಾರ, ಅಪರಾಧಿಗಳಾಗಿರುತ್ತೇವೆಂದು ಹೇಳ ಬೇಕು. ಆದರೆ ಅರಿಕೆ ಮಾಡಿಸಿ ಕೊಳ್ಳುವವನ ಮುಂದೆ ನಾವು ಹೃದಯದಲ್ಲಿ ತಿಳಿದು ಅನುಭವಕ್ಕೆ ಬಂದ ಪಾಪವನ್ನು ಮಾತ್ರವೆ ಅರಿಕೆ ಮಾಡ ತಕ್ಕದ್ದು.

ಅದು ಯಾವದು?

ನಿನ್ನ ಸ್ಥಿತಿಯನ್ನು ಹತ್ತು ಕಟ್ಟಳೆಗಳ ಪ್ರಕಾರ ಆಲೋಚಿಸಿ ನೋಡು. ನೀನು ತಂದೆಯೊ, ತಾಯಿಯೊ, ಮಗನೊ, ಮಗಳೊ, ಯಜಮಾನನೊ, ಯಜಮಾನಿಯೊ, ಸೇವಕನೊ ಎಂದೂ, ಅವಿಧೇಯನೊ, ನಂಬಿಕೆ ಇಲ್ಲದವನೊ, ಜಾಗ್ರತೆ ಇಲ್ಲದವನೊ ಎಂದೂ, ನೀನು ಯಾರಿಗಾದರೂ ಮಾತುಗಳಿಂದಲಾಗಲಿ, ಕೆಲಸಗಳಿಂದಲಾಗಲಿ, ಉಪದ್ರವ ಕೊಟ್ಟಿದ್ಧೀಯೊ ಎಂದೂ, ಕದ್ದು ಕೊಂಡಿದ್ಧೀಯೊ, ಆಲಸ್ಯ ಮಾಡಿದ್ಧೀಯೊ, ವ್ರಯ ಮಾಡಿದ್ಧೀಯೊ, ನಷ್ಟ ಮಾಡಿದ್ಧೀಯೊ ಎಂಬದಿತ್ಯಾದಿ ಎಲ್ಲಾ ಆಲೋಚಿಸು. ಆದರೆ ಯಾರಾದರೂ ತನಗೆ ಇಂಥಾ, ಅಥವಾ ಅದಕ್ಕಿಂತ ದೊಡ್ಡ ಪಾಪಗಳು ಉಂಟೆಂದು ಕಂಡು ಕೊಳ್ಳದಿದ್ದರೆ, ಅವನು ಚಿಂತೆ ಪಟ್ಟು, ಪಾಪಗಳನ್ನು ಹುಡುಕುವದೂ, ಇಲ್ಲದವು

ಗಳನ್ನು ಆರೋಪಿಸುವದೂ, ಈ ಪ್ರಕಾರ ಅರಿಕೆಯನ್ನು ಪೀಡೆಯಂತೆ ಮಾಡಿ ಕೊಳ್ಳುವದೂ ಬೇಡ. ಒಂದಾಗಲಿ ಎರಡಾಗಲಿ ನಿನಗೆ ತಿಳಿದಷ್ಟು ಹೇಳು. ಆದರೆ ನಿನಗೆ ಒಂದಾದರೂ ತಿಳಿಯದೆ ಇದ್ದರೆ (ಇದು ಹ್ಯಾಗೂ ಸಾಧ್ಯವಾಗಿರ ತಕ್ಕದ್ದಲ್ಲಾ.) ಏನೊಂದಾದರೂ ಹೇಳಲೇ ಬೇಡ. ನೀನು ಅರಿಕೆ ಮಾಡಿಸಿ ಕೊಳ್ಳುವವನಿಗೆ ದೇವರ ಮುಂದೆ ಮಾಡುವ ಸಾಧಾರಣವಾದ ಅರಿಕೆಯ ಮೇಲೆ ಶಿಕ್ಕುವ ಕ್ಷಮೆಯನ್ನು ತಕ್ಕೊ.

**೨೨೯.** ಅರಿಕೆ ಮಾಡುವದೆಂದರೆ ಯಥಾರ್ಥವಾದ ಖಂಡಿತವಾದ ಮಾನಸಾಂತರದಲ್ಲಿ (**೨೭೨.**) ತನ್ನ ಪಾಪತ್ವವನ್ನೂ ಆಜ್ಞೆಸಿರ್ಣಯ ಯೋಗ್ಯತೆಯನ್ನೂ ದೇವರ ಮುಂದೆಯೂ, ಸಭೆಯ ನೇಮಕವಾದ ಸೇವಕನ ಮುಂದೆಯೂ ಅರಿಕೆ ಮಾಡಿ, ಭರವಸವುಳ್ಳ ವಿಶ್ವಾಸದಲ್ಲಿ (**೨೭೩.**) ಆದರಣೆಯನ್ನೂ ಅವುಗಳ ಕ್ಷಮೆಯನ್ನೂ ದೇವರಿಂದ ಆತನ ಸೇವಕನ ಕೈಯಿಂದ ಹುಡುಕಿ ತಕ್ಕೊಳ್ಳ ತಕ್ಕದ್ದು. ನಮ್ಮ ಬಾಲ ಬೋಧನೆಯಲ್ಲಿ ಎರಡು ತರದ ಅರಿಕೆಗಳುಂಟು, ಪ್ರತ್ಯೇಕ ಅರಿಕೆ ಮತ್ತು ಸಾಧಾರಣ ಅರಿಕೆ. ಪ್ರತ್ಯೇಕ ಅರಿಕೆ ಅಂದರೆ, ಯಥಾರ್ಥವಾಗಿ ತನ್ನನ್ನು ಶೋಧಿಸಿದ ಮೇಲೆ, ತನಗೆ ತಿಳಿದು ಬರುವ ಒಂದೊಂದು ವಿಶೇಷವಾದ ಪಾಪದ ಆಲೋಚನೆ ಕ್ರಿಯೆ ಮಾತುಗಳನ್ನು ಭರವಸ ಪೂರ್ಣವಾಗಿ ಅರಿಕೆ ಮಾಡುವದು[೧]. — ಸಾಧಾರಣ ಅರಿಕೆ ಅಂದರೆ, ಮೇಲೆ ಹೇಳಿದಂಥವುಗಳನ್ನು ಪ್ರತ್ಯೇಕವಾಗಿ ಉಚ್ಚರಿಸದೆ, ತಿಳಿದ ಮತ್ತು ತಿಳಿಯದ ಪಾಪಗಳನ್ನು ಒಟ್ಟಿಗೆ ಪ್ರಕಟವಾಗಿ ಅರಿಕೆ ಮಾಡುವದು.

೧) "ನೀವು ಒಬ್ಬರಿಗೊಬ್ಬರು ಪಾಪಗಳನ್ನು ಅರಿಕೆ ಮಾಡಿರಿ." (ಯಾಕೋ. ೫, ೧೬.)

ಬೀಗದ ಕೈಯ ಉದ್ಯೋಗವಂದರೇನು?

ಕ್ರಿಸ್ತನು ತನ್ನ ಸಭೆಗೆ ಭೂಮಿಯಲ್ಲಿ, ಮಾನಸಾಂತರ ಪಡುವ ಪಾಪಿಗಳಿಗೆ ಪಾಪಗಳನ್ನು ಕ್ಷಮಿಸಲಿಕ್ಕೂ ಮಾನಸಾಂತರ ಪಡದವರಿಗೆ ಮಾನಸಾಂತರ ಪಡದಿರುವ ಮಟ್ಟಿಗೂ ಪಾಪವನ್ನು ಹಿಡಿಯಲಿಕ್ಕೂ, ವಿಶೇಷವಾದ ಅಧಿಕಾರ ಕೊಟ್ಟಿದ್ದಾನೆ.

ಅದು ಎಲ್ಲಿ ಬರದದೆ?

ಸುವಾರ್ತಿಕ ಯೋಹಾನನು ೨೦, ೨೨. ೨೩ ನೆಯಲ್ಲಿ ಬರಿಯುವದೇನಂದರೆ: "ಕರ್ತನಾದ ಯೇಸುವು ಶಿಷ್ಯರ ಮೇಲೆ ಊದಿ, ಅವರಿಗೆ ಹೇಳಿದ್ದು—ಪರಿಶುದ್ಧಾತ್ಮವನ್ನು ಹೊಂದಿರಿ. ಯಾರ ಪಾಪಗಳನ್ನು ಬಿಡುತ್ತೀರೊ ಅವರಿಗೆ ಬಿಟ್ಟವೆ; ಯಾರವುಗಳನ್ನು ಹಿಡಿಯುತ್ತೀರೊ ಅವರಿಗೆ ಹಿಡಿಯಲ್ಪಟ್ಟವೆ; ಅಂದನು."

ಈ ವಾಕ್ಯದ ಅಭಿಪ್ರಾಯವೇನೆಂದು ನಂಬುತ್ತೀ?

ಕ್ರಿಸ್ತನು ಕಳುಹಿಸಿದ ಸೇವಕರು ಆತನ ದಿವ್ಯ ಅಪ್ಪಣೆಯ ಪ್ರಕಾರ ನಮ್ಮ ಸಂಗಡ ಕೆಲಸ ನಡಿಸುತ್ತಾರೆಂದೂ, ಮುಖ್ಯವಾಗಿ ಪ್ರಕಟವಾಗಿಯೂ ಮಾನಸಾಂತರ ಪಡದೆಯೂ ಇರುವ ಪಾಪಿಗಳನ್ನು ಕ್ರೈಸ್ತ ಸಭೆಯಿಂದ ಹೊರಗೆ ಹಾಕುವಾಗಲೂ, ಪಾಪಗಳಿಗೋಸ್ಕರ ಪಶ್ಚಾತ್ತಾಪ ಪಟ್ಟು ಒಳ್ಳೆಯವರಾಗಲಿಕ್ಕೆ ಇಚ್ಛೈಸುವ ಪಾಪಿಗಳನ್ನು ತಿರಿಗಿ ಬಿಡುಗಡೆ ಪಡಿಸುವಾಗಲೂ, ಅದು ಪರಲೋಕದಲ್ಲಿ ಸಹಾ ಬಲವಾಗಿಯೂ ದೃಢವಾಗಿಯೂ ಇರುತ್ತದೆಂದೂ, ನಮ್ಮ ಕರ್ತನಾದ ಕ್ರಿಸ್ತನು ತಾನೆ ನಮ್ಮ ಸಂಗಡ ಕೆಲಸವನ್ನು ನಡಿಸುವ ಹಾಗೆ ಇರುತ್ತದೆಂದೂ ನಂಬುತ್ತೇನೆ.

**೩೪೦.** ಅರಿಕೆ ಮಾಡುವವನು ಪಾಪಗಳನ್ನು ಅರಿಕೆ ಮಾಡಿದಾಗ, ಅರಿಕೆ ಮಾಡಿಸಿಕೊಳ್ಳುವವನು ಪಾಪಗಳ ಕ್ಷಮೆಯನ್ನು ಸಾರುತ್ತಾನೆ. ಈತನು ತನ್ನ ಹೆಸರಿನಲ್ಲಿ ಅಲ್ಲಾ, -- ಇದು ದೇವದೂಷಣೆಯಾದೀತು (ಮಾರ್ಕ. ೨, ೭.), ಕ್ರಿಸ್ತನಿಗೋಸ್ಕರ ರಾಯಭಾರಿಯಾಗಿ (೨ಕೊರಿ. ೫, ೨೦.) (**೨೬೭.**), ಕ್ರಿಸ್ತನ ಹೆಸರಿನಲ್ಲಿಯೂ ಅಪ್ಪಣೆಯಿಂದಲೂ ಪಾಪಗಳನ್ನು ಕ್ಷಮಿಸುತ್ತಾನೆ. ಆದರೆ ತಾನೆ ತಿಳಿಯ ಕೂಡದಿದ್ದರೂ, ದೇವರು ಚನ್ನಾಗಿ ತಿಳಿಯುವ ಮಾನಸಾಂತರವಿಲ್ಲದವನಿಗೆ ಪಾಪವನ್ನು ಹಿಡಿದು, ಆಜ್ಞೆನಿರ್ಣಯಕ್ಕೆ ಮುದ್ರೆ ಹಾಕುತ್ತಾನೆ. ಕ್ರಿಸ್ತನ ಹೆಸರಿನಲ್ಲಿ ಪಾಪಗಳನ್ನು ಹಿಡಿಯುವದೂ ಪಾಪಗಳನ್ನು ಬಿಡುವದೂ ಎಂಬ ಅಧಿಕಾರಕ್ಕೆ, ಪರಿಶುದ್ಧ ಬರಹದ ಸಾಮ್ಯರೂಪದ ಒಂದು ಮಾತಿನ ಪ್ರಕಾರ, ಬೀಗದ ಕೈಗಳ ಉದ್ಯೋಗವೆಂದ್ಹೇಳುತ್ತದೆ[೧]. ಈ ಅಧಿಕಾರವನ್ನು ಕ್ರಿಸ್ತನು ತಾನೆ ಅಪೊಸ್ತಲರಿಗೆ ಕೊಟ್ಟನು. ಆದರೆ ಅವರಲ್ಲಿ ಅವರ ಹಿಂದೆ ಬಂದವರಿಗೆ ಸಹಾ, ಅಂದರೆ, ಸಭೆಯ ಸಮಸ್ತ ನೇಮಕವಾದ ಸೇವಕರಿಗೆ ಆಡಿಳಿತೆಗೋಸ್ಕರ ಕೊಟ್ಟಿದ್ದಾನೆ.

೧) "ಪರಲೋಕರಾಜ್ಯದ ಬೀಗದ ಕೈಗಳನ್ನು ನಿನಗೆ (ಪೇತ್ರನಿಗೆ) ಕೊಡುವೆನು. ನೀನು ಭೂಮಿಯ ಮೇಲೆ ಕಟ್ಟುವಂಥಾದ್ದು ಪರಲೋಕದಲ್ಲಿ ಕಟ್ಟಲ್ಪಟ್ಟಿರುವದು. ಮತ್ತು ನೀನು ಭೂಮಿಯ ಮೇಲೆ ಬಿಚ್ಚುವಂಥಾದ್ದು ಪರಲೋಕದಲ್ಲಿ ಬಿಚ್ಚಲ್ಪಟ್ಟಿರುವದು." (ಮತ್ತಾ. ೧೬, ೧೯.) ಸಮ ನೋಡು: "ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ನೀವು ಭೂಮಿಯ ಮೇಲೆ ಕಟ್ಟುವವುಗಳೆಷ್ಟು ಪರಲೋಕದಲ್ಲಿ ಕಟ್ಟಲ್ಪಟ್ಟಿರುವವು, ಭೂಮಿಯ ಮೇಲೆ ಬಿಚ್ಚುವವುಗಳೆಷ್ಟು ಪರಲೋಕದಲ್ಲಿ ಬಿಚ್ಚಲ್ಪಟ್ಟಿರುವವು." (ಮತ್ತಾ. ೧೮, ೧೮.)

**೩೪೧.** ಯಾರ ಪಾಪವೂ ಮಾನಸಾಂತರವಿಲ್ಲದ ಮನಸ್ಸೂ ಪ್ರಕಟವಾಗಿದ್ದು[೧], ಸಭೆಗೆಲ್ಲಾ ಆತಂಕವಾಗಿರುತ್ತದೊ, ಅಂಥವರಿಗೆ, ಅವರನ್ನು ಕೆಲವು ಸರ್ತಿ ಎಚ್ಚರಿಸಿದ್ದು ವ್ಯ

ರ್ಥವಾದ ಮೇಲೆ, ಸಭೆಯು ತನ್ನ ಸೇವಕರಾದ ರಾಯಚಾರಿಗಳ ಪರಿಮುಖವಾಗಿ ಕ್ಷಮೆಯನ್ನೂ ಪ್ರಸಾದವನ್ನೂ ಕೊಡಲಿಕ್ಕೆ ಒಪ್ಪದೆ, ಮತ್ತೊಬ್ಬರಿಗೆ ಬೆದರಿಕೆಗಾಗಿಯೂ ಅವರಿಗೆ ಒಳ್ಳೇದಾಗುವ ಹಾಗೆಯೂ[೨] ದಿವ್ಯ ಕಟ್ಟಳೆಗೂ ಅಪೊಸ್ತೋಲಿಕ ಮರ್ಯಾದೆಗೂ ತಕ್ಕ ಪ್ರಕಾರ, ಅವರನ್ನು ಸಭೆಯಿಂದ ಹೊರಗೆ ಹಾಕ ತಕ್ಕದ್ದು. ಆದರೆ ಹೃದಯಪೂರ್ವಕವಾದ ಪ್ರೀತಿಯಿಂದಲೂ ಕರುಣೆಯಿಂದಲೂ ಅವರನ್ನು ಎಚ್ಚರಿಸುತ್ತಾ ಅವರಿಗೋಸ್ಕರ ಪ್ರಾರ್ಥಿಸುತ್ತಾ ಇರುವದನ್ನು ಬಿಡಲಾಗದು[೩]. — ಮತ್ತು ಅವರು ತಿದ್ದಲ್ಪಟ್ಟರೆ, ಅವರನ್ನು ತಿರಿಗಿ ಬಿಡುಗಡೆ ಮಾಡಿ, ಪ್ರಸಾದದ ಅನ್ಯೋನ್ಯಕ್ಕೆ ಕರಕೊಳ್ಳ ತಕ್ಕದ್ದು[೪].

೧) "ಕೆಲವು ಮನುಷ್ಯರ ಪಾಪಗಳು ಮುಂಚೆ ಪ್ರತ್ಯಕ್ಷವಾಗಿ, ಆಜ್ಞೆನಿರ್ಣಯಕ್ಕೆ ಮುಂಚೆ ಬರುತ್ತವೆ." (೧ ತಿಮೊ. ೫, ೨೪.)

೨) (ಮತ್ತಾ. ೧೮, ೧೫—೧೭. ತೀತ. ೩, ೧೦. ೧ ಕೊರಿ. ೫, ೧೧—೧೩.) (೨ ಥೆಸ್ಸ. ೩, ೧೪.) "ಅವನು ನಾಚಿಕೆ ಪಡುವ ಹಾಗೆ." (೧ ಕೊರಿ. ೫, ೩—೫.)

೩) "ಆದಾಗ್ಯೂ ಅವನನ್ನು ಶತ್ರುವೆಂದೆಣಿಸದೆ, ಸಹೋದರನಿಗೆಂದು, ಬುದ್ಧಿ ಹೇಳಿರಿ." (೨ ಥೆಸ್ಸ. ೩, ೧೫.)

೪) ೨ ಕೊರಿ. ೨, ೫—೧೧.

## ರಾತ್ರಿಭೋಜನದ ಪ್ರಸಾದ.
## (೫ನೆ ಮುಖ್ಯ ಭಾಗ.)

### ೧. ರಾತ್ರಿಭೋಜನದ ಪ್ರಸಾದವಂದರೇನು?

ನಮ್ಮ ಕರ್ತನಾದ ಯೇಸು ಕ್ರಿಸ್ತನ ಸತ್ಯ ಶರೀರವೂ ರಕ್ತವೂ ರೊಟ್ಟಿಯಿಂದಲೂ ದ್ರಾಕ್ಷೆರಸದಿಂದಲೂ ಕ್ರೈಸ್ತರಾದ ನಮಗೆ ಕ್ರಿಸ್ತನು ತಾನೆ ನೇಮಿಸಿದ ಪ್ರಕಾರ ತಿನ್ನಲಿಕ್ಕೂ ಕುಡಿಯಲಿಕ್ಕೂ ಶಿಕ್ಕುತ್ತದೆ.

### ಅದು ಎಲ್ಲಿ ಬರದದೆ?

ಈ ಪ್ರಕಾರ ಪರಿಶುದ್ಧ ಸುವಾರ್ತಿಕರಾದ ಮತ್ತಾಯ (೨೬, ೨೬ — ೨೮.) ಮಾರ್ಕ (೧೪, ೨೨ — ೨೪.) ಲೂಕ (೨೨, ೧೯. ೨೦.) ಮತ್ತು ಅಪೊಸ್ತಲನಾದ ಪೌಲನು (೧ ಕೊರಿ. ೧೧, ೨೩ - ೨೫.) ಬರದಿದ್ದಾರೆ. "ಕರ್ತನಾದ ಯೇಸುವು ಒಪ್ಪಿಸಲ್ಪಟ್ಟ ರಾತ್ರಿಯಲ್ಲಿ ರೊಟ್ಟಿಯನ್ನು ತೆಗದು ಕೊಂಡು, ಕೃತಜ್ಞಾಪಿಸಿ, ಮುರಿದು, ತನ್ನ ಶಿಷ್ಯರಿಗೆ ಕೊಟ್ಟು, ಹೇಳಿದ್ದೇನಂದರೆ: ತಕ್ಕೊಳ್ಳಿರಿ, ತಿನ್ನಿರಿ; ಇದು ನಿಮಗೋಸ್ಕರ ಕೊಡಲ್ಪಡುವ ನನ್ನ

ಶರೀರವಾಗಿದೆ. ನನ್ನನ್ನು ನೆನಸುವದಕ್ಕೆ ಇದನ್ನು ಮಾಡಿರಿ. ಅದೆ ಪ್ರಕಾರ ಭೋಜಿಸಿದ ಮೇಲೆ, ಕುಡಿಕೆಯನ್ನು ತೆಗದು ಕೊಂಡು, ಕೃತಜ್ಞಾಪಿಸಿ, ಅವರಿಗೆ ಕೊಟ್ಟು, ಹೇಳಿದ್ದೇನಂದರೆ: ತೆಗದು ಕೊಳ್ಳಿರಿ, ಅದರಿಂದ ಎಲ್ಲರೂ ಕುಡಿಯಿರಿ; ಈ ಕುಡಿಕೆಯು ಪಾಪಗಳ ಪರಿಹಾರಕ್ಕಾಗಿ ನಿಮಗೋಸ್ಕರ ಹೊಯ್ಯಲ್ಪಡುವ ನನ್ನ ರಕ್ತದಲ್ಲಿರುವ ಹೊಸ ಒಡಂಬಡಿಕೆಯಾಗಿದೆ. ನೀವು ಕುಡಿಯುವಷ್ಟು ಸಾರಿ ನನ್ನನ್ನು ನೆನಸುವದಕ್ಕೆ ಇದನ್ನು ಮಾಡಿರಿ."

**೩೪೨.** ಪರಿಶುದ್ಧ ರಾತ್ರಿಭೋಜನವು ಪ್ರಸಾದವಾಗಿರುತ್ತದೆ. ಹ್ಯಾಗಂದರೆ, ದೃಶ್ಯವಾದ ಇಂದ್ರಿಯ ಗ್ರಾಹ್ಯವಾದ ಗುರ್ತುಗಳಾಗಿರುವ ರೊಟ್ಟಿ ದ್ರಾಕ್ಷಿರಸಗಳ ಒಳಗೂ ಸಂಗಡಲೂ ಪರಿಮುಖವಾಗಿಯೂ ಅದು ಅದೃಶ್ಯವಾದ ಇಂದ್ರಿಯಪರವಾದ ಕೃಪಾವಸ್ತುಗಳಾಗಿರುವ ಕ್ರಿಸ್ತನ ಶರೀರ ರಕ್ತಗಳನ್ನು ಕೊಡುತ್ತದೆ.

ಪರಿಶಿ. ರಾತ್ರಿಭೋಜನವನ್ನು ನೇಮಿಸಿದ ರಾತ್ರಿ ಕಾಲಕ್ಕೆ ಅನುಕೂಲವಾಗಿ ಅದಕ್ಕೆ ಆ ಹೆಸರಾಯಿತು.

**೩೪೩.** ರಾತ್ರಿಭೋಜನದಲ್ಲಿ ಪರಿಶುದ್ಧಾತ್ಮದ ಪರಿಮುಖವಾಗಿ ನಮಗೆ ಕೊಡುವ ಕ್ರಿಸ್ತನ ಶರೀರವೂ ರಕ್ತವೂ ಇಂದ್ರಿಯ ಪರವಾದ ಅದೃಶ್ಯವಾದ ಪರಲೋಕದ ಕೃಪಾದಾನವಾಗಿರುತ್ತದೆ. ಹ್ಯಾಗಂದರೆ ಕ್ರಿಸ್ತನು ನಮ್ಮ ಹಾಗೆಯೆ ಭೂಸಂಚಾರದ ಸಮಯದಲ್ಲಿ ಪಾಪಮಾಂಸದ ಆಕಾರವಾಗಿ ಧರಿಸಿ ಕೊಂಡ ಮಾಂಸವೂ ರಕ್ತವೂ ಅಲ್ಲ; ಅದು ಮರಣದಲ್ಲಿ ಮುರಿಯಲ್ಪಟ್ಟು, ಉತ್ಥಾನದಲ್ಲಿ ಮಾರ್ಪಟ್ಟು, ದಿವಾರೋಹಣದಲ್ಲಿ ಆತನ ದಿವ್ಯ ಮಹಿಮೆಯಲ್ಲಿ ಪೂರ್ಣ ಪಾಲು ಹೊಂದಿದ ದೇವರ ಬಲ ಪಾರ್ಶ್ವದಲ್ಲಿ ನಿತ್ಯವಾಗಿ ಕೂತು ಕೊಳ್ಳುವ ಮಾಂಸವೂ ರಕ್ತವೂ ಆಗಿರುತ್ತದೆ.

**೩೪೪.** ರಾತ್ರಿಭೋಜನದ ಮೊದಲು ಸ್ನಾನವಿರ ಬೇಕು. ಸ್ವಾಭಾವಿಕ ಮನುಷ್ಯನಿಗೆ ಭೂಮಿಯ ಆಹಾರವು ಹ್ಯಾಗೊ, ಹಾಗೆ ನೀರಿನಿಂದಲೂ ನೀರು ಆತ್ಮದಿಂದಲೂ ಆಗುವ ಸ್ನಾನದಲ್ಲಿ ಹುಟ್ಟಿದ ಹೊಸ ಮನುಷ್ಯನಿಗೆ ಪರಲೋಕದ ಆಹಾರವು ಬೇಕು. ಅಂಥಾ ಆಹಾರವು ರಾತ್ರಿಭೋಜನದಿಂದ ಶಿಕ್ಕುತ್ತದೆ. ಹ್ಯಾಗೆ ತಾಯಿಯು ತನ್ನ ಮಗುವನ್ನು ಮೊಲೆ ಹಾಲಿನಲ್ಲಿ ತನ್ನ ಸ್ವಂತ ರಕ್ತ ಮಾಂಸದಿಂದ ಪೋಷಿಸುತ್ತಾಳೊ, ಹಾಗೆಯೆ ತಾಯಿ ಪ್ರೀತಿಗಿಂತ ಬಲವಾಗಿರುವ ನಿತ್ಯಪ್ರೀತಿಯುಳ್ಳ ರಕ್ಷಕನು (ಎಶಾ. ೪೯, ೧೫.) ನೀರಿನಿಂದಲೂ ಆತ್ಮದಿಂದಲೂ (ಯೋಹಾ. ೩, ೫.) ಹೊಸತಾಗಿ ಹುಟ್ಟಿದ ಎಳೆ ಕೂಸುಗಳಂತೆ (೧ ಪೇತ್ರ. ೨, ೨.) ತನ್ನ ವಿಶ್ವಾಸಿಗಳನ್ನು, ಅವರು ಕ್ರಿಸ್ತನ ಸಂಪೂರ್ಣತೆಯ

ನೀಳದ ಪ್ರಮಾಣಕ್ಕೆ ಶೇರುವ ಹಾಗೆ, (ಎಫೆ. ೪, ೧೩.) ತನ್ನ ಸ್ವಂತ ರಕ್ತ ಮಾಂಸದಿಂದ ಪೋಷಿಸುತ್ತಾನೆ. ಹ್ಯಾಗೆ ಕ್ರಿಸ್ತನು ಎಲ್ಲಾದರಲ್ಲಿ ನಮ್ಮ ಹಾಗೆ ಆಗುವದಕ್ಕೋಸ್ಕರ, ಪಾಪದಿಂದಲೂ ಶಾಪದಿಂದಲೂ ಹಾಳಾದ ನಮ್ಮ ಮಾಂಸ ರಕ್ತವನ್ನು ಧರಿಸಿದನೊ, ಹಾಗೆಯೆ ಆತನು ಪಾಪಮಾಂಸದ ಆಕಾರವನ್ನು ಜೈಸಿ ನಿತ್ಯ ಮಹಿಮೆಗೆ ಮಾರ್ಪಡಿಸಿದ ತರುವಾಯ, ಆತನ ಮಾಂಸ ರಕ್ತವನ್ನು ಎಲ್ಲಾದರಲ್ಲಿ ಆತನ ಹಾಗೆಯೆ ಆಗುವದಕ್ಕೋಸ್ಕರ, ನಾವು ಸಹಾ ತಕ್ಕೊಳ್ಳ ಬೇಕು.

**೨೪೫.** ಆದರೆ ನಾವು ಈ ಇಂದ್ರಿಯ ಪರವಾದ ಆಹಾರವನ್ನು ನಮ್ಮ ಈಗಿನ ಇಂದ್ರಿಯಾಧೀನವಾದ ಸ್ವಭಾವದಲ್ಲಿ ಪೋಷಣವಾಗಿ, ಅದರಲ್ಲಿರುವ ಹೊಸ ಮನುಷ್ಯನಿಗೋಸ್ಕರ ಭದ್ರವಾಗಿಯೂ ಭರವಸಯೋಗ್ಯವಾಗಿಯೂ ತಕ್ಕೊಳ್ಳುವ ಹಾಗೆ, ಆತನು ತನ್ನ ಜ್ಞಾನ ಕೃಪೆಗಳ ಪ್ರಕಾರ, ಎಲ್ಲಾ ಭೂಮ್ಯಾಹಾರದ ಮುಖ್ಯ ವಸ್ತುಗಳಾಗಿರುವ ರೊಟ್ಟಿಯಲ್ಲಿಯೂ ದ್ರಾಕ್ಷೆರಸದಲ್ಲಿಯೂ ಅದನ್ನು ಇಟ್ಟು ಇದ್ದಾನೆ. ಭೂಸಂಬಂಧವಾದ್ದಕ್ಕೆ ಪರಲೋಕದ್ದು ಆಶ್ಚರ್ಯ ರೀತಿಯಲ್ಲಿ ಕೂಡುವದರಿಂದ, ರೊಟ್ಟಿಯಲ್ಲಿಯೂ ದ್ರಾಕ್ಷೆರಸದಲ್ಲಿಯೂ ಹೊರಗಿನ ಆಕಾರ ವರ್ಣ ರುಚಿಗಳು ಮಾತ್ರ ಹೊರ್ತು ಬೇರೇನೂ ಉಳಿಯದ ಹಾಗೆ, ಆ ರೊಟ್ಟಿಯೂ ದ್ರಾಕ್ಷೆರಸವೂ ಶರೀರವೂ ರಕ್ತವೂ ಆಗಿ ಹೋಗುವದಿಲ್ಲಾ. ರೊಟ್ಟಿಯು ನಿಜವಾಗಿಯೂ ಯಥಾರ್ಥವಾಗಿಯೂ ರೊಟ್ಟಿಯಾಗಿಯೆ ಇರುತ್ತದೆ; ದ್ರಾಕ್ಷೆರಸವು ಹೊರಗಿನ ಮತ್ತು ಒಳಗಿನ ಗುಣಗಳ ಪ್ರಕಾರ ದ್ರಾಕ್ಷೆರಸವೆ ಆಗಿರುತ್ತದೆ.

"ನಾವು ಆಶೀರ್ವದಿಸುವ ಆಶೀರ್ವಾದದ ಪಾತ್ರೆಯು ಕ್ರಿಸ್ತನ ರಕ್ತದ ಅನ್ಯೋನ್ಯವಲ್ಲವೋ? ನಾವು ಮುರಿಯುವ ರೊಟ್ಟಿಯು ಕ್ರಿಸ್ತನ ಶರೀರದ ಅನ್ಯೋನ್ಯವಲ್ಲವೋ?" (೧ ಕೊರಿ. ೧೦, ೧೬.)

ಪರಿಶಿ. ಕ್ರಿಸ್ತನ ಶರೀರ ರಕ್ತಗಳಿಗೂ ರಾತ್ರಿಭೋಜನದ ರೊಟ್ಟಿ ದ್ರಾಕ್ಷೆರಸಗಳಿಗೂ ಪರಸ್ಪರ ಸಂಬಂಧವೇನೆಂಬ ವಿಷಯದಲ್ಲಿ ನಾಲ್ಕು ಮಾತುಗಳುಂಟು. ರೋಮಿನಾಯ ಸಭೆಯು ಬೋಧಿಸುವದೇನಂದರೆ: ರೊಟ್ಟಿಯೂ ದ್ರಾಕ್ಷೆರಸವೂ ಆಶೀರ್ವಾದದಿಂದ ಕ್ರಿಸ್ತನ ಶರೀರವೂ ರಕ್ತವೂ ಆಗಿ ಮಾರ್ಪಡುತ್ತದೆ. ಈ ಪ್ರಕಾರ ಉಳಿಯುವದೇನಂದರೆ, ಶರೀರವೂ ರಕ್ತವೂ ಮಾತ್ರವೆ. ಈ ಮತಕ್ಕೆ ಅತ್ಯಂತ ವಿರೋಧವಾಗಿ, ಜ್ವಿಂಗ್ಲಿ ಬೋಧಿಸುವದೇನಂದರೆ: ರೊಟ್ಟಿಯೂ ದ್ರಾಕ್ಷೆರಸವೂ ಕ್ರಿಸ್ತನ ಶರೀರ ರಕ್ತಗಳ ಬರೇ ಗುರ್ತಾಗಿರುತ್ತವೆ. ರೊಟ್ಟಿಯೂ ದ್ರಾಕ್ಷೆರಸವೂ ಮೊದಲಿದ್ದ ಹಾಗೆ ರೊಟ್ಟಿಯೂ ದ್ರಾಕ್ಷೆರಸವೂ ಆಗಿರುತ್ತವೆ, ಕ್ರಿಸ್ತನ ಶರೀರ ರಕ್ತವನ್ನು ಸೂಚಿಸಿ, ಅದನ್ನು ನೆನಪಿಗೆ ತರುತ್ತವೆ ಮಾತ್ರವೆ. ಈ ಪ್ರಕಾರ ಆಚಾರ ಸಹಿತವಾಗಿಯೂ ಅಭಿಪ್ರಾಯ ಉಳ್ಳದ್ದಾಗಿಯೂ ಇರುವ ಕರ್ಮದಿಂದ ಎತ್ತಲ್ಪಡುವ ಮತ್ತು ವಿಶ್ವಾಸವನ್ನು ಬಲವಾಗಿ ಎಚ್ಚರಿಸುವ ನೆನಪು ಮಾತ್ರದಲ್ಲಿ

ಯೆ ಪ್ರಸಾದದ ಪ್ರಯೋಜನವೂ ಆಶೀರ್ವಾದವೂ ಉಂಟು ಎಂತಾ. ಆದರೆ ರೋಮಿನಾಯ ಮತಕ್ಕೂ ಜ್ವಿಂಗ್ಲಿಯ ಮತಕ್ಕೂ ಮೇಲೆ ಹೇಳಿದ ವಾಕ್ಯವು (೧ ಕೊರಿ. ೧೦, ೧೬.) ವಿರೋಧವಾಗಿರುತ್ತದೆ. ಹ್ಯಾಗಂದರೆ, ಎಲ್ಲಿ ರೊಟ್ಟಿ ಶರೀರಗಳ ಅನ್ಯೋನ್ಯವೂ ದ್ರಾಕ್ಷೆರಸ ರಕ್ತಗಳ ಅನ್ಯೋನ್ಯವೂ ಉಂಟಾಗುತ್ತದೊ, ಅಲ್ಲಿ ಉಭಯ ವಸ್ತುಗಳು ಇದ್ದು ಐಕ್ಯವಾಗ ಬೇಕು. ಜ್ವಿಂಗ್ಲಿಯ ಮತಕ್ಕೆ (೧ ಕೊರಿ. ೧೧, ೨೭—೨೯.) ಪೂರ್ಣ ವಿರೋಧ; ಇಲ್ಲಿ ಹೇಳುವ ಪ್ರಕಾರ, ಅಯೋಗ್ಯವಾಗಿ ತಿನ್ನುವವನು ಕರ್ತನ ಶರೀರಕ್ಕೂ ರಕ್ತಕ್ಕೂ ಅಪರಾಧಿಯಾಗಿರುತ್ತಾನೆ. ಮತ್ತು ಕರ್ತನ ಶರೀರವನ್ನು ವಿಶೇಷ ಮಾಡದೆ ಇರುವದರಿಂದ ತನಗೆ ತಾನೆ ಆಜ್ಞೆನಿರ್ಣಯವನ್ನು ತಿಂದು ಕುಡಿಯುತ್ತಾನೆ. ಹಾಗಾದರೆ ಕರ್ತನು ಅದರಲ್ಲಿ ಸಂಗಡ ಇರ ಬೇಕು. ಅದರ ಹೊರ್ತು, ಜ್ವಿಂಗ್ಲಿಯ ಮತವು ಸಮವಾಗಿದ್ದರೆ, ರಾತ್ರಿಭೋಜನವು ಅದರ ಅವಶ್ಯತ್ವವನ್ನು ಕಳ ಕೊಂಡೀತು. ಅಂಥಾ ನೆನವೂ ವಿಶ್ವಾಸದ ಬಲ ಪಡಿಸೋಣವೂ ಪ್ರಸಾದವಿಲ್ಲದೆ ಬಹುವಿಧವಾಗಿ ಅಷ್ಟೆ ಬಲವಾಗಿ ಆಗ ಬಹುದು. ಈ ಮತಗಳಿಗೆ ಮಧ್ಯದಲ್ಲಿ ಸುವಾರ್ತಾನುಸಾರವಾದ ಬೋಧನೆಯು ಬರುತ್ತದೆ. ಇದರ ಪ್ರಕಾರ ಎರಡೂ, ನಿಜವಾಗಿಯೂ ಯಥಾರ್ಥವಾಗಿಯೂ ಪರಲೋಕದ್ದು ಭೂಪದಾರ್ಥದ ಒಳಗೂ ಸಂಗಡಲೂ ಪರಿಮುಖವಾಗಿಯೂ ಇದ್ದು, ತಕ್ಕೊಳ್ಳಲ್ಪಡುತ್ತದೆ. ಲುಥರನ ಬೋಧನೆಗೂ ಜ್ವಿಂಗ್ಲಿಯ ಬೋಧನೆಗೂ ಮಧ್ಯದಲ್ಲಿ ಕಲ್ವೀನನ ಬೋಧನೆ ಬರುತ್ತದೆ. ಇದರ ಪ್ರಕಾರ ಕರ್ತನ ಮಹಿಮೆ ಪಟ್ಟ ಶರೀರವು ರಾತ್ರಿಭೋಜನದಲ್ಲಿ ಯತ್ನೈಸುವಂಥಾದ್ದಾಗಿ ಬಲವಾಗಿ ಇರುತ್ತದೆಂಬದು ಸರಿ, ಆದರೆ ರೊಟ್ಟಿ ದ್ರಾಕ್ಷೆರಸಗಳ ಒಳಗೂ ಸಂಗಡಲೂ ಪರಿಮುಖವಾಗಿಯೂ ಅಲ್ಲ; ಅವುಗಳ ಸಮೀಪವಾಗಿಯೂ ಅವುಗಳ ಹೊರ್ತಾಗಿಯೂ ಇರುತ್ತದೆ. ಆ ಪ್ರಕಾರ ರೊಟ್ಟಿ ದ್ರಾಕ್ಷೆರಸಗಳು ಮುಂಗುರ್ತುಗಳೂ ಮುಂಗಡವೂ ಆಗಿರುತ್ತವೆ ಹೊರ್ತು, ಇಂದ್ರಿಯಪರವಾದ ಪರಲೋಕದ ಆಹಾರದ ಅನುಭವಕ್ಕೆ ಕರಣವಲ್ಲಾ. ಶರೀರದ ಬಾಯಿ ರೊಟ್ಟಿ ದ್ರಾಕ್ಷೆರಸ ತಕ್ಕೊಳ್ಳುವಾಗ್ಯೆ, ಆತ್ಮಿಕ ಬಾಯಿಯು, ಅಂದರೆ, ವಿಶ್ವಾಸವು ಪರಲೋಕದ ಆಹಾರವನ್ನು ತಕ್ಕೊಳ್ಳುತ್ತದೆ. ಆದರೆ ಅವಿಶ್ವಾಸಿಯು ರೊಟ್ಟಿಯನ್ನೂ ದ್ರಾಕ್ಷೆರಸವನ್ನೂ ಮಾತ್ರವೆ ತಕ್ಕೊಳ್ಳುತ್ತಾನೆ.

೨. ಹಾಗೆ ತಿನ್ನುವದರಿಂದಲೂ ಕುಡಿಯುವದರಿಂದಲೂ ಪ್ರಯೋಜನವೇನು?

“ನಿಮಗೋಸ್ಕರ ಕೊಡಲ್ಪಟ್ಟದೆ, ಮತ್ತು ಪಾಪಗಳ ಪರಿಹಾರಕ್ಕೋಸ್ಕರ ಹೊಯ್ಯಲ್ಪಟ್ಟದೆ” ಎಂಬ ವಾಕ್ಯದಿಂದ ಅದರ ಪ್ರಯೋಜನವು ನಮಗೆ ಕಾಣುತ್ತದೆ. ಏನಂದರೆ, ಈ ಪ್ರಸಾದದಲ್ಲಿ ನಮಗೆ ಪಾಪಗಳ ಪರಿಹಾರವೂ ಜೀವವೂ ಭಾಗ್ಯವೂ ಅಂಥಾ ವಾಕ್ಯದಿಂದ ಕೊಡಲ್ಪಡುತ್ತದೆ. ಯಾಕಂದರೆ, ಎಲ್ಲಿ ಪಾಪಗಳ ಪರಿಹಾರ ಉಂಟೊ, ಅಲ್ಲಿ ಜೀವವೂ ಭಾಗ್ಯವೂ ಉಂಟು.

**೩೪೬.** ರಾತ್ರಿಭೋಜನದಲ್ಲಿ ನಿಜವಾಗಿಯೂ ಯಥಾರ್ಥವಾಗಿಯೂ ಕ್ರಿಸ್ತನ, ನಮಗೋಸ್ಕರ ಮರಣದಲ್ಲಿ ಮುರಿಯಲ್ಪಟ್ಟ, ಉತ್ಥಾನದಲ್ಲಿ ಮಾರ್ಪಟ್ಟ, ದಿವಾರೋಹಣದಲ್ಲಿ ಎತ್ತಿಸಲ್ಪಟ್ಟ (ಈ ಪ್ರಕಾರ ಎಲ್ಲಾ ವಿಮೋಚನೆಯ ಫಲವನ್ನೂ ಮುದ್ರೆಯನ್ನೂ ತನ್ನಲ್ಲಿ ಧರಿಸುವ) ಶರೀರತ್ವವು ಆಹಾರಕ್ಕೋಸ್ಕರ ನಮ್ಮ ಒಳ ಮನುಷ್ಯನಿಗೆ ಕೊಡಲ್ಪಡುವಾಗ, ಅದು ಆತನ ಜೀವ ಶ್ರಮಗಳ, ಆತನ ಬಲಿ ಮರಣ ಉತ್ಥಾನಗಳ, ಆತನ ದಿವಾರೋಹಣ ಬಲದ ಬಲಪಾರ್ಶ್ವದಲ್ಲಿ ಕೂತು ಕೊಳ್ಳೋಣಗಳ ಎಲ್ಲಾ ಪುಣ್ಯಗಳನ್ನೂ ಬಲಗಳನ್ನೂ ಕಾರ್ಯರೂಪವಾಗಿ (ಗುರ್ತಾಗಿ ಮಾತ್ರವಲ್ಲಾ) ಎದುರು ಮಾಡಿ ಕೊಳ್ಳುವದಕ್ಕೂ[೧], ಸ್ವೀಕರಿಸುವದಕ್ಕೂ[೨] ಉಪಯೋಗವಾಗುತ್ತದೆ. ಆತನ ಶರೀರವನ್ನೂ ರಕ್ತವನ್ನೂ ಬಹಳ ಸರ್ತಿ ತಕ್ಕೊಳ್ಳದೆ ಇರದಿದ್ದರೆ, ಆ ವರಗಳಲ್ಲಿ ಪಾಲುಗಾರರಾಗಲಿಕ್ಕೂ ನೆಲೆಯಾಗಿರುವದಕ್ಕೂ ಕೂಡದು[೩].

೧) “ನನ್ನನ್ನು ಜ್ಞಾಪಕ ಮಾಡಿ ಕೊಳ್ಳುವದಕ್ಕೋಸ್ಕರ ಇದನ್ನು ಮಾಡಿರಿ.” (ಲೂಕ. ೨೨, ೧೯.) “ಯಾಕಂದರೆ ಎಷ್ಟು ಸಾರಿ ಈ ರೊಟ್ಟಿಯನ್ನು ತಿಂದು, ಈ ಪಾತ್ರೆಯಲ್ಲಿ ಕುಡಿಯುವಿರೋ, ಕರ್ತನ ಮರಣವನ್ನು, ಅವನು ಬರುವ ಮಟ್ಟಿಗೂ, ತೋರಿಸುತ್ತೀರಿ.” (೧ ಕೊರಿ. ೧೧, ೨೬.)

೨) “ತಕ್ಕೊಳ್ಳಿರಿ; ತಿನ್ನಿರಿ; ಇದು ನನ್ನ ಶರೀರವಾಗಿದೆ, ಅಂದನು. ಆ ಮೇಲೆ ಪಾತ್ರೆಯನ್ನು ತೆಗೆದು ಕೊಂಡು, ಸ್ತೋತ್ರ ಮಾಡಿ, ಅವರಿಗೆ ಕೊಟ್ಟು, ಇದರಲ್ಲಿ ನೀವೆಲ್ಲರು ಕುಡಿಯಿರಿ; ಯಾಕಂದರೆ ಇದು ಅನೇಕರಿಗೋಸ್ಕರ ಪಾಪಪರಿಹಾರಕ್ಕಾಗಿ ಹೊಯ್ಯಲ್ಪಡುವ ಹೊಸ ಒಡಂಬಡಿಕೆಯ ರಕ್ತವಾದ ನನ್ನ ರಕ್ತವಾಗಿದೆ.” (ಮತ್ತಾ. ೨೬, ೨೬—೨೮.)

೩) “ನಿಶ್ಚಯವಾಗಿ ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ನೀವು ಮನುಷ್ಯನ ಮಗನ ಮಾಂಸವನ್ನು ತಿನ್ನದೆ, ಅವನ ರಕ್ತವನ್ನು ಕುಡಿಯದೆ ಹೋದರೆ, ನಿಮ್ಮೊಳಗೆ ಜೀವವು ಇಲ್ಲದವರಾಗಿದ್ದೀರಿ; ನನ್ನ ಮಾಂಸವನ್ನು ತಿಂದು, ನನ್ನ ರಕ್ತವನ್ನು ಕುಡಿಯುವವನಿಗೆ ನಿತ್ಯಜೀವವುಂಟು; ಮತ್ತು ನಾನು ಅವನನ್ನು ಕಡೇ ದಿನದಲ್ಲಿ ಎಬ್ಬಿಸುವೆನು. ಯಾಕಂದರೆ ನನ್ನ ಮಾಂಸವು ನಿಜವಾಗಿ ಆಹಾರವಾಗಿದೆ, ನನ್ನ ರಕ್ತವು ನಿಜವಾಗಿ ಪಾನವಾಗಿದೆ. (ಯೋಹಾ. ೬, ೫೩—೫೫.)

ಪರಿಶಿ. ಕ್ರೈಸ್ತನು ಎಷ್ಟು ಸಾರಿ ಪರಿಶುದ್ಧ ರಾತ್ರಿಭೋಜನಕ್ಕೆ ಹೋಗ ಬೇಕೆಂಬದನ್ನು ನಿಶ್ಚಯಿಸಿ ವಿಧಿಸ ಕೂಡದು. ಒಬ್ಬೊಬ್ಬನು ತನ್ನ ಅಗತ್ಯದ ಪ್ರಕಾರ ಮಾಡ ಬೇಕು. ಆದರೆ ಆಹಾರ ತಕ್ಕೊಳ್ಳುವದು ಅಗತ್ಯ. ಎಲ್ಲಿ ಆಹಾರದ ಅಪೇಕ್ಷೆ ಇಲ್ಲವೊ, ಅಥವಾ ಎಲ್ಲಿ ಸ್ವಲ್ಪ ಮಾತ್ರವೆ ಉಂಟೊ, ಅಲ್ಲಿ ರೋಗ ಉಂಟೆಂಬದಕ್ಕೆ ಗುರ್ತಾಗಿರುತ್ತದೆಂಬದನ್ನು ಮರಿಯ ಬಾರದು. ಮೊದಲನೆ ಕ್ರೈಸ್ತರು ಆರಂಭದಲ್ಲಿ ಅನುದಿನವೂ ಮತ್ತು

ಪ್ರತಿ ಆದಿತ್ಯವಾರವೂ ತಕ್ಕೊಂಡರು. ಆದರೆ ಯಾರಾದರೂ, ಸಭೆಗೆ ನಡವಳಿಕೆಯಾಗಿರದ ಕಾಲದಲ್ಲಿ ರಾತ್ರಿಭೋಜನವನ್ನು ಅನೇಕ ಸಾರಿ ತಕ್ಕೊಳ್ಳುವದರಿಂದ, ಪ್ರಸಾದ ಘನವೂ ಪರಿಶುದ್ಧತ್ವವೂ ಕಡಿಮೆಯಾದೀತೆಂದೂ, ಅದು ಸಾಧಾರಣ ಕೆಲಸವಾದೀತೆಂದೂ ಹೇಳಿದರೆ, ಅದು ತನಗೆ ತಾನೆ ಮಾಡುವ ಭಯಂಕರವಾದ ದುಷ್ಟ ಮೋಸವಾಗಿರುತ್ತದೆ.

**೩೪೭.** ರಾತ್ರಿಭೋಜನದ ಪ್ರಸಾದವು ರಕ್ಷಕನ ಸಂಗಡ ನಮ್ಮನ್ನು ಅತ್ಯಂತವಾಗಿಯೂ ಪರಮ ನಿಜವಾಗಿಯೂ ಜೀವದ ಐಕ್ಯದಲ್ಲಿಡುತ್ತಿರಲಾಗಿ, ಅದು ಅದೆ ಸಮಯದಲ್ಲಿ ವಿಶ್ವಾಸಿಗಳ ಅನ್ಯೋನ್ಯವನ್ನು ಅವರೊಳಗೆ ಭದ್ರ ಪಡಿಸಿ ಎಚ್ಚರಿಸುವ ಕರಣವಾಗಿ ಸಹಾ ಇರುತ್ತದೆ೧). ಮತ್ತು ಒಂದೇ ಸಮಯದಲ್ಲಿಯೂ ಒಂದೇ ಸ್ಥಳದಲ್ಲಿಯೂ ಪರಿಶುದ್ಧ ಭೋಜನವನ್ನು ತಕ್ಕೊಳ್ಳುವ ವಿಶ್ವಾಸಿಗಳ ಐಕ್ಯವನ್ನು ಮಾತ್ರವಲ್ಲ, ಸಮೀಪದಲ್ಲಿಯೂ ದೂರದಲ್ಲಿಯೂ ಇರುವ ಕ್ರಿಸ್ತನ ಸಮಸ್ತ ಅಂಗಗಳ ಐಕ್ಯವನ್ನು ಸಹಾ ಉಂಟು ಮಾಡುತ್ತದೆ. ಆದಕಾರಣ ಅನುಪತ್ಯಕ್ಕಾಗಿ (ಒಂದು ವೇಳೆ ಸ್ವಸ್ಥವಿಲ್ಲದವನ ಬಳಿಯ) ಒಬ್ಬನೇ ರಾತ್ರಿಭೋಜನವನ್ನು ತಕ್ಕೊಂಡರೂ, ಅದು ಪೂರ್ಣ ಪ್ರಸಾದವಾಗಿಯೂ ಯಥಾರ್ಥ ಅನ್ಯೋನ್ಯವಾಗಿಯೂ ಇರುತ್ತದೆ.

೧) "ಯಾಕಂದರೆ ಅನೇಕರಾದ ನಾವು ಒಂದೇ ರೊಟ್ಟಿಯೂ, ಒಂದೇ ಶರೀರವೂ ಆಗಿದ್ದೇವೆ. ಯಾಕಂದರೆ ಎಲ್ಲರು ಆ ಒಂದೇ ರೊಟ್ಟಿಯಲ್ಲಿ ಪಾಲುಗಾರರಾಗಿದ್ದೇವೆ." (೧ಕೊರಿ. ೧೦, ೧೭.)

### ೩. ಶರೀರದ ಪ್ರಕಾರ ತಿನ್ನುವದರಿಂದಲೂ ಕುಡಿಯುವದರಿಂದಲೂ ಅಂಥಾ ದೊಡ್ಡ ಕಾರ್ಯವಾಗುವದು ಹ್ಯಾಗೆ?

ತಿನ್ನುವದರಿಂದಲೂ ಕುಡಿಯುವದರಿಂದಲೂ ಆಗಲಾರದೆಂಬದು ಸರಿ. ಆದರೆ "ನಿಮಗೋಸ್ಕರ ಕೊಡಲ್ಪಟ್ಟದೆ, ಪಾಪಗಳ ಪರಿಹಾರಕ್ಕೋಸ್ಕರ ಹೊಯ್ಯಲ್ಪಟ್ಟದೆ" ಎಂಬ ವಾಕ್ಯಗಳಿಂದ ಆಗುತ್ತದೆ. ಶರೀರದ ಪ್ರಕಾರ ತಿನ್ನುವದೂ ಕುಡಿಯುವದೂ ಹೊರ್ತಾಗಿ, ಆ ವಾಕ್ಯವು ಪ್ರಸಾದಕ್ಕೆ ಮುಖ್ಯವಾಗಿರುತ್ತದೆ. ಮತ್ತು ಯಾರು ಆ ವಾಕ್ಯವನ್ನು ನಂಬುತ್ತಾರೊ, ಅವರಿಗೆ ಹೇಳಿ ಉಚ್ಚರಿಸಿದ ಪ್ರಕಾರ, ಪಾಪಗಳ ಪರಿಹಾರ ಶಿಕ್ಕುತ್ತದೆ.

**೩೪೮.** ಮನುಷ್ಯನ ವಿಶ್ವಾಸವು ಕ್ರಿಸ್ತನ ಶರೀರವನ್ನೂ ರಕ್ತವನ್ನೂ ಆಶೀರ್ವಾದಕರವಾಗಿ ಹೊಂದುವದಕ್ಕೆ ಔಪಾಧಿಕವಾಗಿರುತ್ತದೆ. ಆದರೆ ಅವಿಶ್ವಾಸಿಯೂ ಅಲಕ್ಷಿಸುವ

ವನೂ ಸಹಾ ಶರೀರಕ್ಕೂ ರಕ್ತಕ್ಕೂ ಅಪರಾಧಿಯಾಗಿ, ತನಗೆ ಆಜ್ಞೆನಿರ್ಣಯವನ್ನೂ ಶಿಕ್ಷೆನಿರ್ಣಯವನ್ನೂ ತಕ್ಕೊಳ್ಳುತ್ತಾನೆ[೧]; ಮನುಷ್ಯವಿಶ್ವಾಸವಲ್ಲ, ನೇಮಕದ ಮತ್ತು ವಾಗ್ದತ್ತದ ವಾಕ್ಯದಿಂದ ಯತ್ನಯಿಸುವ ದೇವರ ಶಕ್ತಿಯು ಪ್ರಸಾದವನ್ನುಂಟು ಮಾಡುತ್ತದೆ.

೧) "ಯಾವನು ಅಯೋಗ್ಯವಾಗಿ ಈ ರೊಟ್ಟಿಯನ್ನು ತಿನ್ನುವನೋ, ಇಲ್ಲವೆ ಕರ್ತನ ಪಾತ್ರೆಯಲ್ಲಿ ಕುಡಿಯುವನೋ, ಅವನು ಕರ್ತನ ಶರೀರಕ್ಕೂ ರಕ್ತಕ್ಕೂ ಅಪರಾಧಿಯಾಗಿರುವನು." (೧ ಕೊರಿ. ೧೧, ೨೭.) "ಯಾಕಂದರೆ ಅಯೋಗ್ಯವಾಗಿ ತಿಂದು ಕುಡಿಯುವವನು ಕರ್ತನ ಶರೀರವನ್ನು ವಿಶೇಷ ಮಾಡದೆ, ತನಗೆ ಆಜ್ಞೆನಿರ್ಣಯವನ್ನು ತಿಂದು ಕುಡಿಯುತ್ತಾನೆ." (೧ ಕೊರಿ. ೧೧, ೨೯.)

೪. ಯೋಗ್ಯವಾಗಿ ರಾತ್ರಿಭೋಜನವನ್ನು ಆಚರಿಸಲಿಕ್ಕೆ ಏನು ಮಾಡ ಬೇಕು?

ಉಪವಾಸ ಮಾಡಿ ಶರೀರವನ್ನು ಸಿದ್ಧ ಮಾಡಿ ಕೊಳ್ಳುವದು ಹೊರಗಿನ ಒಳ್ಳೇ ರೀತಿ ಸರಿ, ಆದರೆ "ನಿಮಗೋಸ್ಕರ ಪಾಪಗಳ ಪರಿಹಾರಕ್ಕಾಗಿ ಕೊಡಲ್ಪಟ್ಟದೆ, ಹೊಯ್ಯಲ್ಪಟ್ಟದೆ" ಎಂಬ ವಾಕ್ಯಗಳನ್ನು ವಿಶ್ವಾಸಿಸುವವನು, ಚನ್ನಾಗಿ ಯೋಗ್ಯವಾಗಿಯೂ ತಕ್ಕವನಾಗಿಯೂ ಇರುತ್ತಾನೆ. ಆದರೆ ಈ ವಾಕ್ಯವನ್ನು ನಂಬದೆ, ಅಥವಾ ಸಂಶಯವಾಗಿ ಇರುವವನು ತಕ್ಕವನಾಗಿರದೆ, ಅಯೋಗ್ಯವಾಗಿರುತ್ತಾನೆ. ಯಾಕಂದರೆ "ನಿಮಗೋಸ್ಕರ" ಎಂಬ ವಾಕ್ಯಕ್ಕೆ ವಿಶ್ವಾಸವುಳ್ಳ ಹೃದಯಗಳು ಮಾತ್ರವೆ ಸರಿ.

**೨೪೯.** ಹೊರಗಿನ ರೀತಿಯೂ ಸುಶಿಕ್ಷೆಯೂ ಮರ್ಯಾದೆಯೂ ಒಳ್ಳೇ ಕೆಲಸವಾಗಿರುತ್ತದೆ. ಅದರಿಂದ ಧ್ಯಾನವು ಚಂಚಲವಾಗದ ಹಾಗೆಯೂ, ಹೃದಯದ ಒಳ ಧ್ಯಾನವನ್ನು ಎಚ್ಚರಿಸುವದಕ್ಕೂ ಉಪಾಯವಾಗುವದು. ಮತ್ತು ಹೃದಯವು ಒಳಗೆ ಚದ್ರವಾಗಿ ಅಲಂಕರಿಸಲ್ಪಟ್ಟಿದ್ದರೆ, ಹೊರಗಿನಿಂದ ಸಹಾ ಪ್ರತ್ಯಕ್ಷವಾಗುವದು;— ಆದರೆ ಹೊರಗಿನಿಂದ ಮಾತ್ರವೆ ಸಿದ್ಧವಾಗಿ ಒಳಗಿನ ಸಿದ್ಧತ್ವ ಇಲ್ಲದಿದ್ದರೆ, ಅಲ್ಲಿ ಎಲ್ಲಾ ಡಂಭವೂ ಪ್ರಯೋಜನವಿಲ್ಲ; ಅದರಿಂದ ನೀತಿಯುಳ್ಳ ಆಜ್ಞೆನಿರ್ಣಯವು ಬರುವದು.

**೨೫೦.** ಪ್ರಸಾದಕ್ಕೋಸ್ಕರ ಅಂತರ್ಯದಲ್ಲಿ ಸಿದ್ಧ ಮಾಡಿ ಕೊಳ್ಳ ಬೇಕಾದರೆ, ಪೂರ್ಣ ಮನಸ್ಸನ್ನೂ ನಡತೆಯನ್ನೂ ದೇವರ ಪರಿಶುದ್ಧ ವಾಕ್ಯದ ಪ್ರಕಾರ ಯಥಾರ್ಥವಾಗಿಯೂ ಹೃದಯಪೂರ್ವಕವಾಗಿಯೂ ಪರಿಶೋಧಿಸ ಬೇಕು[೧]. ಈ ಪರಿಶೋಧನೆಯು ಮೂರು ವಿಧವಾಗಿರುತ್ತದೆ. ೧. ಮಾನಸಾಂತರವು ಯಥಾರ್ಥವಾಗಿಯೂ ಅಗಾಧವಾಗಿಯೂ ಉಂಟೋ, (**೨೭೨.**) ೨. ವಿಶ್ವಾಸವು ಸಂತೋಷತೆಯುಳ್ಳದ್ದಾಗಿಯೂ ಚರ

ವಸವುಳ್ಳದ್ದಾಗಿಯೂ ಅದೆಯೊ, (**೨೭೩.**) ಕಡೆಯಲ್ಲಿ ೩. ಹೊಸ ವಿಧೇಯತ್ವದ ಸಂಕಲ್ಪವು ಖಂಡಿತವಾಗಿಯೂ ಮನಃಪೂರ್ವಕವಾಗಿಯೂ ಇರುತ್ತದೊ, ಮತ್ತು ಸ್ವಂತ ಬಲದಲ್ಲಿ ಅಲ್ಲ, ಪಡ ಕೊಳ್ಳಲಿಕ್ಕಿರುವ ಪ್ರಸಾದದ ಬಲದಲ್ಲಿ ಆಧಾರಗೊಂಡದೆಯೊ, ಈ ಪ್ರಶ್ನೆಗಳನ್ನು ಕೇಳಿ ಕೊಳ್ಳ ಬೇಕು. ಇದನ್ನು ಮಾಡುವಾಗ್ಯೆ, ನಾವು ಮೊದಲು ಮಾಡಿದ ಅನ್ಯಾಯವನ್ನೆಲ್ಲಾ ಸಾಧ್ಯವಾಗುವಷ್ಟು ಸಮ ಮಾಡುವದೂ, ನ್ಯಾಯವಾದ್ದನ್ನು ಮಾಡದೆ ಬಿಟ್ಟದ್ದನ್ನು ಸಾಮರ್ಥ್ಯವಿದ್ದಷ್ಟು ಹಿಂದಣಿಂದ ಮಾಡಲಿಕ್ಕೆ ಪ್ರಯತ್ನ ಮಾಡುವದೂ ಅವಶ್ಯವೆಂಬದು ಸ್ವಾಭಾವಿಕ. ಪ್ರಸಾದವು ಅದರ ಮುಖ್ಯ ಸ್ವಭಾವಗುಣದ ಪ್ರಕಾರ ಕರ್ತನ ಸಂಗಡಲೂ ಆತನ ಶರೀರದ ಎಲ್ಲಾ ಅಂಗಗಳ ಸಂಗಡಲೂ ಐಕ್ಯದ ಮತ್ತು ಅನ್ಯೋನ್ಯದ ಭೋಜನವಾಗಿರುವದರಿಂದ (**೨೮೬.**) ಈ ವಿಷಯದಲ್ಲಿ ವಿಶೇಷ ಜಾಗ್ರತೆಯಾಗಿದ್ದು, ನಮಗೆ ಉಪದ್ರವ ಕೊಟ್ಟವರೆಲ್ಲರಿಗೆ ಹೃದಯಪೂರ್ವಕವಾಗಿ ಕ್ಷಮಿಸಿ, ನಾವು ಉಪದ್ರವ ಕೊಟ್ಟವರೆಲ್ಲರ ಹತ್ತರ ಯಥಾರ್ಥವಾಗಿಯೂ ದೈನ್ಯವಾಗಿಯೂ ಕ್ಷಮೆಯನ್ನು ಬೇಡಿ ಕೊಳ್ಳ ತಕ್ಕದ್ದು[೨]. — ಇದಲ್ಲದೆ ನಾವು ನಮ್ಮನ್ನು ಚನ್ನಾಗಿ ಪರಿಶೋಧಿಸಿ ಕೊಳ್ಳುವ ಹಾಗೆಯೂ, ಸಿದ್ಧ ಮಾಡಿ ಕೊಳ್ಳುವ ಹಾಗೆಯೂ, ಸಭೆಯು ಪ್ರತ್ಯೇಕವಾದ ಮತ್ತು ಪ್ರಕಟವಾದ ಅರಿಕೆಯಲ್ಲಿ ನಮಗೆ ಉಪಾಯವನ್ನೂ ಆಧಾರವನ್ನೂ ಸಹಾಯವನ್ನೂ ಕೊಡುತ್ತದೆ. (ಸಮ ನೋಡು **೩೩೯. ೩೪೦.**)

೧) "ಹಾಗಾದರೆ, ಮನುಷ್ಯನು ತನ್ನನ್ನು ಪರೀಕ್ಷಿಸಿ ಕೊಳ್ಳಲಿ. ಮತ್ತು ಹೀಗೆ ಆ ರೊಟ್ಟಿಯಲ್ಲಿ ತಿಂದು, ಆ ಪಾತ್ರೆಯಲ್ಲಿ ಕುಡಿಯಲಿ." (೧ ಕೊರಿ. ೧೧, ೨೮.)

೨) "ನಿನ್ನ ಕಾಣಿಕೆಯನ್ನು ಬಲಿಪೀಠಕ್ಕೆ ತರುವಾಗ, ನಿನ್ನ ಸಹೋದರನಿಗೆ ನಿನಗೆ ವಿರೋಧವಾಗಿ ಏನಾದರೂ ಉಂಟೆಂದು ಅಲ್ಲಿ ಜ್ಞಾಪಕ ಮಾಡಿ ಕೊಂಡರೆ, ನಿನ್ನ ಕಾಣಿಕೆಯನ್ನು ಅಲ್ಲಿ, ಬಲಿಪೀಠದ ಮುಂದೆ, ಬಿಟ್ಟು, ಹೋಗಿ, ಮೊದಲು ನಿನ್ನ ಸಹೋದರನ ಸಂಗಡ ಅನ್ಯೋನ್ಯವಾಗು; ಆ ಮೇಲೆ ಬಂದು, ನಿನ್ನ ಕಾಣಿಕೆಯನ್ನು ಅರ್ಪಿಸು." (ಮತ್ತಾ. ೫, ೨೩. ೨೪.)

ಸಮಾಪ್ತಿ.

